# ಪುಸ್ತಕದ ವಿಷಯವಾಗಿ

ತಾವರೆಕೆರೆ ನಂಜುಂಡಯ್ಯನವರು ಶ್ರೀಮಂತಿಕೆಗೆ ಎಷ್ಟು ಹೆಸರಾಗಿದ್ದರೋ ಜಿಪುಣತೆಗೂ ಅಷ್ಟೇ ಹೆಸರು ಪಡೆದಿದ್ದರು. ಅವರಿಗೆ ಇಬ್ಬರು ಗಂಡು ಮಕ್ಕಳು—ಸುಬ್ರಹ್ಮಣ್ಯ ಮತ್ತು ಶಂಕರ. ಸುಬ್ರಹ್ಮಣ್ಯ ಓದಿಗೆ ಶರಣು ಹೊಡೆದು, ಗೌರಿಯನ್ನು ಮದುವೆಯಾಗಿ ತಂದೆಯ ವ್ಯವಹಾರ ನೋಡತೊಡಗಿದ. ಶಂಕರ ಆಸಕ್ತಿಯಿಂದ ವಿದ್ಯಾಭ್ಯಾಸವನ್ನು ಮುಂದುವರಿಸಿದ. ತಂದೆ ಕಾಯಿಲೆಯಿಂದ ನರಳಿ, ಈ ಲೋಕವನ್ನು ತ್ಯಜಿಸಿದರು.

ಸುಬ್ರಹ್ಮಣ್ಯ ಮನೆಯ ಯಜಮಾನನಾದ. ವಿದ್ಯಾಭ್ಯಾಸ, ವಿವೇಚನೆ, ಸಂಸ್ಕೃತಿಗಳಿಲ್ಲದೆ ಅವನು ಭೀಮಾಚಾರಿಯ ಕೆಟ್ಟ ಸಹವಾಸದ ಬಲೆಗೆ ಸುಲಭವಾಗಿ ಬಿದ್ದು, ಪರಮಾನಂದಯ್ಯನ ಮಗಳು ಮಂಗಳೆಗೆ ಮನಸೋತು, ಅವಳಿಗಾಗಿ ಸಾವಿರಾರು ರೂಪಾಯಿ ಸುರಿದ. ಕೊನೆಗೆ ಭೀಮಾಚಾರಿಯ ಮೋಸಕ್ಕೆ ಬಲಿಯಾದ. ಸುಬ್ರಹ್ಮಣ್ಯನ ಈ ನಡತೆ ಊರಮಾತಾಯಿತು. ಗೌರಿ, ಸುಬ್ರಹ್ಮಣ್ಯನ ತಾಯಿ ಪಾರ್ವತಮ್ಮ ಇವನ್ನು ಕೇಳಿ ಕೊರಗತೊಡಗಿದರು. ಕಾಲೇಜಿಗೆ ಓದಲು ಹೋದ ಶಂಕರ ಶ್ರೀಧರನ ಸತ್ಸಹವಾಸದಿಂದ, ಪ್ರೊಫೆಸರ್ ಶಾಸ್ತ್ರಿಗಳ ಸದ್ಬೋಧನೆಯಿಂದ ಸುಸಂಸ್ಕೃತನಾಗಿ ಗೀತೆ ಉಪನಿಷತ್ತುಗಳನ್ನು ಅಭ್ಯಾಸ ಮಾಡಿದ. ಅಣ್ಣನನ್ನು ದಾರಿಗೆ ತರಲು, ನೊಂದ ಅತ್ತಿಗೆಯ ಮನಸ್ಸಿಗೆ ಶಾಂತಿಯನ್ನೀಯಲು ತನ್ನ ಕೈಲಾದ ಪ್ರಯತ್ನ ಮಾಡಿದ. ಆದರೆ ಹಿತ್ತಾಳೆ ಕಿವಿಯ ಸುಬ್ರಹ್ಮಣ್ಯ ಗೌರಿಯ ಶೀಲವನ್ನೂ ಶಂಕರನ ಶೀಲವನ್ನೂ ಶಂಕಿಸಿದ. ಶಂಕರ ಅಸ್ಥಿರನಾಗದೆ ಮನೆಯನ್ನು ಬಿಟ್ಟು ಹೊಸಪೇಟೆಗೆ ಹೋದ. ಅಲ್ಲಿ ಗೆಳೆಯ ಶಾಂತಪ್ಪನ ಸಹಾಯದಿಂದ, ಧಾರವಾಡದಲ್ಲಿ ಗೆಳೆಯ ಮನೋಹರರಾಯರ ನೆರವಿನಿಂದ ಜೀವಿಸತೊಡಗಿದ. ಆ ಎರಡು ನೆಲೆಗಳಲ್ಲಿಯೂ ಅವನಿಗೆ ಶಾಂತಿ ದೊರೆಯಲಿಲ್ಲ.

ಸುಬ್ರಹ್ಮಣ್ಯ ತಮ್ಮನ ಕಾಗದ ನೋಡಿ, ತಪ್ಪನ್ನು ಮನಗಂಡು ಪಶ್ಚಾತ್ತಾಪಪಟ್ಟ. ಆ ಅಗಲಿಕೆ ಮನೋರೋಗವಾಗಿ ಪರಿಣಮಿಸಿತು. ಶಂಕರ ಅಣ್ಣನ ಅಂತ್ಯದರ್ಶನ ಮಾಡಿದ. ಸುಬ್ರಹ್ಮಣ್ಯ ತಮ್ಮನ ಕ್ಷಮಾಪಣೆ ಕೇಳಿ ಕಣ್ಣು ಮುಚ್ಚಿದ. ಶಂಕರ ಬ್ರಹ್ಮಚಾರಿಯಾಗಿ ಸಂಸಾರದ ನಿರ್ವಹಣೆಯನ್ನೂ ಅಣ್ಣನ ಮಗ ರವಿಯ ಪೋಷಣೆಯನ್ನೂ ವಹಿಸಿಕೊಂಡ.

ಮೊದಲನೆಯ ಮುದ್ರಣ : ಡಿಸೆಂಬರ್ ೧೯೫೪



ಮುಖಚಿತ್ರ :
ಎಸ್. ರಮೇಶ್

ಬೆಲೆ ರೂ. ೧-೮-೦

ಮುದ್ರಕರು :
ಜಿ. ಎಚ್. ರಾಮರಾವ್, ಬಿ. ಎಸ್‌ಸಿ.
ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್
ಮೈಸೂರು

# ಮುನ್ನುಡಿ

ಯಾವನೋ ಒಬ್ಬ ಸಾಧು ಹಗಲುದೀವಟಿಗೆ ಹಚ್ಚಿಕೊಂಡು ತಿರುಗುತ್ತಿದ್ದನಂತೆ. ಊರಿನವರು ಅವನನ್ನು ನೋಡಿ ನಕ್ಕರು, ಅಪಹಾಸ್ಯ ಮಾಡಿದರು, ಮಕ್ಕಳು ಕಲ್ಲು ಬೀಸಿದರು, ಹೆಂಗಸರು ಅವನ ಮೇಲೆ ಕಸ ಸುರಿದರು. ಸಾಧು ಎಲ್ಲವನ್ನೂ ಸಹಿಸಿಕೊಳ್ಳುತ್ತಿದ್ದ. ದೀವಟಿಗೆ ಆರಿಸಲಿಲ್ಲ. ತನ್ನ ಶೋಧ ನಿಲ್ಲಿಸಲಿಲ್ಲ. ಯಾರೋ ಒಮ್ಮೆ ಅವನನ್ನು ಕೇಳಿದರು. 'ಸೂರ್ಯನ ಬೆಳಕು ಲೋಕವನ್ನೇ ಬೆಳಗಿಸುತ್ತಿರುವಾಗ ನಿನ್ನ ದೀವಟಿಯಿಂದ ಎಷ್ಟು ಬೆಳಕು ಬರಬಹುದು. ಈ ದೀವಟಿಗೆ ಹಚ್ಚಿಕೊಂಡೇನು ಹುಡುಕುತ್ತಿದ್ದಿ?' ಸಾಧು ಹೇಳಿದ: 'ತಮ್ಮ, ಸಂಜೆಗೆ ಸೂರ್ಯ ಅಸ್ತಮಿಸುತ್ತಾನೆ. ಆಗ ನನ್ನ ದೀವಟಿಗೆಯ ಬೆಳಕು ಅಲ್ಪವಾದರೂ ಪ್ರಯೋಜನಕ್ಕೆ ಬರುತ್ತದೆ. ನಾನೇನು ಹುಡುಕುತ್ತಿದ್ದೇನೆಂದು ಕೇಳಿದೆಯಲ್ಲವೇ? ಯಾವ ಹೃದಯದಲ್ಲಿ ಸತ್ಯ, ಜ್ಞಾನ, ಪ್ರೇಮ ಇದೆಯೆಂದು ಹುಡುಕುತ್ತಿದ್ದೇನೆ.'

ಈ ಲೇಖಕ ಆ ಸಾಧುವಿನ ಕುಲಕ್ಕೆ ಸೇರಿದವನು. ಘರ್ಷಣೆ, ಅಶಾಂತಿ, ದುರಾಸೆ, ವಿದ್ವೇಷ ತುಂಬಿರುವ ಈ ಲೋಕದಲ್ಲಿ ಶಾಂತಿ, ದಯೆ, ಜ್ಞಾನ, ಪ್ರೇಮಗಳು ಅಳಿದುಹೋದುವೇ ಎಂದು ಚಿಂತಿಸುವ ಲೇಖಕನೂ ಅವುಗಳನ್ನರಸುತ್ತಿದ್ದಾನೆ. ನಿತ್ಯಶೋಧನೆಯ, ಸತ್ಯಶೋಧನೆಯ ಪ್ರತೀಕವೇ '**ಜೀವನದಿ**'.

ವಿಶ್ವ ಸೃಷ್ಟಿಯಾದಂದಿನಿಂದ ಈ ವರೆಗೆ ಅನೇಕ ಧರ್ಮಗಳು, ಕಲೆ, ಸಾಹಿತ್ಯ, ರಾಜಕಾರಣ, ಸಾಮ್ರಾಜ್ಯ, ಮಹಾಪುರುಷರು, ಜೀವನವಿಧಾನ ಹುಟ್ಟಿವೆ—ಬೆಳೆದಿವೆ—ನಾಶವಾಗಿವೆ. ನಾಶದ ಹಿಂದೆಯೇ ಸೃಷ್ಟಿ; ಸೃಷ್ಟಿಯ ಹಿಂದೆಯೇ ನಾಶ. ಈ ಸೃಷ್ಟಿಲಯಗಳ ಚಕ್ರಗತಿಗೆ ಸಿಲುಕದ ನಾಮರೂಪಗಳ ಅಂಕೆ, ಶಿಕ್ಷೆಗೆ ಸಿಲುಕದ ವಸ್ತು ಯಾವುದು? ಅದು ಎಲ್ಲಿದೆ? ಅದನ್ನು ಹೇಗೆ ದೊರಕಿಸಿಕೊಳ್ಳುವುದು ಎಂದು ವಿಚಾರ ಮಾಡುತ್ತಿರುವಲ್ಲಿ ಒಂದು ಘಟ್ಟ ಮುಟ್ಟುತ್ತೇವೆ. ಪ್ರಾಯಶಃ ಅದನ್ನೇ ಗೀತಾಚಾರ್ಯ ಅವಿದ್ಯಾನಿರಸನವೆನ್ನುವುದು. ಆ ಘಟ್ಟ ನಾವು ಮುಟ್ಟಿದಾಗ ನಮ್ಮ ಅನೇಕ ನಂಬಿಕೆಗಳು ಕುಸಿದು ಬೀಳುತ್ತವೆ. ನಮ್ಮ ಆರಾಧ್ಯ ವಸ್ತುಗಳು, ವ್ಯಕ್ತಿಗಳು ಮಂಜಿನ ಮೂರ್ತಿಗಳಂತೆ ಕರಗಿ ಹೋಗುತ್ತಾರೆ. ಎಲ್ಲ ಕಳೆದುಕೊಂಡು ದಟ್ಟ ದರಿದ್ರನಾದೆನಲ್ಲಾ ಎಂಬ

ಕೊರಗು ಮನಸ್ಸಿನಲ್ಲಿ ಮೂಡುತ್ತದೆ. ಆದರೆ ಈ ಕಳವು ಕಳವಲ್ಲ. ವಿಜ್ಞಾನಿಗಳು ಹೇಳುವಂತೆ ಮೇಣದ ಬತ್ತಿ ಉರಿದರೆ ಏನೂ ನಷ್ಟವಾಗುವುದಿಲ್ಲ. ಆದರೆ ನಮ್ಮ ಜೀವ ಅನುಭವಿಸಿದ ನಷ್ಟಕ್ಕೆ ಶತಪಟ್ಟಿನಲ್ಲಿ ನೂತನ ಜ್ಞಾನ, ತೇಜಸ್ಸು, ಶಾಂತಿ ತುಂಬಿಕೊಳ್ಳುತ್ತದೆ. ಮನಸ್ಸು ತುಂಬ ಬೇಕಾದರೆ ಅದನ್ನು ಮೊದಲು ಬರಿದು ಮಾಡಿಕೊಳ್ಳಬೇಕು.

ಮನಸ್ಸು ಬರಿದುಮಾಡಿಕೊಳ್ಳಲಿಚ್ಛಿಸಿದ ಒಬ್ಬ ಸಾಧಕನ ಜೀವನವನ್ನೇ **'ಜೀವನದಿ'**ಯಲ್ಲಿ ನಿರೂಪಿಸಿದ್ದೇನೆ. ವಿಶ್ವಜೀವನದಂತ್ಯದಲ್ಲಿ ಲೆಕ್ಕ ತೆಗೆದುಕೊಂಡಾಗ ಉಳಿಯುವುದು ಪರಾಕ್ರಮವಲ್ಲ, ಪ್ರತಿಷ್ಠೆಯಲ್ಲ, ವಿದ್ಯೆಯಲ್ಲ, ಸಂಪತ್ತಲ್ಲ—ಮಾನವ ದೇವನ ನಿರ್ಮಲ, ನಿರ್ಹೇತುಕ, ನಿಶ್ಚಲ ಪ್ರೇಮ. ಆ ದೇವನಡಿಯಲ್ಲಿ ನಾನಿಡುತ್ತಿರುವ ಒಂದು ಹೂ ಈ **'ಜೀವನದಿ'**

ರಾಜ್ಯಗಳನ್ನು, ರಾಷ್ಟ್ರಗಳನ್ನು ಕಟ್ಟುವುದಕ್ಕಿಂತ ಕ್ಲಿಷ್ಟವಾದುದು ಮಾನವರ ಮನಸ್ಸನ್ನು ಕಟ್ಟುವುದು. ಅವಕ್ಕಿರುವ ಅಡಚಣೆ ಒಂದಲ್ಲ, ಎರಡಲ್ಲ—ಸಾವಿರಾರು. ಮಾನವರ ಮನಸ್ಸನ್ನು ಒಂದುಗೂಡಿಸಬೇಕಾದ ಧರ್ಮ, ಸಾಹಿತ್ಯ, ಕಲೆ, ಸಮಾಜಧರ್ಮಗಳೇ ಅದನ್ನು ಮತ್ತಷ್ಟು ದುರ್ಗಮ ಮಾಡುತ್ತಿವೆ. **'ಜೀವನದಿ'** ಈ ಕಟ್ಟುವ ಕೆಲಸವನ್ನೇ—ಸಮನ್ವಯವನ್ನೇ ಗುರಿಯಾಗಿ ಇಟ್ಟುಕೊಂಡಿದೆ. ಲೇಖಕನ ಪ್ರಯತ್ನ ಸಫಲವಾಗಿದ್ದರೆ ಅವನು ಧನ್ಯ.

ಇದನ್ನು ಪ್ರಕಟಿಸಿರುವ ಮೆ|| ಎಚ್. ವೆಂಕಟರಾಮಯ್ಯ ಅಂಡ್ ಸನ್ಸ್ ಅವರಿಗೂ, ಸುಂದರವಾಗಿ ಮುದ್ರಿಸಿರುವ ಶ್ರೀ ಜಿ. ಎಚ್. ರಾಮರಾಯರಿಗೂ ಲೇಖಕ ಋಣಿ. ಈ ಗ್ರಂಥ ನಿರ್ಮಾಣಕ್ಕೆ, ಪ್ರಕಾಶನಕ್ಕೆ ಸರ್ವವಿಧದಲ್ಲಿಯೂ ಕಾರಣರಾದ ಗೆಳೆಯ ರಾ. ವೆಂ. ಶ್ರೀನಿವಾಸರ ಉಪಕಾರಕ್ಕೆ ಲೇಖಕ ತುಂಬ ಋಣಿ. ಅನಾರೋಗ್ಯಸ್ಥಿತಿಯಲ್ಲಿಯೂ ತಪ್ಪೋಲೆಗಳನ್ನು ಓದುವ ಹೊಣೆ ಹೊತ್ತವರು ಶ್ರೀ ರಾ. ವೆಂ. ಶ್ರೀ. ನನ್ನ ಸಾಹಿತ್ಯ ಸಂಸಾರ ಇಂಥ ಸೋದರರಿರುವುದರಿಂದಲೇ ಅಲ್ಲವೇ ಅದು ಸಾಗಿರುವುದು?

'ಅನ್ನಪೂರ್ಣ'
ವಿಶ್ವೇಶ್ವಪುರಂ, ಬೆಂಗಳೂರು-೪
೧೮-೧೧-೧೯೫೩

ಅ. ನ. ಕೃ.

## ೧

ತಾವರೆಕೆರೆ ನಂಜುಂಡಯ್ಯನವರು ಅನೇಕ ವಿಷಯಗಳಿಗೆ ಪ್ರಸಿದ್ಧರಾಗಿದ್ದರು. ತಾವರೆಕೆರೆ, ನವಿಲೂರು, ದಿಬ್ಬ, ಚೇಳೂರು ಮೊದಲಾದ ಊರುಗಳಲ್ಲಿ ಅವರ ಶ್ರೀಮಂತಿಕೆಯ ವೈಭವ ಪ್ರಖ್ಯಾತವಾಗಿತ್ತು. ನಂಜುಂಡಯ್ಯನವರಿಗೆ ಏಳು ಕೊಪ್ಪರಿಗೆ ಹಣ ಸಿಕ್ಕಿತೆಂದೂ, ಯಾವುದೋ ಬ್ರಹ್ಮರಾಕ್ಷಸ ಅವರ ಮನೆತನದ ವಿಷಯದಲ್ಲಿ ಪ್ರಸನ್ನವಾಗಿ ಅವರ ಅಭ್ಯುದಯಕ್ಕೆ ಕಾರಣವಾಗಿತ್ತೆಂದೂ ಪ್ರತೀತಿ ಹಬ್ಬಿತ್ತು.

ಏಳು ಕೊಪ್ಪರಿಗೆ ಹಣ, ಬ್ರಹ್ಮರಾಕ್ಷಸನ ಸಹಾಯದಿಂದ ಸಿಕ್ಕಿರಲಿಲ್ಲವೆನ್ನುವುದು ನಂಜುಂಡಯ್ಯನವರೊಬ್ಬರಿಗೇ ಗೊತ್ತು. ಜನಗಳ ಮನಸ್ಸಿನಲ್ಲಿ ಒಮ್ಮೆ ಮೂಡಿದ ಅಭಿಪ್ರಾಯವನ್ನು ನಂಜುಂಡಯ್ಯನವರಾಗಲಿ ಮುಕ್ಕಣ್ಣನೇ ಆಗಲಿ ನಿವಾರಿಸಲು ಸಾಧ್ಯವಾಗಿರಲಿಲ್ಲ.

ನಂಜುಂಡಯ್ಯನವರಲ್ಲಿ ಅಪಾರ ಸಂಪತ್ತಿದೆಯೆಂದು ಜನ ನಂಬುವುದಕ್ಕೆ ಕಾರಣವಿರದಿರಲಿಲ್ಲ. ಅವರ ತಂದೆ ಪರಮೇಶ್ವರಯ್ಯನವರು ಅನುಕೂಲವಾಗಿದ್ದರೂ ಶ್ರೀಮಂತರಾಗಿರಲಿಲ್ಲ. ತಮ್ಮ ಆರ್ಥಿಕ ಪರಿಸ್ಥಿತಿಯನ್ನತಿಕ್ರಮಿಸಿದ ಔದಾರ್ಯ ಅವರಲ್ಲಿ ಮನೆಮಾಡಿಕೊಂಡಿತ್ತು. ಆದರವರು ಸಾಯುವ ಕಡೆಗಾಲದಲ್ಲಿ ದೇಹದ ರಕ್ತ ಬಸಿದು ತೆಂಗಿನ ತೋಟ ಮಾಡಿದ್ದರು. ಎರಡು ಸಾವಿರ ಗಿಡಗಳು ಸುಳಿಯೊಡೆದು ಭವಿಷ್ಯತ್ ಜೀವನವನ್ನು ಆಸೆಯಿಂದ ಎದುರು ನೋಡುತ್ತಿದ್ದುವು. ನಂಜುಂಡಯ್ಯನವರಿಗೆ ತುಂಬುತಾರುಣ್ಯ ತಲೆದೋರಿದಾಗ ಫಲ ಕೈಗೆ ದೊರಕಿತು.

ತಂದೆಯ ಇತಿಮಿತಿಯಿಲ್ಲದ ಔದಾರ್ಯ ನೋಡಿದ್ದ ನಂಜುಂಡಯ್ಯನವರು ತದ್ವಿರುದ್ಧವಾದ ರೀತಿನೀತಿಯನ್ನು ತಮ್ಮ ಜೀವಮಾನಕ್ಕೆ ಅಳವಡಿಸಿಕೊಂಡರು. ಒಂದು ಕಿಲುಬು ಕಾಸೂ ಅವರ ಕೈಯಿಂದ ಹೊರಗೆ ಹೋಗುತ್ತಿರಲಿಲ್ಲ. ಮನೆಗೆ ಬಂದವರನ್ನು ಊಟಕ್ಕೆಬ್ಬಿಸುವ ಪರಿಪಾಠ ನಂಜುಂಡಯ್ಯನವರಿಗಿರಲಿಲ್ಲ. ಗಂಡನ ಲೋಭ ಕಂಡು ಪಾರ್ವತಮ್ಮ

ಸಿಡಿಮಿಡಿಗೊಳ್ಳುತ್ತಿದ್ದಳು. ದಾನಧರ್ಮದ ವಿಷಯಗಳಲ್ಲಿ ಗಂಡ ಹೆಂಡತಿಗೆ ಹತ್ತಿದ ಜಗಳ ಹರಿಯುತ್ತಿರಲಿಲ್ಲ.

ನಂಜುಂಡಯ್ಯನವರ ಗಳಿಕೆಯ ಒಂದು ಭಾಗ ಲೇವಾದೇವಿಯಿಂದ ಬಂದಿತ್ತು. ಕೊಟ್ಟ ಹಣ ಬಡ್ಡಿ, ಚಕ್ರ ಬಡ್ಡಿ ಸಮೇತ ವಸೂಲ್ಮಾಡಿಕೊಳ್ಳುವ ಕಲೆ ನಂಜುಂಡಯ್ಯನವರಿಗೆ ಸಾಧಿಸಿದ್ದುದರಿಂದ ಅವರು ಯಾರಿಗೂ ಹಣ ಕೊಡಲು ಹಿಂಜರಿಯುತ್ತಿರಲಿಲ್ಲ. ತಾವರೆಕೆರೆಯಲ್ಲಿಯೂ ಸುತ್ತಮುತ್ತಲ ಹಳ್ಳಿಗಳಲ್ಲಿಯೂ ನಂಜುಂಡಯ್ಯನವರ ಪ್ರಭಾವ ಬೆಳೆಯುವುದಕ್ಕೆ ಇದೇ ಕಾರಣವಾಗಿತ್ತು.

ಗಂಡನ ಅಪಾರ ಸಂಪಾದನೆಯಿಂದ ಪಾರ್ವತಮ್ಮನಿಗೆ ಕಿಂಚಿತ್ತಾದ ಲಾಭವೂ ಆಗಿರಲಿಲ್ಲ. ಮುತ್ತೈದೆಯರಿಗೆ ಫಲ ತಾಂಬೂಲ, ದಕ್ಷಿಣೆ ಕೊಡಬೇಕಾದರೂ ಪಾರ್ವತಮ್ಮ ಗಂಡನನ್ನು ಗೋಗರೆಯಬೇಕಾಗಿತ್ತು. ತನ್ನ ಅಸಹಾಯಕ ಸ್ಥಿತಿಯನ್ನು ನೆನೆದು ಪಾರ್ವತಮ್ಮ ಕಂಬನಿಗರೆಯುತ್ತಿದ್ದಳು. ನೂರೆಂಟು ಹೊಲಿಗೆ, ತೇಪೆ ಹಾಕಿದ ಪಾರ್ವತಮ್ಮನ ಸೀರೆ ಕಂಡು ಕೆಲಸದಾಳು ನಿಂಗಿ,

" ನಿಮ್ಮನ್ನ್ಯಾಲಿ ನೋಡಿದ್ರೆ ಭೋ ದುಕ್ಕ ಆಯ್ತದ್ರವ್ವಾ " ಅನ್ನುತ್ತಿದ್ದಳು.

" ಯಾಕೆ ನಿಂಗಿ ? "

" ಅಲ್ಲವ್ವಾ. ಮನೇ ಲಕ್ಸ್ಮಿ ಇದ್ದಂಗೆ ಇದ್ದೀರಿ. ಸ್ವಾಮಿ ಕೈತುಂಬ ಕೊಟ್ರೂ ಚೆನ್ನಾಗಿ ಉಟ್ಟು ತೊಟ್ಟು ಮಾಡಬ್ಯಾಡ್ವಾ. ನೀವು ಸಂತೋಸವಾಗಿದ್ದರಲ್ಲವೇನ್ರವ್ವಾ ಮನೆಯೆಲ್ಲಾ ಸಂತೋಸವಾಗಿರೋದು. ದೊಡ್ಡಯ್ಯನೋರು ಯಾಕಿಂಗೆ ಮಾಡ್ತಾರೋ ನಾ ಬೇರೆ ಕಾಣ್ರವ್ವಾ."

" ಹೋಗಲಿ ಬಿಡೇ ನಿಂಗಿ. ನಿನ್ನ ಮಾತು ಅವರ ಕಿವಿಗೆ ಬಿದ್ದರೆ ರಣರಂಪವಾದೀತು. ನನಗೆ ಇದರಲ್ಲಿಯೇ ಸಂತೋಷವಿದೆ. ಸಾಯೋ ಕಡೆಗಾಲದಲ್ಲಿ ನಾನು ಪಟ್ಟೇ ಪೀತಾಂಬರ ಉಡಲಿಲ್ಲ ಎಂದು ಅಳೋರು ಯಾರು ? ಮನೆಗೆ ಸೊಸೆ ಬರ್ತಾಳೆ—ಅವಳಿಗೆಲ್ಲಾ ಇಟ್ಟು ಕಣ್ತುಂಬ ನೋಡಿ ಸಂತೋಷಪಡುತ್ತೇನೆ."

"ಬಿಡ್ರವ್ವಾ ಆಯಮ್ಮ ಇಟ್ಕೊಂಡ್ರೆ ನೀವು ಇಟ್ಕೊಂಡಂಗೆ ಆಯ್ತದಾ ?"

ಪಾರ್ವತಮ್ಮನಿಗೆ ತನ್ನ ಪರಿಸ್ಥಿತಿಗಿಂತ ನಿಂಗಿಯ ಸ್ಥಿತಿಗತಿ ತುಂಬ ದುಃಖಕ್ಕೆ ಕಾರಣವಾಗಿತ್ತು. ನಿಂಗಿಯ ಗಂಡ ಲಕ್ಕ ತನ್ನ ನಾಲ್ಕು ಎಕರೆ ಗದ್ದೆ ಉಳಿಸಿಕೊಳ್ಳುವುದಕ್ಕೆ ನಂಜುಂಡಯ್ಯನವರಲ್ಲಿ ಸಾಲ ಪಡೆದ. ಅವನ ದುರದೃಷ್ಟಕ್ಕೆ ಆ ವರ್ಷ ಮಳೆಯಾಗದೆ ಬೆಳೆ ಕೆಟ್ಟುಹೋಯಿತು. ಸಾಲ ಅದರ ಬಡ್ಡಿ ತಲೆಯ ಮೇಲೆ ಹೇರಿಕೊಂಡಿತು. ವರ್ಷವೆಲ್ಲಾ ಜೀವನ ಸಾಗಿಸುವುದಕ್ಕೆ ಮತ್ತಷ್ಟು ಸಾಲ ಮಾಡಿದ. ಮಾರನೆಯ ವರ್ಷ ಬೆಳೆ ಚೆನ್ನಾಗಿ ಬಂದರೂ ಸಾಲ ತೀರಿಸಿ ಅವನ ಸಂಸಾರ ನಡಸು ವುದಕ್ಕೆ ಸಾಲದಾಯಿತು. ಲಕ್ಕನಿಗೆ ಇದ್ದುದು ಒಂದೇ ದಾರಿ. ಗದ್ದೆ ಯನ್ನು ರಾಯರಿಗೆ ಬರೆದುಕೊಟ್ಟು, ಅವರ ಮನೆಯ ಜೀತದಾಳಾಗಿ ದುಡಿಯುವುದು.

ಗದ್ದೆ ಕೈಬಿಟ್ಟು ಹೋದ ದುಃಖ ಲಕ್ಕನ ಮನಸ್ಸಿನಿಂದ ನಿವಾರಣೆ ಯಾಗಲೇ ಇಲ್ಲ. ರಾಯರ ಮನೆಯಲ್ಲಿ ಲಕ್ಕನಿಗೂ ನಿಂಗಿಗೂ ಹೊಟ್ಟೆ ಬಟ್ಟೆ ಕಳೆದುಹೋಗುತ್ತಿತ್ತು. ತನ್ನದಾಗಿದ್ದ ಜಮೀನಿನ ಕೆಲಸವನ್ನೇ ಅವನು ಮಾಡುತ್ತಿದ್ದ. ಆದರದು ತನ್ನದಲ್ಲ–ತಾನು ದುಡಿಯುವುದು ತನಗಾಗಿಯಲ್ಲ—ಪರರಿಗೆ, ಎನ್ನುವ ಭಾವನೆ ಅವನ ಚಿತ್ತದಿಂದ ಮಾಸ ಲಿಲ್ಲ. ಕೊರಗಿ ಕೊರಗಿ ಲಕ್ಕ ಶಿವಪಾದ ಸೇರಿಬಿಟ್ಟ.

ದುಡಿಯುವ ಆಳು ಕೈಬಿಟ್ಟುಹೋದ ಮೇಲೆ ರಾಯರು ನಿಂಗಿಗೆ ಆಶ್ರಯಕೊಡಲೊಪ್ಪಲಿಲ್ಲ. ಪಾರ್ವತಮ್ಮ ಮನಸ್ಸು ಗಟ್ಟಿಮಾಡಿಕೊಂಡು ನಿಂಗಿಯ ಪಕ್ಷ ಹಿಡಿದಳು. ಭೂಮಿ ಆಕಾಶ ಒಂದಾದರೂ ತಾನು ನಿಂಗಿ ಯನ್ನು ಹೊರಗೆ ಕಳುಹಿಸುವುದಿಲ್ಲವೆಂದು ಗಂಡನಿಗೆ ಖಡಾಖಂಡಿತವಾಗಿ ಹೇಳಿದಳು. ರಾಯರಿಗೆ ಉಭಯಸಂಕಟಕ್ಕಿಟ್ಟುಕೊಂಡಿತು. ನಾಲ್ಕಾರು ತಿಂಗಳು ಗಂಡ ಹೆಂಡತಿಗೆ ಮಾತು ಕೂಡ ನಿಂತುಹೋಯಿತು. ಪಾರ್ವ ತಮ್ಮ ಯಾವುದಕ್ಕೂ ಜಗ್ಗಲಿಲ್ಲ. ರಾಯರೇ ಕೊನೆಗೆ ಸೋಲನ್ನೊಪ್ಪಿ ಕೊಳ್ಳಬೇಕಾಯಿತು.

"ಜೀವನದಲ್ಲಿ ನಿಂಗಿಗೆ ಏನು ಸೌಖ್ಯ ?" ಎಂದು ಪಾರ್ವತಮ್ಮ

ಯೋಚಿಸುವಳು. ಭೂಮಿ ಹೋಯಿತು. ಗಂಡ ಹೋದ. ಕಡೆಗಾಲದಲ್ಲಿ ಪೋಷಣೆ ಮಾಡುವುದಕ್ಕೆ ಮಕ್ಕಳಿಲ್ಲ. ಈ ಬಡಪಾಯಿಯ ಬಾಳು ಪ್ರತ್ಯಕ್ಷ ನರಕವಾಯಿತಲ್ಲಾ, ಎಂದು ಹಲುಬುವಳು. ಹಬ್ಬ ಹುಣ್ಣಿಮೆ ಬಂದರೆ ಗಂಡನಿಗೆ ತಿಳಿಯದಂತೆ ಅನ್ನದಲ್ಲಿ ಒಬ್ಬಟ್ಟು, ಅಂಬೊಡೆ ಮುಚ್ಚಿಟ್ಟು ಕೊಡುವಳು. ವಾರ, ಎರಡು ವಾರಕ್ಕೊಮ್ಮೆ ಸ್ವಲ್ಪ ಎಣ್ಣೆ, ಸೀಗೇ ಕಾಯಿ ಕೊಟ್ಟು 'ನೀರು ಹಾಕಿಕೊಳ್ಳೆ ನಿಂಗಿ' ಎಂದು ಉಪಚರಿಸುತ್ತಿದ್ದಳು. ಪಾರ್ವತಮ್ಮನ ಅಲ್ಪೋಪಚಾರದಲ್ಲಿಯೇ ನಿಂಗಿ ಸ್ವರ್ಗ ಕಾಣುತ್ತಿದ್ದಳು. ಪಾರ್ವತಮ್ಮನ ದಯಾರ್ದ್ರ ಕಣ್ಣು ನೋಟ ನಿಂಗಿಯ ದುಃಖತಪ್ತ ಜೀವನದ ಕಸರನ್ನು ಕಳೆಯುತ್ತಿತ್ತು.

ನಿಂಗಿಗೂ ಪಾರ್ವತಮ್ಮನಿಗೂ ವಿಚಿತ್ರವಾದ ದೈವಿಕ ಸಂಬಂಧ ಏರ್ಪಟ್ಟಿತು. ಪಾರ್ವತಮ್ಮ ನಿಂಗಿಗಿಂತ ನಾಲ್ಕು ವರ್ಷ ದೊಡ್ಡವಳು. ವಯಸ್ಸಿನ ಅಂತರವಾಗಲಿ, ಜಾತಿಮತಗಳ ವ್ಯತ್ಯಾಸವಾಗಲಿ ಅವರ ವಿಶ್ವಾಸಕ್ಕೆ ಅಡ್ಡಿಯಾಗಿರಲಿಲ್ಲ. ತನ್ನ ಸಂಸಾರದ ರಹಸ್ಯಗಳನ್ನು ಪಾರ್ವತಮ್ಮ ನಿಸ್ಸಂಕೋಚವಾಗಿ ನಿಂಗಿಗೆ ತಿಳಿಸುತ್ತಿದ್ದುದಲ್ಲದೆ ತನ್ನ ಮನಸ್ಸಿನ ದುಃಖ, ದುಗುಡಗಳನ್ನು ಅರುಹುತ್ತಿದ್ದಳು. 'ಅಮ್ಮಾವರ' ಜೀವನದಲ್ಲಿ ನಿಂಗಿಯ ಜೀವನ ಬೆರೆತು ಹೋಗಿತ್ತು. ಹಿಂದಣ ಬಾಳುವೆಯೆಲ್ಲ ಒಂದು ಕನಸಾಗಿ ಅವಳ ಸ್ಮೃತಿಪಟಲದಿಂದ ಕ್ರಮಕ್ರಮೇಣ ಅಳಿಸಿ ಹೋಗುತ್ತಿತ್ತು.

ಸುಬ್ರಹ್ಮಣ್ಯ, ಶಂಕರ ಇಬ್ಬರನ್ನೂ ಸಾಕಿ ಸಲಹಿದವಳೂ ನಿಂಗಿಯೇ. 'ಅಮ್ಮಾವರ' ಮಕ್ಕಳ ಲಾಲನೆಪಾಲನೆಯಲ್ಲಿ ಅವಳು ತನ್ನ ಕೊರತೆಯನ್ನು ಮರೆಯುತ್ತಿದ್ದಳು.

ಸುಬ್ರಹ್ಮಣ್ಯ ಹೈಸ್ಕೂಲ್ ವರೆಗೆ ಮುಟ್ಟಿ ಅಲ್ಲಿಗೆ ತನ್ನ ವಿದ್ಯೆಗೆ ಶರಣು ಹೊಡೆದಿದ್ದ. ಶಾಲೆಯ ಓದು ಸಾಕೆಂದು ನಂಜುಂಡಯ್ಯನವರೂ ಅಭಿಪ್ರಾಯಪಟ್ಟಿದ್ದರು. ಮಗ ಮುಂದಕ್ಕೆ ಓದಿ ದೊಡ್ಡ 'ಪ್ಯಾಸು' ಮಾಡಿ ಸರ್ಕಾರಿ ನೌಕರಿಗೆ ಸೇರಲಿ ಎಂದು ತಾಯಿಯ ಅಭಿಲಾಷೆ. ತನ್ನ ಸಮಕಾಲೀನರಂತೆ ಪಾರ್ವತಮ್ಮನೂ ಸರ್ಕಾರಿ ನೌಕರಿಯೆಂದರೆ ಅನನ್ಯಾದೃಶ ಗೌರವ, ಗಳಿಕೆಯ ಕ್ಷೇತ್ರವೆಂದು ಭಾವಿಸುತ್ತಿದ್ದಳು.

'ಶಾಲೆಯ ಓದು ಸಾಕು, ಮನೆಯ ಕೆಲಸ ನೋಡಿಕೊಂಡಿರು' ಎಂದು ನಂಜುಂಡಯ್ಯನವರು ಮಗನಿಗೆ ಹೇಳಿದ ದಿನ ಪಾರ್ವತಮ್ಮನ ದುಃಖಕ್ಕೆ ಪಾರವೇ ಇರಲಿಲ್ಲ. ಅವಳ ಆಶಾತಂತು ಕಡಿದು ಹೋಗಿತ್ತು. ಕನಸಿನ ಗೋಪುರ ಮುರಿದು ಬಿದ್ದಿತು. ಗಂಡನಿಗೆ ವಿವೇಕ ಹೇಳಿ, ಅವರು ಮನಸ್ಸು ಬದಲಾಯಿಸುವಂತೆ ಮಾಡುವುದಂತೂ ಅಸಾಧ್ಯವಾಗಿತ್ತು. ಯಜಮಾನಿತಿಯ ದುಃಖ ನೋಡಲಾರದೆ ನಿಂಗಿ,

"ಬುಡ್ರವ್ವಾ–ಯಾಸಾಟೀಗೆ. ಸುಬ್ಬಪ್ಪ ಚಾಕರಿ ಮಾಡಿ ಕೂಲಿ ಸಂಪಾದಿಸ್ಬೇಕಾ? ಮಾರಾಯರು ಎರಡು ಕೈಲೂ ಸಂಪಾದನೆ ಮಾಡಿಟ್ಟವ್ರೆ. ಇರೋ ಆಸ್ತಿ ನೋಡಿಕೊಂಡು ಓದ್ರೆ ಸುಬ್ಬಪ್ಪನೂ ತಿಂದು ಅತ್ತೆ ಜನಕ್ಕೂ ಆಕಭೋದು."

"ನಿಜ ಕಣೇ ನಿಂಗಿ. ಮಾರಾಯರು ಬೇಕಾದಷ್ಟು ಸಂಪಾದನೆ ಮಾಡಿಟ್ಟಿದ್ದಾರೆ. ಸುಬ್ಬು ಕಷ್ಟ ಪಡದಿದ್ರೆ ಅವನಿಗೆ ಹಣದ ಬೆಲೆ ಹೇಗೆ ಗೊತ್ತಾಗಬೇಕು. ಕುಡಿಕೆ ಹಣ ಕೂತು ತಿನ್ನುವವರಿಗೆ ಸಾಲುತ್ತದೆಯೇನೇ?"

"ಸುಬ್ಬಪ್ಪನಿಗೇ ಓದು ಬ್ಯಾಡವಾಗಿರುವಾಗ ದೊಡ್ಡಾರಯ್ರು ಏನ್ಮಾಡ್ತಾರವ್ವಾ! ದನದ ಮುಂದಕ್ಕೆ ಕಲಗಚ್ಚು ಇಡಬೋದ—ಅದರ ಬಾಯಿ ತೆಗಸಿ ಗಂಟಲಲ್ಲಿ ಗಿಡಿಯಾಕೆ ಆಗ್ತೈತಾ?"

"ಹುಡುಗ—ಅವನಿಗೇನು ತಿಳಿಯುತ್ತದೆಯೇ ನಿಂಗಿ. ಸುಬ್ಬು ಓದಿಗೇಕೆ ಖರ್ಚು ಮಾಡಬೇಕು ಎಂದು ಅವರೇ ಹಟ ಹಿಡಿದಿದ್ದಾರೆ."

"ದೊಡ್ಡಾರಯರಿಗೂ ವಯಸ್ಸಾಗ್ತಾ ಬಂತವ್ವ. ಹೊಲ ಗದ್ದೆ ಕೆಲಸ ಮಗ ಕಲ್ತುಕೊಂಡ್ರೆ ಒಳ್ಳೇದಲ್ವಾ. ರಾಯರು ಮೈಮುರಿದು ಸಂಪಾದಿಸಿದ ಆಸ್ತಿ ಹಲಾಲಾದರೆ ಯಾರಿಗೆ ಸಂತೋಸ."

"ನಿಜ. ಈಗಾಗಿರುವುದು ಒಳ್ಳೆಯದಕ್ಕೇ ಎಂದುಕೊಂಡು ಸಮಾಧಾನ ಪಟ್ಟುಕೊಳ್ಳುವುದೊಂದೇ ದಾರಿ."

"ಸುಬ್ಬಪ್ಪನಿಗೆ ಅದಿನೆಂಟು ತುಂಬ್ತದೆ ಅಲ್ಲವೇನ್ರವ್ವಾ?"

"ಹೌದು."

"ಲಗ್ನದ ಯೋಚ್ನೆ ಮಾಡಾಕಿಲ್ವಾ!"

"ಲಗ್ನಕ್ಕೆ ಈಗಾಗಲೇ ಏನು ಅವಸರ."

"ವಯಸ್ಸು ತುಂಟಕುದುರೆ ಇದ್ದಂಗ್ರವ್ವಾ. ಅದಕ್ಕೆ ಕಡಿವಾಣ ಆಕದಿದ್ರೆ ಅತೋಟ ತಪ್ಪಿ ಓಗ್ತೈತೆ."

ನಿಂಗಿಯ ಸಲಹೆಯನ್ನು ಪಾರ್ವತಮ್ಮ ಕೂಡಲೆ ಒಪ್ಪಿಕೊಳ್ಳದಿದ್ದರೂ ಆ ಬಗ್ಗೆ ದೀರ್ಘವಾಗಿ ಆಲೋಚಿಸತೊಡಗಿದಳು.

೨

ದನದ ಕೊಟ್ಟಿಗೆಯ ಬಳಿ ನಿಂಗವ್ವನಿಗೆ ಒಂದು ಕೊಠಡಿಯನ್ನು ರಾಯರು ಧಾರಾಳವಾಗಿ ಕೊಟ್ಟಿದ್ದರು. ದನಗಳ ಯೋಗಕ್ಷೇಮವೂ ನಿಂಗಮ್ಮನಿಗೇ ಸೇರಿದ್ದುದರಿಂದ, ಅವುಗಳ ಕೊಟ್ಟಿಗೆಯ ಸಮೀಪದಲ್ಲಿರುವುದೇ ಒಳ್ಳೆಯದೆಂದು ರಾಯರು ಯೋಚಿಸುತ್ತಿದ್ದರು.

ನಿಂಗವ್ವ ದಿನದಲ್ಲಿ ಒಂದೆರಡು ಗಂಟೆಗಳ ಕಾಲವನ್ನು ತನ್ನ ಕೊಠಡಿಯಲ್ಲಿ ಕಳೆಯುತಿದ್ದಳು. ಉಳಿದ ವೇಳೆಯೆಲ್ಲಾ ಮನೆಗೆಲಸ, ತೋಟದ ಕೆಲಸ, ದನದ ಕೆಲಸಗಳಿಗೆ ಮೀಸಲಾಗಿತ್ತು. ರಾತ್ರಿ ರಾಯರ ಮನೆಯ ಪಡಸಾಲೆಯಲ್ಲಿ ಮಲಗುತ್ತಿದ್ದಳು. ಮಳೆಗಾಲದಲ್ಲಿ ಮಾತ್ರ ತನ್ನ ಕೊಠಡಿಯಲ್ಲಿ ರಾಗೀಹುಲ್ಲು ಹಾಸಿಕೊಂಡು ಮಲಗುತ್ತಿದ್ದಳು.

ನಿಂಗವ್ವನ ಜೀವನದಲ್ಲಿ ದೀಪರೇಖೆಯಂತೆ ಮೂಡಿದ್ದುದು ಅಮ್ಮಾವರ ಮೇಲಣ ವಿಶ್ವಾಸ. ಪ್ರಾಯಶಃ ಅಮ್ಮಾವರೂ ಎಲ್ಲಾ ಅಮ್ಮಾನರುಗಳ ಹಾಗೆ ನಗನಾಣ್ಯ ಹೇರಿಕೊಂಡು ಕಾಸಿಗೆ ಕಾಸು ಗಂಟುಹಾಕುತ್ತಾ, ಆಳುಮಕ್ಕಳನ್ನು ಗದರಿಸಿಕೊಂಡು ಬಾಳ್ವೆ ಮಾಡುತ್ತಿದ್ದರೆ ನಿಂಗವ್ವನ ವಿಶ್ವಾಸದ ಕುಡಿ ಹುಟ್ಟಿದಲ್ಲಿಯೇ ಕಮರಿಹೋಗುತ್ತಿತ್ತೋ ಏನೋ ?

ಆದರೆ ಅಮ್ಮಾವರು ಲೋಕಾಚರಣೆಗೆ ವಿರುದ್ಧರಾಗಿದ್ದರು. ಬಡಬಗ್ಗರಿಗಾಗಿ, ದೀನದಲಿತರಿಗಾಗಿ ಅವರ ಹೃದಯ ಅನುಕಂಪದಿಂದ ಮಿಡಿಯುತ್ತಿತ್ತು. ತಮ್ಮ ಆಳುಮಕ್ಕಳ ಅವಿಶ್ರಾಂತ ದುಡಿಮೆ ಕಂಡು ಅಮ್ಮಾವರು ಮಮ್ಮಲ ಮರುಗುತ್ತಿದ್ದರು.

ಒಮ್ಮೊಮ್ಮೆ ಪಾರ್ವತಮ್ಮ ತಾನೇ ನಿಂಗಿಯೆಂದು ಭಾವಿಸಿಕೊಂಡು ವಿಚಾರಮಾಡುವರು: 'ಈ ಪ್ರಾಣಿಗೆ ಯಾವ ಸುಖವಿದೆ. ಬದುಕಬೇಕೆಂದು ಯಾವ ಕಾರಣಕ್ಕಾಗಿ ಇವಳು ಬಯಸಬೇಕು. ಗಾಣದ ಎತ್ತಿನಂತೆ ದುಡಿಯುವುದಕ್ಕಾಗಿ ಶಿವ ಇವಳಿಗೆ ಆಯುಸ್ಸು ಕೊಟ್ಟಿದ್ದಾನೆಯೇ?'

ಪಾರ್ವತಮ್ಮನವರ ಮನಸ್ಸಿನ ಕಾಲಸೂಚಿ ಕೆಲವು ವರ್ಷಗಳ ಹಿಂದಕ್ಕೆ ಹೋಗುತ್ತಿತ್ತು.—ನಿಂಗಿಯ ಗಂಡ ಬದುಕಿದ್ದ ದಿನಗಳು, ಅವ

ನಿಗೆ ಬಂದೊದಗಿದ ಗಂಡಾಂತರಗಳು, ಅವಳ ನಿರ್ಗತಿಕಾವಸ್ಥೆ, ಹೊಲ ಮನೆಯನ್ನು ಅವನು ನೀಗಿಕೊಂಡು ರಾಯರಲ್ಲಿ ಊಳಿಗಕ್ಕೆ ಬಂದುದು, ಅವನ ಅವಸಾನ, ನಿಂಗಿಯ ಅಸಹಾಯಕ ಸ್ಥಿತಿ.

'ನಾವೇ ಕೈಯಾರ ಈ ಸಂಸಾರ ಕೆಡಿಸಿದೆವೆಲ್ಲಾ! ಲಕ್ಕನ ಒಂದು ತುಂಡು ಹೊಲ, ಎರಡಂಕಣದ ಮನೆ ಸಿಕ್ಕಿ ತಮ್ಮ ಐಶ್ವರ್ಯ, ಬೆಳೆದು ದಾದರೂ ಏನು?

'ಹಣ—ಎಲ್ಲ ದೇವರುಗಳನ್ನೂ ಹೊಡೆದಟ್ಟಿ ಈ ಹಣದ ದೇವರನ್ನು ಪೂಜಿಸುತ್ತಿದ್ದೇವೆ. ಹಣದಿಂದ ತೃಪ್ತಿ ಬಂದಿದೆಯೇ. ಸುಖ ಒದ ಗಿದೆಯೇ. ಶಾಂತಿ ದೊರಕಿದೆಯೇ? ಎಷ್ಟು ಸಂಸಾರಗಳು ಶಾಪವಿಡು ತ್ತಿವೆ. ಎಷ್ಟು ಮನೆಗಳಲ್ಲಿ ಹಸಿದ ಮಕ್ಕಳು ಚೀರುತ್ತಿವೆ. ಎಷ್ಟು ಜನ ನಮ್ಮ ಹೆಸರು ಕೇಳಿದೊಡನೆಯೇ ನೆಟಿಕೆ ಮುರಿಯುತ್ತಾರೆ.'

ಬಿಸಿಲುಗಾಲದ ಬುಗ್ಗೆಗಳಂತೆ ಯೋಚನೆಗಳು ಬಂದಲ್ಲಿಯೇ ಇಂಗಿ ಹೋಗುತ್ತಿದ್ದುವು. ಪಾರ್ವತಮ್ಮನವರೂ ಅಸ್ವತಂತ್ರರು. ಲಕ್ಷ್ಮಿ ರಾಯರ ಮನೆಯಲ್ಲಿ ತಾಂಡವವಾಡುತ್ತಿದ್ದಳು. ಆದರೆ ಸಂಕುಚಿತ ಮನ ಸ್ಕಳಾದವಳು; ರಾಯರ ಕೋಣೆ ಬಿಟ್ಟು ಹೊರಬಂದಿರಲಿಲ್ಲ. ಮನೆ ತುಂಬ ಹೇರು ಹೈನವಿದ್ದರೂ, ಕಬ್ಬಿಣದ ಪೆಟ್ಟಿಗೆಯ ತುಂಬ ಹಣವಿದ್ದರೂ, ಪಾರ್ವತಮ್ಮ ನಿತ್ಯ ದಾರಿದ್ರ್ಯದಲ್ಲಿ ಕಾಲಕಳೆಯಬೇಕಾಗಿತ್ತು. 'ಉಡುವು ದಕ್ಕೆ ಸೀರೆಯಿಲ್ಲ' ಎಂದು ಪಾರ್ವತಮ್ಮ ಹೇಳಿದರೆ, ರಾಯರು ತಮ್ಮ ತುಂಡು ಪಂಚೆ ತೋರಿಸಿ 'ನಾನೇನು ಪೀತಾಂಬರ ಉಟ್ಟಿದ್ದೇನೆಯೇ?' ಎಂದನ್ನುತ್ತಿದ್ದರು.

ಹೃದಯ ಪಾತ್ರೆಯಲ್ಲಿ ದುಃಖವನ್ನು ತುಂಬಿಟ್ಟುಕೊಳ್ಳುವುದು ಪಾರ್ವತಮ್ಮನವರಿಗೆ ಸ್ವಭಾವಜನ್ಯವಾಗಿ ಬಂದಿದ್ದರೆ, ಒಮ್ಮೊಮ್ಮೆ ಪಾತ್ರೆ ತುಂಬಿ ಚೆಲ್ಲುತ್ತಿತ್ತು. ಆಗ ನಿಂಗಿಯ ಬಳಿ ದುಃಖ ತೋಡಿಕೊಂಡರೇ ಪಾರ್ವತಮ್ಮನವರಿಗೆ ತೃಪ್ತಿ, ಶಾಂತಿ. ಅವ್ಮಾವರ ಗೋಳಿನ ಕಥೆ ಕೇಳಿದ ನಿಂಗಿ,

"ಓಗ್ಲಿ ಬಿಡ್ರವ್ವಾ—ಯಾಸಾಟೀಗೆ. ಇರೋ ತೆನಕ ರಾಮ ಕೃಷ್ಣಾ ಅಂದ್ಕೊಂಡು ಕಂತೆ ಒಗೆದಂಗಾಯ್ತು"

ಎಂದು ಸಮಾಧಾನ ಹೇಳುತ್ತಿದ್ದಳು.

ಪಾರ್ವತಮ್ಮ ಆಗಾಗ್ಗೆ ನಿಂಗಿಯನ್ನು ಕೂರಿಸಿಕೊಂಡು ರಾಮಾಯಣ, ಭಾರತ, ಭಾಗವತ, ಪುರಾಣಗಳ ಕಥೆಗಳನ್ನು ಹೇಳುತ್ತಿದ್ದರು. ರಾಮ, ಕೃಷ್ಣ, ಪ್ರಹ್ಲಾದ, ಧ್ರುವ ಇವರ ಕಥೆಗಳನ್ನು ಮೆಲುಕುಹಾಕುತ್ತಾ ನಿಂಗಿ ಮಲಗಿ ನಿದ್ರಿಸುತ್ತಿದ್ದಳು.

ರಾಯರ ಇಬ್ಬರು ಮಕ್ಕಳು ಸುಬ್ರಹ್ಮಣ್ಯ, ಶಂಕರ ನಿಂಗಿಯ ಜೀವ ನದ ಸೂಜಿಗಲ್ಲುಗಳಾಗಿದ್ದರು. ತನಗೆ ಮಕ್ಕಳಿಲ್ಲವೆಂಬ ದುಃಖ, ಕೊರತೆಯನ್ನು ಮರೆತು ನಿಂಗಿ ಅವರಿಬ್ಬರನ್ನು ಹಾರ್ದಿಕವಾಗಿ ಪ್ರೀತಿಸುತ್ತಿದ್ದಳು.

ತಂದೆಯ ಶಾಲೆಯಲ್ಲಿ ಬೆಳೆದಿದ್ದ ಸುಬ್ರಹ್ಮಣ್ಯ ನಿಂಗಿಯನ್ನು ವಿಶ್ವಾಸದಿಂದ ಕಾಣುತ್ತಿರಲಿಲ್ಲ. ಅವಳು ಮನೆಯ ಊಳಿಗದಾಳು ಎಂಬ ಭಾವನೆ ಅವನ ಮನಸ್ಸಿನಲ್ಲಿ ಅಚ್ಚೊತ್ತಿದ್ದಿತು. ತಾನು ಮುಂದೆ ಮನೆಯ ಯಜಮಾನ ಎಂಬ ಗರ್ವವೂ ಅವನ ಪ್ರತಿಯೊಂದು ನಡವಳಿಕೆ, ಮಾತಿನಲ್ಲಿಯೂ ಪ್ರಕಟವಾಗುತ್ತಿತ್ತು.

ತನ್ನ ಬಗ್ಗೆ ಸುಬ್ರಹ್ಮಣ್ಯನಿಗಿದ್ದ ಕ್ಷುದ್ರ ಭಾವನೆಯ ವಿಷಯ ನಿಂಗಮ್ಮನಿಗೆ ಚೆನ್ನಾಗಿ ಗೊತ್ತಿತ್ತು. ಶೀಘ್ರಕೋಪಿಯಾದ ಸುಬ್ರಹ್ಮಣ್ಯ ಒಮ್ಮೊಮ್ಮೆ ಅತ್ಯಲ್ಪ ಕಾರಣಕ್ಕೆ ನಿಂಗವ್ವನ ಮೇಲೆ ರೇಗುತ್ತಿದ್ದ. ಪಡಸಾಲೆ ಗುಡಿಸಿಲ್ಲವೆಂದೋ, ಮನೆಯ ಮುಂದೆ ಸಗಣಿ ಬಿದ್ದಿದೆಯೆಂದೋ ಅವನು ರೇಗಿದರೆ ಪಾರ್ವತಮ್ಮನವರು ಮಧ್ಯೆ ಬಾಯಿ ಹಾಕಿ,

"ನಿಂಗಿ ದಿನಕ್ಕೆ ಇಪ್ಪತ್ತುನಾಲ್ಕು ಗಂಟೆ ದುಡಿದರೂ ಈ ಮನೆಯಲ್ಲಿ ಯಾರಿಗೂ ತೃಪ್ತಿಯಿಲ್ಲ. ಅವಳೇನು ಮನುಷ್ಯಳೋ ಯಂತ್ರವೋ!"

ಎಂದರೆ ನಿಂಗವ್ವನೇ ಮಧ್ಯೆ ಪ್ರವೇಶಿಸಿ,

"ನಂಗೂ ವಯಸ್ಸಾಯ್ತ್ರವ್ವಾ—ಸೆಪ್ಪೇ ಓಗಿಬಿಡತ್ತೇ. ಸುಬ್ಬಪ್ಪ ಏಳೋದು ದಿಟ. ಬೆಳಿಗ್ಗೆ ನಾನು ಪಡಸಾಲೆ ಗುಡಿಸ್ಲೇ ಇಲ್ಲ"

ಎನ್ನುತ್ತಿದ್ದಳು. ನಿಂಗವ್ವನ ದೈವಿಕ ಸಹನೆ ಪಾರ್ವತಮ್ಮನವರಲ್ಲಿ ಮತ್ತಷ್ಟು ದುಃಖವನ್ನು ಹುಟ್ಟಿಸುತ್ತಿತ್ತು.

ಸುಬ್ರಹ್ಮಣ್ಯನಿಗಿಂತ ಆರು ವರ್ಷಕ್ಕೆ ಚಿಕ್ಕವನಾದ ಶಂಕರನನ್ನು ಕಂಡರೆ ನಿಂಗವ್ವನಿಗೆ ಪಂಚಪ್ರಾಣ. ಸುಬ್ರಹ್ಮಣ್ಯ ಅವಳ ಭಾಗಕೆ,

'ಚಿಕ್ಕರಾಯರು' ಆಗಿದ್ದರೆ ಶಂಕರ 'ಸಂಕರಪ್ಪ' ಆಗಿದ್ದ. ಶಂಕರನ ಬಾಲ ಭಾಷೆ, ತುಂಟತನ, ಕೊಂಕು ಮಾತುಗಳನ್ನು ನಿಂಗಮ್ಮ ಬಹುವಾಗಿ ಪ್ರೀತಿಸುತ್ತಿದ್ದಳು. ಅವನ ಪ್ರತಿಯೊಂದು ಮಾತನ್ನೂ ನೆನಪಿಟ್ಟುಕೊಂಡು ಅಮ್ಮಾವರಿಗೆ ಒಪ್ಪಿಸಿದರೇ ಆವಳ ಮನಸ್ಸಿಗೆ ನೆಮ್ಮದಿ.

ದೈವ ನಿಂಗವ್ವನಿಗೂ ಶಂಕರನಿಗೂ ವಿಚಿತ್ರ ಪ್ರೇಮವನ್ನು ಹೆಣೆದಿತ್ತು. ಶಾಲೆಯಿಂದ ಮನೆಗೆ ಬಂದ ಕೂಡಲೆ ನಿಂಗವ್ವನನ್ನು ಒಮ್ಮೆ ಕಾಣದಿದ್ದರೆ ಅವನ ಜೀವಕ್ಕೆ ತೃಪ್ತಿಯಾಗುತ್ತಿರಲಿಲ್ಲ. ಶಾಲೆಯಲ್ಲಿ ಬಹುಮಾನವೋ ಹೆಚ್ಚು ಗುಣಗಳೋ (ನಂಬರುಗಳು) ಬಂದರೆ ಉತ್ಸಾಹದಿಂದ ನಿಂಗವ್ವನ ಬಳಿ ಬಂದು,

"ಇವತ್ತು ನನಗೆ ಲೆಕ್ಕದಲ್ಲಿ ನೂರಕ್ಕೆ ಅರುವತ್ತು ನಂಬರು ಬಂತು ನಿಂಗಜ್ಜಿ!"

ಎಂದು ಜಂಬ ಕೊಚ್ಚಿಕೊಳ್ಳುತ್ತಿದ್ದ. ನಿಂಗವ್ವ ಅವನ ಮುಖ ನೇವರಿಸಿ ದೃಷ್ಟಿಯ ನೆಟಿಕೆ ಮುರಿಯುತ್ತಿದ್ದಳು.

"ನನ್ನಪ್ಪ ಏಸು ಜಾಣನಾದನವ್ವಾ?"

"ನೋಡ್ತಿರು ನಿಂಗಜ್ಜಿ, ಈ ಸಲ ನಾನು ಫಸ್ಟ್‌ಕ್ಲಾಸ್ ಹೊಡೆಯುತ್ತೇನೆ."

"ಹಾಗಂದರೇನೋ ಅಪ್ಪಣ್ಣ?"

"ಸ್ಕೂಲಿಗೇ ಮೊದಲೂಂತ."

"ನೀನು ಇಸ್ಕೂಲಿಗೇ ಮೊದಲನೆಯವನಾದರೆ ನನ್ನ ಮರ್‍ತು ಬಿಡ್ತೀಯೇನೋ?"

"ನಿನ್ನೇಕೆ ಮರೀಬೇಕು?"

"ಬಡಮುಂಡೇದ್ರ ನೆಪ್ಪು ದೊಡ್ಡೋರಿಗೆ ಎಲ್ಲಿರತೈತೆ ಸಂಕ್ರಪ್ಪ."

"ನಾನು ಎಷ್ಟೇ ದೊಡ್ಡವನಾದರೂ ನಿನ್ನ ಮರೆಯಲ್ಲ ನಿಂಗಜ್ಜಿ."

"ನಂಗೆ ಇಟ್ಟು ಅಕಿ ಕಾಪಾಡ್ತೀ ಅನ್ನು."

"ಭೇಷಕ್."

"ಅಯ್ಯೋ ನನ್ನಪ್ಪಾ. ನಿನ್ಮನೆ ಬಂಗಾರಾಗ-ಬೆಲ್ಲದ್ಹಂಗೆ ಮಾತಾಡ್ತೀಯಲ್ಲಾ ನನ್ನ ದೊರೆ"

ಎಂದನ್ನುತ್ತಿದ್ದಳು. ಅವಳ ಕಣ್ಣಂಚಿನಲ್ಲಿ ಹರ್ಷಬಿಂದುವೊಂದು ಕಾಣಿಸಿಕೊಳ್ಳುತ್ತಿತ್ತು.

ಮಗ ಶಾಲೆಯಿಂದ ಹಿಂದಿರುಗುವ ವೇಳೆಗೆ ಪಾರ್ವತಮ್ಮ ಏನಾದರೂ ತಿಂಡಿ ಮಾಡಿಡುತ್ತಿದ್ದರು. ಚಕ್ಕುಲಿ, ಕೋಡುಬಳೆ, ಪುಳ್ಳಂಗಾಯಿ ಉಂಡೆ, ರವೇ ಉಂಡೆ, ನಿಪ್ಪಟ್ಟು ತುಂಬುವ ಬುಟ್ಟಿ ಖಾಲಿಯಾಗದಂತೆ ಪಾರ್ವತಮ್ಮ ಎಚ್ಚರವಾಗಿರುತ್ತಿದ್ದರು. ಶಂಕರ ತನಗೆ ಬೇಕಾಗುವಷ್ಟು ಸಂಗ್ರಹಿಸಿಕೊಂಡು ಮತ್ತಷ್ಟು ಬೇಡುತ್ತಿದ್ದ.

" ಸಾಕು ಶಂಕ್ರು. ಹೆಚ್ಚು ತಿಂದರೆ ಮೈಗಾಗಲ್ಲಪ್ಪಾ."

" ಎರಡು ಚಕ್ಕುಲಿ, ಎರಡು ಕೋಡುಬಳೆ ಕೊಟ್ಟುಬಿಡಮ್ಮ."

" ಕೈತುಂಬ ಇವೆಯಲ್ಲೋ !"

" ನನಗಲ್ಲಮ್ಮ-ನಿಂಗಜ್ಜೀಗೆ....."

ಪಾರ್ವತಮ್ಮನವರು ಮರುಮಾತಾಡದೆ ಅವನ ಕೈತುಂಬಿ ಕಳಿಸುತ್ತಿದ್ದರು. ಶಂಕರ ತಂದು ಕೊಡುತ್ತಿದ್ದ ತಿಂಡಿ ನಿಂಗವ್ವನಿಗೆ ಅಮೃತಪ್ರಾಯವಾಗುತ್ತಿತ್ತು. ತಿಂದರೆ ಎಲ್ಲಿ ಮುಗಿದುಹೋಗುತ್ತದೋ ಎಂದು ನಿಂಗವ್ವ ಅವುಗಳನ್ನು ಸಾವಕಾಶವಾಗಿ ಕುರುಕುತ್ತಿದ್ದಳು.

# ೩

ನಂಜುಂಡಯ್ಯನವರು ನಕ್ಕಿದ್ದುದನ್ನು ಯಾರೂ ನೋಡಿರಲಿಲ್ಲ. ‘ಸಂತೋಷ’ ಶಬ್ದ ಅವರ ಜೀವನಕೋಶದಿಂದ ಸಂಪೂರ್ಣವಾಗಿ ಕಾಣೆಯಾಗಿದ್ದಿತು. ಮನೆಗೆ ಬರುವಾಗಲೇ ಸಿಡಿಸಿಡಿ ಎಂದುಕೊಂಡೇ ಬರುವರು. ಮನೆಗೆ ಬಂದಮೇಲೂ ಅದೇ ಸಿಡಿಸಿಡಿ. ಬೆಳಗಾಗ ಐದು ಗಂಟೆ ಗೆದ್ದು ತೋಟದ ಕಡೆ ಹೋಗಿ, ಅಲ್ಲಿಯೇ ಪ್ರಾತರ್ವಿಧಿಗಳನ್ನು ತೀರಿಸಿ ಕೊಂಡು ದೇವರ ಪೂಜೆಗೆ ಹೂಗಳನ್ನಾಯ್ದು ತರುತ್ತಿದ್ದರು. ಮನೆಗೆ ಬಂದ ಕೂಡಲೆ ಸ್ನಾನ ಮುಗಿಸಿ, ದೇವರ ಪೂಜೆಗೆ ಕೂಡುತ್ತಿದ್ದರು. ಅವರ ಪೂಜೆ ಮುಗಿಯುವ ವೇಳೆಗೆ ಪಾರ್ವತಮ್ಮನವರು ಎಲೆಹಾಕಿ ಬಿಸಿ ಯಾಗಿ ಅಕ್ಕಿ ಉಪ್ಪಿಟ್ಟು, ದೋಸೆ, ಒಗ್ಗರಣೆ ಅವಲಕ್ಕಿ ಯಾವುದಾದ ರೊಂದನ್ನು ಬಡಿಸುತ್ತಿದ್ದರು. ರಾಯರು ಹೊಟ್ಟೆ ತುಂಬ ಉಪಾಹಾರ ಮಾಡಿ ಒಂದು ದೊಡ್ಡ ಗ್ಲಾಸಿನ ತುಂಬ ಕಾಫಿ ಕುಡಿದು ಮೇಲಕ್ಕೇಳು ತ್ತಿದ್ದರು.

ಗೃಹಕೃತ್ಯಕ್ಕೆ ಸಂಬಂಧಪಟ್ಟ ಮಾತುಕತೆ ಆಡುವುದಕ್ಕೆ ಪಾರ್ವತಮ್ಮ ನವರಿಗೆ ಇದೇ ವೇಳೆಯಾಗಿತ್ತು. ರಾಯರ ಉಪಾಹಾರ ಅರ್ಧ ಮುಗಿ ಯುವುದನ್ನೇ ಕಾದಿದ್ದು ಪಾರ್ವತಮ್ಮ ಮೊಸರು ಬಡಿಸುತ್ತಾ,

“ಸುಬ್ಬು ಮದುವೆ ವಿಷಯ –”

ಎನ್ನುತ್ತಿದ್ದರು. ಗಂಡನೆದುರಿಗೆ ನಿಂತು ಧೈರ್ಯವಾಗಿ ಮಾತ ನಾಡುವ ಅಭ್ಯಾಸವೇ ಪಾರ್ವತಮ್ಮನವರಿಗಾಗಿರಲಿಲ್ಲ. ಎಂದೂ ಅವರು ಆರಂಭಿಸಿದ ಪಂಕ್ತಿ ಮುಗಿಸುತ್ತಿರಲಿಲ್ಲ. ಅವರ ಸಕಲ ಸಂಭಾಷಣೆಯೂ ‘ಧ್ವನಿ’ಯಲ್ಲಿಯೇ ಮುಕ್ತಾಯವಾಗುತ್ತಿತ್ತು.

ಪಾರ್ವತಮ್ಮನವರು ಮಾತನಾಡಿದ ಎಷ್ಟೋ ಹೊತ್ತಿನ ಮೇಲೆ ರಾಯರು,

“ಏನು ಸುಬ್ಬೂ ಮದುವೆ ವಿಷಯ?” ಎಂದು ಕೇಳುತ್ತಿದ್ದರು.

“ಹೊನ್ನೇನಹಳ್ಳಿಯವರಿಗೆ ಉತ್ತರ ಹೇಳಲಿಲ್ಲ....”

"ಅವರು ವರದಕ್ಷಿಣೆ ಕೊಡುವುದಿಲ್ಲವಂತಲ್ಲ."

"ಕೊಡುವ ಸ್ಥಿತಿಯಲ್ಲಿಲ್ಲ........"

"ದರಿದ್ರನ ಮನೆ ಮಗಳನ್ನು ನನ್ನ ಮಗನಿಗೆ ತೆಂದುಕೊಳ್ಳಬೇಕೆ?"

"ಸಂಪ್ರದಾಯಸ್ಥರ ಮನೆ ಹುಡುಗಿ. ನೋಡುವುದಕ್ಕೂ ಚೆನ್ನಾಗಿದೆ."

"ಮನೆಗೆ ನಾನು ಸೊಸೆ ತರುವುದು ತಾಪೆ ಕಟ್ಟುವುದಕ್ಕಲ್ಲ—ಸಂಸಾರ ಮಾಡುವುದಕ್ಕೆ."

"ಇದು ಒಳ್ಳೆಯ ಸಂಸಾರಿಕರ ಮನೆ ಹುಡುಗಿ."

"ದರಿದ್ರರ ಸಂಬಂಧ ಬೆಳಸಿದರೆ ನಮ್ಮ ಗೌರವ ಏನಾಗಬೇಕು."

"ಹೊನ್ನೇನಹಳ್ಳಿಯವರು ದರಿದ್ರರಲ್ಲ. ಲಕ್ಷಣವಾಗಿ ವರೋಪಚಾರ ಮಾಡುತ್ತಾರೆ. ಮದುವೆಯನ್ನೂ ಚೆನ್ನಾಗಿ ಮಾಡಿಕೊಡುತ್ತಾರೆ. ವರದಕ್ಷಿಣೆ ಕೊಡಲು ಸಾಧ್ಯವಿಲ್ಲವೆಂದು ಹೇಳುತ್ತಿದಾರೆ."

"ವರದಕ್ಷಿಣೆ ಇಲ್ಲದ ಸಂಬಂಧ ನನಗೆ ಬೇಕಾಗಿಲ್ಲ."

ಎಂದು ರಾಯರು ಎದ್ದು ಬಿಟ್ಟರು.

ಕೊನೆಗೂ ರಾಯರ ಹಟವೇ ಗೆದ್ದಿತು. ರಾಮಸಾಗರದ ಲಕ್ಷ್ಮೀಪತಯ್ಯನವರು ಐದು ಸಾವಿರ ರೂಪಾಯಿ ವರದಕ್ಷಿಣೆ ಸಲ್ಲಿಸಲು ಮುಂದಾದರು. ರಾಯರು ತಮ್ಮ ಸಮ್ಮತಿ ವ್ಯಕ್ತಮಾಡಿದರು. ಪಾರ್ವತಮ್ಮನವರು ಗಂಡನ ಮಾತಿಗೆ ಹೂಗುಟ್ಟವೆ ವಿಧಿಯೇ ಇರಲಿಲ್ಲ.

ಪಾರ್ವತಮ್ಮನವರಿಗೆ ಒಂದು ಬಗೆಯಲ್ಲಿ ತೃಪ್ತಿಯೂ ಆಗಿತ್ತು. ಮಗನಿಗೆ ಮದುವೆಯಾಗುತ್ತದಲ್ಲಾ ಎನ್ನುವ ಸಂತೋಷದೊಂದಿಗೆ ಲಕ್ಷ್ಮೀಪತಯ್ಯನವರ ಮಗಳು ಗೌರಮ್ಮ ಲಕ್ಷಣವಾಗಿಯೂ ಇದ್ದುದು. ದುಡ್ಡಿನಾಶೆಯಿಂದ ಯಾವುದೋ ಬೊಂತೆ ಕಟ್ಟಿಕೊಳ್ಳಬೇಕಾಗುತ್ತದೆ ಎಂದು ಹೆದರಿದ್ದ ಪಾರ್ವತಮ್ಮನವರ ಮನಸ್ಸಿಗೆ ಸಮಾಧಾನವಾಯಿತು.

ವೈಶಾಖಮಾಸದಲ್ಲಿ ರಾಮಸಾಗರದಲ್ಲಿ ಲಗ್ನ ಯಶಸ್ವಿಯಾಗಿ ನೆರವೇರಿತು. ಮದುಮಗನ ಪರಿವಾರದೊಂದಿಗೆ ನಿಂಗವ್ವನೂ ಹೋಗಿದ್ದಳು. ಮದುವೆ ಮುಗಿಸಿಕೊಂಡು ಬಂದ ಮೇಲೆ ಪಾರ್ವತಮ್ಮನವರು ನಿಂಗವ್ವನಿಗೆ ಸೀರೆ ಕುಪ್ಪಸ ಕೊಟ್ಟರು.

ಸುಬ್ರಹ್ಮಣ್ಯನ ಹೆಗಲ ಮೇಲೆ ಹೆಚ್ಚಿನ ಜವಾಬ್ದಾರಿ ಬಿದ್ದಂತಾಯಿತು. ರಾಯರು ಕ್ರಮಕ್ರಮೇಣ ಮಗನಿಗೆ ತಮ್ಮ ವ್ಯವಹಾರದ ಪರಿಚಯಮಾಡಿಕೊಡುತ್ತ ಬಂದರು. ತೋಟದ ಕೆಲಸಮಾಡಿಸುವುದು, ಬಾಕಿ ವಸೂಲಿ, ಬಡ್ಡಿ ವಸೂಲಿಮಾಡುವುದು, ಅಮಲ್ದಾರರು, ರೆವಿನ್ಯೂ ಇನ್‌ಸ್ಪೆಕ್ಟರು, ಶಾನುಭೋಗರ ಯೋಗಕ್ಷೇಮ ನೋಡಿಕೊಳ್ಳುವುದು ಮೊದಲಾದ ಕೆಲಸಕಾರ್ಯಗಳು ಸುಬ್ರಹ್ಮಣ್ಯನ ಪಾಲಿಗೆ ಬಂದುವು.

ಆದರೆ ಸುಬ್ರಹ್ಮಣ್ಯ ಬಿಡಿ ಕಾಸೂ ಮುಟ್ಟುವಂತಿರಲಿಲ್ಲ. ಪ್ರತಿ ಕಾಸನ್ನೂ ತಂದು ತಂದೆಗಿತ್ತು, ಸಮಂಜಸವಾಗಿ ಲೆಕ್ಕ ಒಪ್ಪಿಸಬೇಕಾಗಿತ್ತು.

ಮದುವೆಯಾದ ಮೇಲೆ ಸಹಜವಾಗಿ ಸುಬ್ರಹ್ಮಣ್ಯನ ಖರ್ಚುವೆಚ್ಚಗಳು ಬೆಳೆದಿದ್ದುವು. ಅವನು ಮಾವನ ಮನೆಗೆ ಹೊರಟು ನಿಂತರೆ ರಾಯರು ಲೆಕ್ಕಹಾಕಿ, ಬಸ್‌ಚಾರ್ಜು, ಮೇಲು ಖರ್ಚು ಎಂದು ಹೇಳಿ ಕೈಗೆ ಐದು ರೂಪಾಯಿ ಹಾಕುತ್ತಿದ್ದರು. ಸುಬ್ರಹ್ಮಣ್ಯ ಒಳಗೇ ಕುದಿಯುತ್ತಿದ್ದರೂ ತಂದೆಯೆದುರಿಗೆ ಚಕಾರ ಶಬ್ದವೆತ್ತಲು ಧೈರ್ಯಮಾಡುತ್ತಿರಲಿಲ್ಲ. ತಾಯಿಯ ಎದುರಿಗೆ ತನ್ನ ದುಃಖ ತೋಡಿಕೊಳ್ಳುತ್ತಿದ್ದ. ಪಾರ್ವತಮ್ಮ ಮುಖ ಚಿಕ್ಕದು ಮಾಡಿಕೊಂಡು ಅಕ್ಕಿನಕಂದಲಿನಲ್ಲಿಯೋ, ದೇವರ ಪೆಟ್ಟಿಗೆಯಲ್ಲಿಯೋ ತಾವು ಕೂಡಿಟ್ಟಿದ್ದ ಒಂದೆರಡು ರೂಪಾಯಿಗಳನ್ನು ಮಗನ ಕೈಗೆ ಹಾಕುತ್ತಿದ್ದರು.

ಮದುವೆ ಮುಗಿದ ವರ್ಷವೇ ಗೌರಿ ಅತ್ತೆಯ ಮನೆ ಸೇರಿದಳು. ಮೋಡ ಮುಸುಕಿದ್ದ ಪಾರ್ವತಮ್ಮನವರ ಜೀವನಾಕಾಶದಲ್ಲಿ ಮಿಂಚಿನ ಬಳ್ಳಿ ಸುಳಿದಂತಾಯಿತು.

ಗೌರಿ ಹೆಸರಿಗೆ ತಕ್ಕಂತೆ ಗೌರಮ್ಮನೇ ಆಗಿದ್ದಳು. ಎತ್ತರವೂ ಅಲ್ಲ, ಕುಳ್ಳೂ ಅಲ್ಲ. ಸೌಷ್ಠವವಾದ ಅಂಗಾಂಗಗಳು. ಬಟ್ಟ ಮುಖ. ದಟ್ಟವಾದ ಕೇಶರಾಶಿ.

ಗೌರಿ ಅನುಕೂಲಸ್ಥರ ಮನೆಯ 'ಅಚ್ಚರಿ ಕಂದ'ನಾಗಿ ಬೆಳೆದಿದ್ದುದರಿಂದ ಅವಳಿಗೆ ಕೆಲಸ ಕಾರ್ಯಗಳ ವಿಶೇಷ ಪರಿಚಯವಿರಲಿಲ್ಲ. ಅವಳನ್ನು ಕೂಡಲೆ ಗಾಣಕ್ಕೆ ಕಟ್ಟಿ ದುಡಿಸಬೇಕೆಂಬ ಇಚ್ಛೆ ಪಾರ್ವತಮ್ಮನವರಿಗಿರಲಿ

ಆದರೆ ಪಾರ್ವತಮ್ಮನವರು ಸೊಸೆಯನ್ನು ಕೂಡಿಸಿ ಪೂಜಿಸುವಂತಿರಲಿಲ್ಲ. ತಮ್ಮದು ಎಷ್ಟಾದರೂ ಬಿದ್ದುಹೋಗುವ ಶರೀರ. ನಾಳೆ ಮನೆ ಯಜಮಾನಿತಿಯಾಗುವವಳು ಗೌರಮ್ಮ. ಅವಳಿಗೆ ಮನೆಗೆಲಸ, ಜವಾಬ್ದಾರಿಯ ಅರಿವಾಗಬೇಕೆಂದು ಅತ್ತೆ ಆಗಾಗ್ಗೆ ಕೆಲಸ ಹೇಳಿಕೊಡುತ್ತಿದ್ದರು.

ರಾಯರ ಬೆಳಿಗ್ಗೆಯ ಪೂಜೆಗೆ ಮಣೆಹಾಕಿ, ಅರ್ಘ್ಯಪಾತ್ರೆಯನ್ನಿಟ್ಟು ದೇವರಿಗೆ ದೀಪ ಹಚ್ಚಿಡುವ ಕೆಲಸವನ್ನು ಪಾರ್ವತಮ್ಮನವರು ಸೊಸೆಗೆ ವಹಿಸಿದ್ದರು.

ಒಂದು ದಿನ ರಾಯರು ದೇವರ ಪೂಜೆಗೆ ಕುಳಿತರು. ಆಚಮನ ಮಾಡಲು ಉದ್ಧರಣೆ ಕೈಗೆತ್ತಿಕೊಂಡಾಗ ಅದರ ಬದಿಯಲ್ಲಿ ಮೆತ್ತಿಕೊಂಡಿದ್ದ ಹುಣಿಸೇ ಹಣ್ಣಿನ ತುಣುಕು ಅವರ ಕೈಗೆ ಹತ್ತಿಕೊಂಡಿತು. ರಾಯರು ಕಣ್ಣು ಕೆಂಪಗೆ ಮಾಡಿಕೊಂಡು,

" ಲೇ " ಎಂದು ಕೂಗಿದರು.

ರಾಯರ ಧ್ವನಿ ಕೇಳಿದ ಪಾರ್ವತಮ್ಮನವರ ಜಂಘಾಬಲವೇ ಉಡುಗಿಹೋಗಿತ್ತು. ಗಡಗಡ ನಡುಗುತ್ತಾ ಬಾಗಿಲ ಬಳಿ ಬಂದು ನಿಂತರು.

" ಯಾರಿವತ್ತು ದೇವರ ಪೂಜೆಗೆ ಅಣಿಮಾಡಿದವರು ?"

" ಗೌರಿ–ಏಕೆ ? ಏನಾಗಿದೆ ? "

" ಏನಾಗಿದೆಯೇ ! ನಿನ್ನ ಪಿಂಡವಾಗಿದೆ. ಉದ್ಧರಣೆ ತುಂಬ ಹುಣಿಸೇ ಹಣ್ಣು. "

ಎಂದು ಉದ್ಧರಣೆಯನ್ನು ಪಾರ್ವತಮ್ಮನವರ ಕಡೆಗೆಸೆದರು. ಪಾರ್ವತಮ್ಮನವರು ಒಳಗಿನಿಂದ ಬೇರೆ ಉದ್ಧರಣೆ ತಂದು ರಾಯರ ಮುಂದಿಟ್ಟು,

" ಗೌರಿಗೆ ಎಲ್ಲ ಹೊಸದು. ನಾಳೆಯಿಂದ ಪೂಜೆಗೆ ನಾನೇ ಅಣಿ ಮಾಡುತ್ತೇನೆ."

" ಅವಳೇನು ಇಲ್ಲಿ ದಿಮಾಕು ಮಾಡೋಕೆ ಬಂದಿದ್ದಾಳೇನು ? ತೌರುಮನೆ ಆಟ ಇಲ್ಲಿ ನಡೆಯುವುದಿಲ್ಲ ಎಂದು ಹೇಳು."

"ನಮ್ಮ ಮನೆ ಕೆಲಸವೆಲ್ಲಾ ನಾಲ್ಕೇ ದಿನದಲ್ಲಿ ಅವಳಿಗೆ ಹೇಗೆ ಬರಬೇಕು. ಹುಡುಗಿ ಜಾಣೆ-ಬೇಗ ಕಲಿತುಕೊಳ್ಳುತ್ತಾಳೆ. ಗದರಿಸಿ ಕೊಂಡರೆ, ಕಂಡವರ ಮನೆಯ ಮಗು ನೊಂದುಕೊಳ್ಳುತ್ತದೆ."

"ಸಾಕು ಬಾಯಿ ಮುಚ್ಚು. ಹೇಳಿದಷ್ಟು ಮಾಡು"

ಎಂದು ರಾಯರು ಮೂರನೆಯ ಕಾಲದಲ್ಲಿ ಮಂತ್ರ ಹೇಳಲಾರಂಭಿಸಿದರು.

ರಾಯರಿಗೂ ಅತ್ತೆಗೂ ಆದ ಸಂಭಾಷಣೆಯನ್ನು ಒಳಗೇ ಕೇಳಿಸಿ ಕೊಂಡ ಗೌರಿ ಭೂಮಿಗಿಳಿದುಹೋಗಿದ್ದಳು. ಅವಳ ಬೊಗಸೆಗಣ್ಣುಗಳಿಂದ ಧಾರೆ ಹೊರಟುಬಿಟ್ಟಿತ್ತು. ರಾಯರು ಉಪಾಹಾರ ಮುಗಿಸಿ ಕೊಂಡು ಹೋದ ಮೇಲೆ ಪಾರ್ವತಮ್ಮನವರು ಸೊಸೆಯನ್ನು ಹತ್ತಿರ ಕರೆದು,

"ಹುಚ್ಚು ಹುಡುಗಿ—ಒಂದು ಸಣ್ಣ ಮಾತಿಗೆ ಇಷ್ಟು ಅಳುತ್ತಾರೇನೇ! ಅವರದು ಮುಂಗೋಪದ ಸ್ವಭಾವ. ಬಾಯಿಗೆ ಮಾತು ಬಂದರೆ ಆಡಿಬಿಡುತ್ತಾರೆ—ಮರುಕ್ಷಣವೇ ಅದನ್ನು ಮರೆತುಬಿಡುತ್ತಾರೆ."

ಎಂದು ಸಂತೈಸಿದರು.

ಸುಬ್ರಹ್ಮಣ್ಯನಿಗೆ ಲಗ್ನವಾದುದು ಪಾರ್ವತಮ್ಮನವರ ಹೃದಯ ದಿಂದ ದೊಡ್ಡ ಹೊರೆಯನ್ನು ಇಳುಹಿದ್ದುದಲ್ಲದೆ ನಿಂಗವ್ವನ ಹೃದಯದ ಭಾರವನ್ನೂ ಹಗುರಮಾಡಿತ್ತು. ಸೊಸೆಯಮ್ಮನನ್ನು ನಿಂಗವ್ವ ಹತ್ತಿರ ಕೂಡಿಸಿಕೊಂಡು ಲೋಕಾಭಿರಾಮವಾಗಿ ಉಪದೇಶದ ಮಾತುಗಳನ್ನು ಹೇಳುತ್ತಿದ್ದಳು. ಗಂಡ, ಮಾವ, ಅತ್ತೆ, ಮೈದುನರ ಸ್ವಭಾವ ಪರಿಚಯ ಮಾಡಿಕೊಟ್ಟು ಸೊಸೆ ಅವರಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ತಿಳಿಸುತ್ತಿದ್ದಳು.

"ದೊಡ್ಡಪ್ಪಾವ್ರನ್ನು ನೋಡಿಕೊಂಡು ಇದ್ಬುಬಿಡವ್ವ. ಅಳ್ಳಿ ಮುಕ್ಕ ನಂಗೇನು ತಿಳೀತೈತೆ" ಎಂದು ಹೇಳಿದಲ್ಲದೆ ನಿಂಗವ್ವನಿಗೆ ತೃಪ್ತಿಯಾಗದು."

ಕೆಲವು ದಿನಗಳು ಕಳೆಯುವುದರಲ್ಲಿ ಗೌರಿಯ ಚರ್ಯೆಯಲ್ಲಾಗಿದ್ದ ಕೆಲವು ಬದಲಾವಣೆಗಳನ್ನೂ ನಿಂಗವ್ವ ಕಂಡುಕೊಂಡಳು. ದಿನಕ್ಕೆ

ಹತ್ತು ಬಾರಿಯಾದರೂ ನಿಂಗವ್ವನನ್ನು ಮಾತನಾಡಿಸುತ್ತಿದ್ದ ಗೌರಿ ಇದ್ದಕ್ಕಿದ್ದಂತೆ ಬಿಗುಮಾನ ತಳೆದಿದ್ದಳು.

ಒಂದು ದಿನ ಸಮಯ ಸಾಧಿಸಿ ನಿಂಗವ್ವ ಪ್ರಶ್ನೆ ಕೇಳಿಯೇ ಬಿಟ್ಟಳು.

"ನನ್ನ ಕಂಡ್ರೆ ಯಾಕೆ ಹಾರ್ತೀ, ಗೌರವ್ವ. ಆಡಬಾರದ್ದು ನಾನು ಏನಾದ್ರೂ ಆಡಿದ್ನಾ?"

ಗೌರಿಗೆ ಧರ್ಮಸಂಕಟಕ್ಕಿಟ್ಟುಕೊಂಡಿತು. ಹೇಳುವುದಕ್ಕಿಲ್ಲ— ಹೇಳದಿರುವುದಕ್ಕಿಲ್ಲ. ತನ್ನ ಚರ್ಯೆಯಿಂದ ನಿಂಗವ್ವನಿಗೆ ಮನೋವ್ಯಥೆ ಯಾಗಿದೆಯೆಂಬುದನ್ನು ಅರಿತಿದ್ದಳು. ಆ ವ್ಯಥೆಯನ್ನು ನೀಗಬೇಕೆಂಬ ಆಕಾಂಕ್ಷೆಯೂ ಅವಳ ಮನಸ್ಸನ್ನು ವ್ಯಾಪಿಸಿತ್ತು. ನಿಂಗವ್ವನ ಕಣ್ಣಲ್ಲಿ ನೀರು ಕಂಡೊಡನೆಯೇ ಗೌರಿಯ ನಿರ್ಧಾರ ಅಲುಗಾಡಿತು.

"ನಿನ್ನ ಮೇಲೆ ನನಗೇನು ಕೋಪವಿಲ್ಲ ನಿಂಗವ್ವ."

"ಕೋಪವಿಲ್ದೆ ನನ್ನ ಮಾತಾಡ್ಸೋದು ಬಿಟ್ಟೆಯಾ ತಾಯಿ."

"ನಿಜ ಹೇಳುತ್ತೇನೆ, ಆದರೆ ಗುಟ್ಟು ನಮ್ಮಿಬ್ಬರಲ್ಲೇ ಇರಬೇಕು."

"ಅಂಗೇ ಆಗ್ಲಿ."

"ನಿನ್ನ ಕೈಯಲ್ಲಿ ನಾನು ಮಾತಾಡಿದ್ದುದನ್ನು ಕಂಡು ಯಜಮಾನರು ಗದರಿಸಿಕೊಂಡರು."

"ನನ್ಕೈಲಿ ಮಾತಾಡೋದು ತಪ್ಪಂತಾ!"

"ನೀನು ಮನೆ ಎರಡನೆಯ ಯಜಮಾನಿತಿ–ನಿಂಗವ್ವ ಕೆಲಸ ಮಾಡುವ ಹೆಂಗಸು. ಅವಳಲ್ಲಿ ನಿನಗೆಷ್ಟು ಸಲಿಗೆಯೇ, ಎಂದು ಕೋಪ ಮಾಡಿಕೊಂಡರು."

ನಿಂಗವ್ವ ತನ್ನ ಅಂತರಂಗಕ್ಕಾದ ಕೋಟಲೆಯನ್ನು ಹೊರಗೆಡಹ ಲಿಲ್ಲ. ಮನಸ್ಸಿಗಾದ ಅಪಾರ ವೇದನೆಯನ್ನಡಗಿಸಿಕೊಂಡು ನಸು ನಗುತ್ತ,

"ಸುಬ್ಬಪ್ಪ ಯಾವಾಗ್ಲು ಅಂಗೆ, ಓಗ್ಲಿ ಬಿಡವ್ವಾ. ನಿನ್ನ ಗಂಡ ಏಳಿದಾಗೇ ಮಾಡು. ಇವತ್ತಿದ್ದು ನಾಳೆ ಸಾಯೋ ಮುದಿಕೊರಡು ನಾನು. ನನ್ನ ಮಾತು ಯಾಸಾಟೇಕೆ. ಗಂಡ ಹೆಡ್ತಿ ನೀವು ಚೆಂದಾ ಕಿರೋದು ನಂಗೂ ಬೇಕಾಗಿರೋದು" ಎಂದು ಹೇಳಿ ಮುಗಿಸಿದಳು.

೪

ಸೊಸೆ ಮನೆಗೆ ಬಂದು ವರ್ಷ ಕಳೆದಿತ್ತು. ನಂಜುಂಡಯ್ಯನವರ ಮನೆಯ ರೀತಿ ನೀತಿಗಳನ್ನರಿತು ಗೌರಮ್ಮ ಎಲ್ಲರ ಅಚ್ಚುಮೆಚ್ಚಾದಳು. ಮಾವನವರ 'ಕುಸುಬಿಷ್ಟಿ'ಯನ್ನರಿತ ಗೌರಮ್ಮ ಅವರ ಮನಸ್ಸಿಗೆ ಸ್ವಲ್ಪವೂ ಬೇಸರವಾಗದಂತೆ ವರ್ತಿಸುತ್ತಿದ್ದಳು. ಸೊಸೆಯ ಸದ್ವರ್ತನೆ ಕಂಡು ನಂಜುಂಡಯ್ಯನವರಿಗೆ ಕೋಡು ಬಂದಂತಾಗಿತ್ತು. ಸುಬ್ರಹ್ಮಣ್ಯ ಹೆಂಡತಿಯ ಮೇಲೆ ಸಕಾರಣವಾಗಿಯೊ ವಿನಾಕಾರಣವಾಗಿಯೊ ರೇಗಿದರೆ ಸ್ವಯಂ ನಂಜುಂಡಯ್ಯನವರೇ ಸೊಸೆಯ ಪಕ್ಷ ಹಿಡಿದು ಮಗನನ್ನು ದಂಡಿಸುತ್ತಿದ್ದರು.

ಗಂಡನಲ್ಲಿ ತಲೆದೋರಿದ ಮಾರ್ಪಾಟು ಕಂಡು ಪಾರ್ವತಮ್ಮನಿಗೆ ಅತ್ಯಾನಂದವಾಯಿತು. 'ಕಂಡವರ ಮನೆಯ ಹೆಣ್ಣುಮಗು ಎಲ್ಲಿ ಕೊರಗುತ್ತದೆಯೋ ?–ಧೂಮಕೇತುಗಳಂತಿದ್ದ ಮಾವ, ಗಂಡ ಇಬ್ಬರ ಬಿರುಸು ನುಡಿಗಳಿಗೆ ಎಲ್ಲಿ ಬಾಡುತ್ತದೆಯೋ' ಎಂದು ಭೀತರಾಗಿದ್ದ ಪಾರ್ವತಮ್ಮನವರ ಮನಸ್ಸಿಗೆ ನೆಮ್ಮದಿಯಾಗಿತ್ತು.

ಎರಡು ವರ್ಷದಿಂದ ಸಾಕು ಸಾಲದಾಗಿ ಹುಯಿದಿದ್ದ ಮಳೆ ಆ ವರ್ಷ ತನ್ನ ಹಳೆಯ ಬಾಕಿ ತೀರಿಸಲು ಮನಸ್ಸು ಮಾಡಿತು. ವರುಣ ದೇವ ರೊಚ್ಚಿಗೆದ್ದು ಕಟಾಕ್ಷ ಬೀರಿದಂತಾಗಿತ್ತು. ಹಿಡಿದ ಮಳೆ ಬಿಡಲಿಲ್ಲ. ಊರಿನ ಹಳೆಯ ಮನೆಗಳು ಕೊಚ್ಚಿಕೊಂಡು ಹೋದುವು. ನಂಜುಂಡಯ್ಯನವರ ಮನೆಯೂ ಅಲ್ಲಲ್ಲಿ ಸೋರತೊಡಗಿತು. ತಾವರೆ ಕೆರೆ ತುಂಬಿ ಕೋಡಿಬಿದ್ದಿತ್ತು. ಸಮೀಪದಲ್ಲಿದ್ದ ಕೆಲವು ಕೆರೆಗಳು ಒಡೆದುಹೋಗಿದ್ದುವು.

ಹಳ್ಳಿಯ ಜನರಲ್ಲಿ ಹಾಹಾಕಾರವಾರಂಭವಾಯಿತು. ಮಳೆ ನಿಂತು, ಬಿಸಿಲು ಬರದಿದ್ದರೆ ಹಾಕಿದ್ದ ಪೈರು ಕೊಳೆತುಹೋಗುತ್ತದೆ ಎಂಬ ಭಯ ಎಲ್ಲರನ್ನೂ ಆವರಿಸಿತು. ರಾಗಿ ಬೆಳೆ ಅರ್ಧಕ್ಕರ್ಧ ನಾಶವಾಗಿ ಹೋಗಿತ್ತು. ಭತ್ತದ ಮೇಲೇ ಎಲ್ಲರೂ ಆಸೆಯಿಟ್ಟುಕೊಂಡಿದ್ದರು. ಇನ್ನು ಜನ್ಮ

ಜನ್ಮಕ್ಕೂ ಮಳೆ ಬೇಡ ಎನ್ನುವಷ್ಟು ಎಲ್ಲರಿಗೂ ಬೇಸರವಾಗಿತ್ತು. ವಾರಕ್ಕೊಮ್ಮೆ ಕೂಡ ಸೂರ್ಯದರ್ಶನವಾಗುವುದು ದುರ್ಲಭವಾಗಿತ್ತು.

ಇಷ್ಟು ಘೋರವಾಗಿ ಮಳೆ ಬೀಳುತ್ತಿದ್ದರೂ ನಂಜುಂಡಯ್ಯನವರ ಕ್ರಮ ತಪ್ಪುತ್ತಿರಲಿಲ್ಲ. ಸೂರ್ಯ ಹುಟ್ಟಬಹುದು, ಹುಟ್ಟದಿರಬಹುದು–ಆದರೆ ರಾಯರ ಸ್ನಾನ, ಪೂಜೆ, ಹೊಲಗದ್ದೆಗಳ ಪರೀಕ್ಷೆ, ಬಾಕಿವಸೂಲಿ ಯಥಾಕ್ರಮದಂತೆ ಸಾಂಗವಾಗಿ ನಡೆದಿತ್ತು.

ಗಂಡನ ಹಟಮಾರಿತನ ಪಾರ್ವತಮ್ಮನವರ ಮನಸ್ಸಿಗೆ ವಿಶೇಷ ಆತಂಕವನ್ನುಂಟುಮಾಡಿತ್ತು. ಒಂದು ದಿನ ಧೈರ್ಯ ತಂದುಕೊಂಡು,

"ಮಳೆ ಸ್ವಲ್ಪ ಕಡಿಮೆಯಾಗುವ ವರೆಗಾದರೂ ಮನೆಯಲ್ಲಿ ನಿಲ್ಲ ಬಾರದೇ ?" ಎಂದು ಕೇಳಿದರು.

ರಾಯರು ಸರ್‍ರನೆ ತಿರುಗಿ, ಹೆಂಡತಿಯನ್ನು ದಿಟ್ಟಿಸಿ ನೋಡುತ್ತಾ,

"ಮನೆಯಲ್ಲಿ ನಿಂತು ಮಣ್ಣು ಹುಯಿದುಕೊಳ್ಳಲೇ ?" ಎಂದರು.

"ದಿನಗಳೆದಂತೆ ಮೈ ದುರ್ಬಲವಾಗುತ್ತದೆ. ಕೆಟ್ಟ ಮಳೆ–ಏನು ಕೇಡು ಸೂಚಿಸುವುದಕ್ಕೆ ಹೀಗೆ ಮಳೆ ಬೀಳುತ್ತಿದೆಯೋ ಕಾಣೆ. ಥಂಡಿಯಲ್ಲಿ ನೀವು ಓಡಿಯಾಡಿದರೆ ಮೈ ತಡೆಯುವುದಿಲ್ಲ."

"ಏನೂ ಆಗುವುದಿಲ್ಲ, ರಾತ್ರೀಗೇ ಸ್ವಲ್ಪ ಕಷಾಯ ಮಾಡಿಕೊಡು. ಹೊಟ್ಟೆಗಷ್ಟು ಶುಂಠಿ, ಮೆಣಸು ಬಿದ್ದರೆ ಎಂಥ ಥಂಡಿಯನ್ನಾದರೂ ಹೊಡೆದು ಹಾಕುತ್ತದೆ."

ಎಂದು ತಮ್ಮ ತೊಂಬತ್ತು ತೇಪೆಯ ಹರಕು ಚತ್ರಿ ಹಿಡಿದು ರಾಯರು ಹೊರಟೇಬಿಡುತ್ತಿದ್ದರು.

ಪಾರ್ವತಮ್ಮನವರ ಭವಿಷ್ಯ ಸುಳ್ಳಾಗಲಿಲ್ಲ. ರಾಯರಿಗೆ ಎಂಟು ದಿನಗಳಲ್ಲಿ ಜ್ವರ ಕಾಣಿಸಿಕೊಂಡಿತು. ಕೈಕಾಲುಗಳು ಹಿಡಿದುಕೊಂಡುವು. ಉಸಿರಾಡುವುದಕ್ಕೂ ಅವಕಾಶಕೊಡದಂತೆ ಕೆಮ್ಮು ಅವರನ್ನು ಕಾಡ ತೊಡಗಿತು.

ಹೆಂಡತಿಯ ಮಾತು ಕೇಳಿದ್ದರೆ ಚೆನ್ನಾಗಿತ್ತು ಎಂದು ರಾಯರಿಗೆ ಆಗ ಭಾಸವಾಯಿತು. ಆದರೆ ಅದನ್ನೊಪ್ಪಿಕೊಳ್ಳಲು 'ಶ್ರೀಮದ್ಗಾಂಭೀರ್ಯ.' ಕೆಮ್ಮಿಕೊಂಡು ಹಾಸಿಗೆ ಹಿಡಿದು ಮಲಗಿದರೂ ಅವರ ದರ್ಪ ಕಡಿಮೆ

ಆಗಲಿಲ್ಲ. ಮಲಗಿದಲ್ಲಿಂದಲೇ ಎಲ್ಲಾ ವ್ಯವಹಾರ ನಡಸುತ್ತಿದ್ದರು. ಅವರ ಕ್ರಮವನ್ನು ಸುಬ್ರಹ್ಮಣ್ಯ ಅನುಸರಿಸಬೇಕಾಯಿತು. ರಾಯರು ಬೆಳಗಾಗ ಎದ್ದ ಕೂಡಲೆ,

"ಸುಬ್ಬು ಗದ್ದೆ ಕಡೆ ಹೋದನೇ ?" ಎಂದು ಕೇಳುತ್ತಿದ್ದರು.

"ಹೋದ" ಎಂದು ಪಾರ್ವತಮ್ಮನವರು ಹೇಳಿದರೆ ಗುಡುಗು ಮಿಂಚು ಸುಳಿಯುತ್ತಿರಲಿಲ್ಲ. ಅವನು ಮನೆಯಲ್ಲಿಯೇ ಇದ್ದುದನ್ನು ಕಂಡರೆ ರಾಯರು ಕೆರಳಿಬಿಡುತ್ತಿದ್ದರು.

"ನಾನು ಕಣ್ಣು ಮುಚ್ಚಿಕೊಂಡ ದಿನವೇ ಆಸ್ತಿಯೆಲ್ಲಾ ಎಕ್ಕ ಹುಟ್ಟಿಹೋಗುತ್ತದೆ. ಬೆಳಗ್ಗೆ ಏಳು ಗಂಟೆಯಾದರೂ ಹಾಸಿಗೆ ಬಿಡದಿರುವ ಸೋಮಾರಿಗಳು, ಗದ್ದೆ ತೋಟ ಮಾಡಿ ಪೂರೈಸುತ್ತಾರೆಯೇ ?"

ಎಂದು ಲೊಟಕುತ್ತಿದ್ದರು. ತಂದೆಯ ಪರಶುವಾಕ್ಕುಗಳನ್ನು ಕೇಳಲಾರದೆ ಸುಬ್ರಹ್ಮಣ್ಯ ಅವರು ಏಳುವ ಮುನ್ನವೇ ಎದ್ದು ಸ್ನಾನ ಪೂಜೆ, ಉಪಾಹಾರ ಮುಗಿಸಿಕೊಂಡು ಗದ್ದೆಯ ಕಡೆ ಹೊರಟು ಹೋಗುತ್ತಿದ್ದ.

ಪಾರ್ವತಮ್ಮನವರ ಶುಂಠಿ, ಮೆಣಸು ಕಷಾಯವಾಗಲಿ, ಮಲ್ಲಿಕಾರ್ಜುನ ಪಂಡಿತರ ಕುಪ್ಪಿ ಮಾತ್ರೆಯಾಗಲಿ ಯಾವ ಕೆಲಸಕ್ಕೂ ಬರಲಿಲ್ಲ. ರಾಯರ ಪರಿಸ್ಥಿತಿ ದಿನದಿನಕ್ಕೆ ಕಂಗೆಡುತ್ತ ಬಂದಿತು. ಸುಬ್ರಹ್ಮಣ್ಯ, ಪಾರ್ವತಮ್ಮನವರು ಮಾತನಾಡಿಕೊಂಡು ಡಾಕ್ಟರನ್ನು ಬರಮಾಡಿಕೊಂಡು 'ಸೂಜಿಮದ್ದು' (ಇಂಜೆಕ್ಷನ್) ಚಿಕಿತ್ಸೆ ಆರಂಭ ಮಾಡಿಸಿದರು.

ಪಾರ್ವತಮ್ಮನವರು ಭೂಮಿಗಿಳಿದುಹೋದರು. ಗಂಡನ ಅಸಹಾಯಕ ಸ್ಥಿತಿ–ಅದಕ್ಕಿಂತಲೂ ಹೆಚ್ಚಾಗಿ ಅವರಿಗೆ ಯಾವ ನೆರವನ್ನೂ ನೀಡಲಾಗದ ತಮ್ಮ ಅಸಹಾಯಕ ಸ್ಥಿತಿಯನ್ನು ನೆನೆದು ಮರುಗಿದರು.

ಮನೆಯಲ್ಲಿ ಕತ್ತಲೆ ಮುಸುಕಿದಂತಾಯಿತು. ಯಾರ ಮುಖದಲ್ಲಿಯೂ ಗೆಲುವಿಲ್ಲ. ಭಯ, ಶಂಕೆ, ಆತಂಕ, ಮನೆಯನ್ನು ಕಬಳಿಸಿದ್ದುವು.

ಪಾರ್ವತಮ್ಮ ಅನ್ನ, ನಿದ್ರೆ ತೊರೆದುಬಿಟ್ಟರು. ಪತಿಯ ಆರೋಗ್ಯವೊಂದಲ್ಲದೆ ಅವರಿಗೆ ಯಾವುದೂ ಬೇಡವಾಯಿತು. ರಾಯರು ಹಾಸಿಗೆ

ಹತ್ತಿ ಮಲಗಿದ ಮೇಲೆ ಸುಬ್ರಹ್ಮಣ್ಯನ ಜವಾಬ್ದಾರಿ ಹೆಚ್ಚಿತು. ಹವಣರಿ ಯದ ಕೆಲಸಕ್ಕೆ ಬೇಸತ್ತು ಅವನು ರೇಗುವುದೂ ಹೆಚ್ಚಿತು.

ಪತಿಯ ಶುಶ್ರೂಷೆಗೆ ನಿಂತಿದ್ದ ಪಾರ್ವತಮ್ಮನವರನ್ನು ಯಾರೂ ಮಾತಾಡಿಸುವಂತಿರಲಿಲ್ಲ. ಅಡಿಗೆಯ ಕೆಲಸ ಗೌರಮ್ಮನ ಕೊರಳಿಗೆ ಗಂಟು ಬಿದ್ದಿತು. ಹೊರಗಿನ ಎಲ್ಲ ಕೆಲಸದ ಜವಾಬ್ದಾರಿಯನ್ನೂ ನಿಂಗಮ್ಮ ಹೊತ್ತುಕೊಂಡಳು. ದನಗಳು ಮನೆ ಸೇರಿದವೇ ಇಲ್ಲವೇ ಎಂದು ನೋಡಿಕೊಳ್ಳುವುದು, ಅವುಗಳಿಗೆ ಹೊತ್ತಿಗೊತ್ತಿಗೆ ಮೇವು ಹಾಕುವುದು, ಕರುಬಿಟ್ಟು ಹಾಲು ಕರೆಯುವುದು, ಕೊಟ್ಟಿಗೆ ಶುಚಿಯಾಗಿಟ್ಟಿರುವುದು, ಸಗಣಿಯನ್ನು ಗೊಬ್ಬರದ ಗುಂಡಿಗೆ ಸಾಗಿಸುವುದು ಮೊದಲಾದ ತನ್ನ ನಿತ್ಯಕ್ರಿಯೆಗಳ ಜೊತೆಗೆ ನಿಂಗವ್ವ ಅಮ್ಮಾವರು, ಮಕ್ಕಳ ಯೋಗಕ್ಷೇಮ ವನ್ನೂ ನೋಡಿಕೊಳ್ಳುತ್ತಿದ್ದಳು.

ಶಂಕರನ ಪೂರ್ಣ ಜವಾಬ್ದಾರಿ ಅವಳ ಮೇಲೆ ಬಿದ್ದಿತ್ತು.

ನಿಂಗವ್ವನ ನಿರಪೇಕ್ಷಸೇವೆ ಸುಬ್ರಹ್ಮಣ್ಯನ ಮನಸ್ಸಿನ ಮೇಲೂ ಪ್ರಭಾವ ಮೂಡಿತು. ರಾಯರು ಒಳಗೆ ನರಳುತ್ತ ಮಲಗಿದ್ದರೆ ಪಡಸಾಲೆ ಯಲ್ಲಿ ನಿಂಗವ್ವ ಹಣತೆ ಉರಿಸಿಕೊಂಡು ರಾತ್ರಿ ನೂಕವಳು. ಒಮ್ಮೊಮ್ಮೆ ಹೊರಗೆದ್ದು ಬಂದ ಸುಬ್ರಹ್ಮಣ್ಯ ನಿಂಗವ್ವನನ್ನು ನೋಡಿ,

"ಮಲಗುವುದಿಲ್ಲವೇ ನಿಂಗವ್ವ" ಎಂದು ಕೇಳುತ್ತಿದ್ದ.

"ನಿದ್ದೆ ಬರಾಕಿಲ್ಲಾಪ್ಪಾ."

"ಮಲಗಿಕೋ ಹೋಗಮ್ಮ. ನೀನು ವಯಸ್ಸಾದವಳು. ಹೀಗೆ ನಿದ್ದೆ ಕೆಟ್ಟರೆ ಮೈಗಾಗುತ್ತದೆಯೇ?"

"ರಾಯರು ಎದ್ದ ಹೊರತೂ ನಂಗೆ ನಿದ್ದೆ ಬರತೈತಾ ಸುಬ್ಬಪ್ಪ. ಅನ್ನಾ ಆಕೋ ದಣಿ ಅವರು ಆಸಿಗೆ ಅತ್ತಿ ಮಲಗಿಬುಟ್ಟೆದ್ರೆ ನಾವು ಆಯಾಗಿ ಮಲಗೋಣವಾ?"

ಸುಬ್ರಹ್ಮಣ್ಯನಿಗೆ ಹೊಸ ಪ್ರಪಂಚವೊಂದರ ಅರಿವಾದಂತಾಯಿತು. 'ಏನೂ ಕೆಲಸಕ್ಕೆ ಬಾರದ ಆಳ ಮಗಳು. ನಮ್ಮ ಮನೆ ಜೀತ ಮಾಡಿ ಹೊಟ್ಟೆ ಹೊರೆದುಕೊಳ್ಳುವಳು. ಇವಳಲ್ಲಿ ಇಂಥ ಪ್ರೇಮವೇ, ಕೃತಜ್ಞ ತೆಯೇ–ತ್ಯಾಗವೇ?' ಎಂದು ಅವನು ಅಚ್ಚರಿಪಟ್ಟುಕೊಂಡ.

ಡಾಕ್ಟರು ಕೈಕೊಡವಿ ಕೊನೆಯ ಮಾತು ಹೇಳಿಬಿಟ್ಟರು.

"ಇದು ಹೋಪ್‌ಲೆಸ್ ಕೇಸ್ ಸರ್. ನಮ್ಮ ಕೈಯ್ಯಲ್ಲಾಗುವುದನ್ನೆಲ್ಲಾ ಮಾಡಿಯಾಯಿತು. ಬೆಂಗಳೂರಿಗೋ ಮೈಸೂರಿಗೋ ಕಳಿಸಿದರೆ ಗುಣವಾಗಬಹುದು. ಇಲ್ಲಿ ನಾನೇನೂ ಮಾಡಲು ಸಾಧ್ಯವಿಲ್ಲ" ಎಂದು ಖಡಾಖಂಡಿತವಾಗಿ ಹೇಳಿಬಿಟ್ಟರು.

ಪಾರ್ವತಮ್ಮ, ಸುಬ್ರಹ್ಮಣ್ಯ ಯೋಚನೆಮಾಡಿ ರಾಯರನ್ನು ಒಪ್ಪಿಸಿ ಬೆಂಗಳೂರು ಆಸ್ಪತ್ರೆಗೆ ಕರೆದೊಯ್ಯಲು ನಿರ್ಧರಿಸಿದರು. ಈ ಸುದ್ದಿ ರಾಯರಲ್ಲಿ ಯಾರು ಹೇಳಬೇಕು ?

ರಾಯರಲ್ಲಿ ಈ ವಿಷಯ ಪ್ರಸ್ತಾಪಿಸಲು ಪಾರ್ವತಮ್ಮನವರಿಗೆ ಮೂರು ದಿನ ಹಿಡಿಯಿತು. ನೂರಾರು ಬಾರಿ ಮನಸ್ಸಿನಲ್ಲಿಯೇ ಯೋಚಿಸಿಕೊಂಡು, ಚಿಂತೆ ಮಾಡಿ ಮಾಡಿ ಕೊನೆಗೆ ಮನಸ್ಸು ಗಟ್ಟಿಮಾಡಿಕೊಂಡು ರಾಯರು ಪ್ರಸನ್ನರಾಗಿರುವ ವೇಳೆ ನೋಡಿ,

"ಕೆಮ್ಮು ಸ್ವಲ್ಪ ಕಡಮೆಯಾಗಿದೆಯೇ ?" ಎಂದು ಮಾತು ಆರಂಭಿಸಿದರು.

"ಏನು ಕಡಮೆಯೊ ! ಒಂದೊಂದು ಸಲ ಕೆಮ್ಮು ಬಂದರೆ ಹೊಟ್ಟೆಯ ಕರುಳೆಲ್ಲಾ ಬಾಯಿಗೆ ಬರುತ್ತದೆ."

"ಹವ ಬದಲಾವಣೆಯಾಗಬೇಕೂಂತ ಡಾಕ್ಟರು ಹೇಳಿದರು."

"ಮಳೆಗಾಲ ಕಳೆದರೆ ಹವಾ ತಾನೇ ಬದಲಾವಣೆಯಾಗುತ್ತದೆ."

"ಅಲ್ಲಿಯವರೆಗೆ ಬೆಂಗಳೂರಿಗೋ ಮೈಸೂರಿಗೋ...."

"ಅದನ್ನೂ ಡಾಕ್ಟರೇ ಹೇಳಿದರೋ ?"

"ಹೂ...."

"ನಿಮಗೆಲ್ಲಾ ಸಾಕುಸಾಕಾಗಿ ಹೋಗಿದೆಯಲ್ಲವೇ?"

"ಯಾಕೆ ಸಾಕಾಗಬೇಕು."

"ಮುದಿಯ ಸತ್ತರೆ ಸಾಕು ಎಂದೆನಿಸಿರಬೇಕು."

"ಕೆಟ್ಟ ಮಾತು ಏಕಾಡುವಿರಿ ? ಕೆಟ್ಟ ಯೋಚನೆ ಮಾಡಬೇಡಿ."

"ನನ್ನಮನೆಬಿಟ್ಟು ಹೊರಗೆ ಹಾಕುವ ನಿಮ್ಮ ಯೋಚನೆ ಒಳ್ಳೆಯ ಯೋಚನೆ ಯೇನೋ ?"

"ಡಾಕ್ಟರಿಗೆ ದುರದ್ದೇಶವೆಲ್ಲಿಂದ ಬಂತು ?"

"ಅವರಪ್ಪನ ಮನೆ ಗಂಟೇನು ಹೋಗಬೇಕು–ಹೇಳಿಬಿಟ್ಟ, ಮೈಸೂರಿಗೋ ಬೆಂಗಳೂರಿಗೋ ಹೋಗೀಂತ–ನೀವೂ ಕೇಳಿಬಿಟ್ಟರಿ. ಮೈಸೂರು, ಬೆಂಗಳೂರಿಗೆ ಹೋದರೆ ಸಾವಿರಾರು ರೂಪಾಯಿ ಖರ್ಚಾಗುತ್ತದೆ–ಡಾಕ್ಟರು ಕೊಡುತ್ತಾನೇನು ?"

"ನಿಮ್ಮ ಪ್ರಾಣಕ್ಕಿಂತ ಸಾವಿರಾರು ರೂಪಾಯಿ ಹೆಚ್ಚಿನದೇ ! ನೀವು ಗಟ್ಟಿಯಾಗಿದ್ದರೆ ಎಷ್ಟು ಸಾವಿರ ರೂಪಾಯಿಗಳನ್ನು ಸಂಪಾದಿಸಬಲ್ಲಿರಿ."

"ನಾನು ಮೈಸೂರು, ಬೆಂಗಳೂರಿಗೂ ಹೋಗಲ್ಲ–ಡಾಕ್ಟರ ಕಹಿ ಕಷಾಯವನ್ನೂ ಕುಡಿಯುವುದಿಲ್ಲ. ದೇವರು ಮಾಡಿಸಿದಂತೆ ಆಗಲಿ. ನನ್ನ ಆಯುಸ್ಸು ಮುಗಿದಿದ್ದರೆ ಯಾವ ಡಾಕ್ಟರೂ ಒಂದು ದಿನವೂ ಅದನ್ನು ಹೆಚ್ಚಿಸಲಾರ. ಸಾಯುವುದು ನಿಶ್ಚಯವಾಗಿದ್ದರೆ ಇಲ್ಲೇ ಕಂತೆ ಒಗೆದು ಬಿಡುತ್ತೇನೆ."

ಪಾರ್ವತಮ್ಮನವರ ಬಾಯಿ ಕಟ್ಟಿಹೋಯಿತು. ಮೂರ್ಖತನದ ತುತ್ತತುದಿಯ ಮೇಲೆ ನಿಂತಿದ್ದ ಗಂಡನ ಜತೆ ಹೆಚ್ಚು ವಾದ ಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲವೆಂಬುದನ್ನರಿತರು. ಅವರೂ ಮನಸ್ಸು ಗಟ್ಟಿಮಾಡಿಕೊಂಡು 'ದೇವರು ಮಾಡಿಸಿದಂತೆ ಆಗಲಿ' ಎಂದುಕೊಂಡರು.

ಮೊಂಡು ಧೈರ್ಯ ತಂದುಕೊಂಡು ರಾಯರು ಎಲ್ಲ ಔಷಧೋಪಚಾರಗಳನ್ನೂ ನಿಲ್ಲಿಸಿಬಿಟ್ಟರು. ರಾಯರ ಶಠತನ ಮತ್ತೆ ಯಾವ ಪರಿಣಾಮವನ್ನು ತಂದುಕೊಡುವುದೋ ಎಂದು ಮನೆಯವರು ಅಂಜಿದರು. ಆದರೆ ರಾಯರ ಪ್ರಕೃತಿಯಲ್ಲಿ ವಿಚಿತ್ರ ಮಾರ್ಪಾಟು ತಲೆದೋರಿತು. ಕೆಮ್ಮು ಇದ್ದಕ್ಕಿದ್ದಂತೆ ಹತೋಟಿಗೆ ಬಂದುದಲ್ಲದೆ ಕೈ ಕಾಲುಗಳ ನೋವು ಇಳಿಮುಖವಾಯಿತು. ರಾಯರು ಕಾಲಿಗೆ ಉಣ್ಣೆಯ ಕಾಲುಚೀಲ ತಲೆ ತುಂಬ ಕಪಿ ಟೋಪಿ (ಮಂಕಿ ಕ್ಯಾಪ್) ಹಾಕಿ ಕೊಂಡು ಓಬೀರಾಯನ ಕಾಲದ ಒಂದು ಖಾಕಿ ಸ್ವೆಟರ್ ಧರಿಸಿ ಮನೆಯಲ್ಲಿಯೇ ಕೋಲು ಹಿಡಿದುಕೊಂಡು ಓಡಿಯಾಡಲಾರಂಭಿಸಿದರು.

ಪಾರ್ವತಮ್ಮನವರ ಆಶ್ಚರ್ಯ, ಆನಂದಕ್ಕೆ ಪಾರವೇ ಇರಲಿಲ್ಲ. 'ಗ್ರಹಚಾರ ಬಿಡುಗಡೆಯಾಯಿತು' ಎಂದುಕೊಂಡವರು ಹೂವೀಳ್ಯ ಮಾಡಿ ಹನ್ನೆರಡು ಜನ ಮುತ್ತೈದೆಯರಿಗೆ ತಂಬಿಟ್ಟು, ತಾಂಬೂಲ ಕೊಟ್ಟರು. ಶನೇಶ್ವರನಿಗೆ ಎಳ್ಳು, ಎಣ್ಣೆ ಅರ್ಪಿಸಿದರು. ಈಶ್ವರ ದೇವಾಲಯದಲ್ಲಿ ರುದ್ರಾಭಿಷೇಕ ಮಾಡಿಸಿದರು. ಅಮ್ಮನವರಿಗೆ ಕುಂಕುಮಾರ್ಚನೆ, ಅಷ್ಟೋತ್ತರ ಮಾಡಿಸಿದರು. ತಾವೇ ಮನೆಯಲ್ಲಿ 'ಲಲಿತಾ ಸಹಸ್ರನಾಮ' ಆರಂಭಿಸಿದರು.

ರಾಯರ ಆರೋಗ್ಯ ಸುಧಾರಿಸಬಂದಂತೆ ಅವರ ಹಸಿವೂ ಹೆಚ್ಚುತ್ತ ಬಂದಿತು. ಮೂರು ನಾಲ್ಕು ತಿಂಗಳು ಪಥ್ಯದಲ್ಲಿದ್ದು ಬಾಯಿ ಕೆಟ್ಟು ಹೋಗಿತ್ತು. 'ಹುಳಿಯುಪ್ಪುಖಾರ'ವಾಗಿ ಏನಾದರೂ ತಿನ್ನಬೇಕೆಂದು ನಾಲಗೆ ತವಕಪಡುತ್ತಿತ್ತು. ರಾಯರು ನಿತ್ಯ ಒಂದೊಂದು ಪದಾರ್ಥ ಬೇಡಲಾರಂಭಿಸಿದರು. ಇವತ್ತು ಹುಳಿಯನ್ನ–ಇವತ್ತು ಖಾರವಾಗಿ ಆಂಬೊಡೆ–ಇವತ್ತು ಹುಳಿಯವಲಕ್ಕಿ ಎಂದು ಕಾಡಲಾರಂಭಿಸಿದರು.

ಪಾರ್ವತಮ್ಮನವರಿಗೆ ದಿಕ್ಕೇ ತೋರದಂತಾಯಿತು. ಪತಿಯ ಇಚ್ಛೆಯನ್ನು ಪೂರೈಸಿದರೆ ಮುಂದಿನ ಪರಿಣಾಮ ಘೋರವಾಗುವುದು ಸ್ವತಃಸ್ಸಿದ್ಧವಾಗಿತ್ತು.

ನಿಂಗವ್ವ ಬಂದು ಉಪಾಯ ಸೂಚಿಸಿದಳು.

"ರಾಯ್ರು ಕೇಳಿದ್ದನ್ನ ಬೆಣ್ಣೆಕಾಸಿದ ತುಪ್ಪದಲ್ಲಿ ಮಾಡಿ ಕೊಡ್ರವ್ವಾ–ಏನೂ ಆಗಾಕಿಲ್ಲ. ಸೊಲ್ಪೊಲ್ಪ ಕೊಡಿ–ಅಜೀರ್ಣವಾಗದಂಗೆ ನೋಡಿಕೊಳ್ಳಿ."

ಪಾರ್ವತಮ್ಮ ತುಪ್ಪದಲ್ಲಿ ಹುಳಿಯನ್ನ ಕಲಸಿ ರಾಯರಿಗೆ ಬಡಿಸಿದರು. ರಾಯರು ಮುಖ ಸಿಂಡರಿಸಿಕೊಂಡು.

"ಈ ಸುಡುಗಾಡು ಅಡಿಗೆ ಯಾರು ತಿನ್ನಬೇಕು"

ಎಂದು ಎಲೆಯನ್ನೆತ್ತಿ ಬಿಸುಡಿ ಮೇಲಕ್ಕೆದ್ದುಬಿಟ್ಟರು. ಮಾರನೆಯ ದಿನ ಅಚ್ಚಳ್ಳೆಣ್ಣೆಯಲ್ಲಿ ಹುಳಿಯನ್ನ ಕಲಸದೆ ವಿಧಿಯೇ ಇರಲಿಲ್ಲ. 'ಕೆಲಸ ಕೆಟ್ಟುಹೋಯಿತು' ಎಂದು ನಿಂಗವ್ವ ಹಲುಬಿದಳು.

ಒಮ್ಮೆ ಎಣ್ಣೆ ಪದಾರ್ಥದ ರುಚಿ ಕಂಡ ರಾಯರು ನಿತ್ಯವೂ ಅದನ್ನೆ

ಬೇಡತೊಡಗಿದರು. ಪಾರ್ವತಮ್ಮನವರು ದೇವರ ಮೇಲೆ ಭಾರ ಹಾಕಿ ಗಂಡನ ಇಚ್ಛೆಯನ್ನು ಪೂರೈಸತೊಡಗಿದರು.

ನಾಲ್ಕೇ ದಿವಸಗಳಲ್ಲಿ ರಾಯರು ಪುನಃ ಹಾಸಿಗೆ ಹಿಡಿದು ಮಲಗಿ ಬಿಟ್ಟರು. ಕಾಲುಗಳೆರಡೂ ಬಾತುಕೊಂಡುವು. ಕೆಮ್ಮಿಗಂತೂ ತಡೆ ಯಿಡೆಯಿರಲಿಲ್ಲ. ತಮ್ಮ ಹಟಮಾರಿತನದಿಂದಾದ ಪರಿಣಾಮ ಕಂಡು ರಾಯರಿಗೂ ಪಶ್ಚಾತ್ತಾಪವಾಗಿತ್ತು. ಕೈಮಿಂಚಿ ಹೋಯಿತೆಂಬುದೂ ಅವರಿಗೆ ಸ್ಪಷ್ಟವಾಗಿ ಮನವರಿಕೆಯಾಯಿತು.

ಬದುಕುತ್ತೇನೆಂಬ ಧೈರ್ಯ ರಾಯರ ಮನಸ್ಸಿನಿಂದ ಕ್ರಮ ಕ್ರಮೇಣ ಅಳಿಸಿಹೋಗುತ್ತ ಬಂತು. ಸಾವಿನ ನೆನಪು ಬಂದೊಡನೆಯೇ ರಾಯರ ದೇಹವ್ಯಾಪಾರವೇ ನಿಂತಂತಾಗಿ, ಅವರ ಮೈಯಲ್ಲಿ ನಡುಕ ಹುಟ್ಟುತ್ತಿತ್ತು. 'ಇಷ್ಟು ಆಸ್ತಿ, ಇಷ್ಟು ಹಣ ಬಿಟ್ಟು ಹೋಗಬೇಕಲ್ಲಾ' ಎಂಬ ಕೊರಗು ರಾಯರನ್ನು ಕಾಹಿಲೆಗಿಂತ ಬಲವಾಗಿ ವ್ಯಾಪಿಸಿತು. ತಮ್ಮ ಸಂಪತ್ತಿನ ಸತತ ಚಿಂತೆಯ ಮಧ್ಯೆ ಆಗೊಮ್ಮೆ ಈಗೊಮ್ಮೆ ಅವ ರಿಗೆ ಪಾರ್ವತಮ್ಮ, ಮಕ್ಕಳ ನೆನಪಾಗುತ್ತಿತ್ತು.

'ಸುಬ್ಬು ದೊಡ್ಡವನಾಗಿದ್ದಾನೆ, ಮದುವೆಯೂ ಆಗಿದೆ. ಅವನ ಯೋಗಕ್ಷೇಮ ಅವನು ನೋಡಿಕೊಳ್ಳಬಲ್ಲ.

'ಶಂಕರನ ಗತಿಯೇನು ? ಸುಬ್ಬು ಅವನನ್ನು ಸರಿಯಾಗಿ ನೋಡಿ ಕೊಳ್ಳುವನೇ—ಮುಂದೆ ಓದಿಸುವನೇ?

'ಪಾರ್ವತಿಯ ಗತಿಯೇನು? ಅವಳಿಗೂ ವಯಸ್ಸಾಯಿತು. ಈ ವೃದ್ಧಾಪ್ಯದಲ್ಲಿ ಅವಳು ವೈಧವ್ಯ ಅನುಭವಿಸಬೇಕಾಯಿತಲ್ಲ.'

ಮಲಗಿದ್ದಲ್ಲಿಯೇ ರಾಯರು ತಮ್ಮ ಗತಜೀವನವನ್ನು ಪುನರ್ವಿಮ ರ್ಶಿಸುತ್ತಿದ್ದರು. ಅವರ ಸಂಪತ್ತಿಗೆ ಕಾರಣರಾದವರೆಲ್ಲರೂ ಬಂದು ಎದುರಿಗೆ ನಿಂತು ಏಡಿಸುವಂತಿತ್ತು.

' ನಂಜುಂಡಯ್ಯನವರೇ—ಜಮೀನುದಾರ ನಂಜುಂಡಯ್ಯನವರೇ— ಸಾಹುಕಾರ ನಂಜುಂಡಯ್ಯನವರೇ, ನಿಮ್ಮಲ್ಲಿರುವ ಅಪಾರ ಧನ ವ್ಯಯ ಮಾಡಿ ಪ್ರಾಣ ಉಳಿಸಿಕೊಳ್ಳಿ.'

'ನನ್ನ ಮನೆ ಹಾಳು ಮಾಡಿದಿರಿ, ನನ್ನ ಹೆಂಡತಿ ಮಕ್ಕಳನ್ನು

ನಿರ್ಗತಿಕರನ್ನಾಗಿ ಮಾಡಿದಿರಿ. ಈಗ ಅದರ ಪ್ರಾಯಶ್ಚಿತ್ತ ಅನುಭವಿಸಿ."

'ಇನ್ನೂರು ರೂಪಾಯಿ ಸಾಲ ಕೊಟ್ಟು, ಬಡ್ಡಿಗೆ ಬಡ್ಡಿಯೇರಿಸಿ ಅದನ್ನು ಸಾವಿರವಾಗಿ ಬೆಳಸಿದಿರಿ. ಕೋರ್ಟುಬಾಗಿಲು ತುಳಿಸಿ ನನ್ನನ್ನು ಬೀದಿಯ ಭಿಕಾರಿ ಮಾಡಿದಿರಿ. ಮೇಲಿನ ಕೋರ್ಟಿಗೆ ಅಪೀಲು ಹೋಗಿದೆ. ಅಲ್ಲಿ—ಯಮಧರ್ಮರಾಯನ ಮುಂದೆ ಏನು ಹೇಳುವಿರಿ ?'

ರಾಯರು ಕನವರಿಸಿಕೊಳ್ಳುತ್ತಾ ಬೆದರಿ 'ಪಾತೂ' ಎಂದು ಕೂಗುತ್ತಿದ್ದರು. ಪಾರ್ವತಮ್ಮ ಓಡಿಬಂದು ಗಂಡನ ಪಕ್ಕದಲ್ಲಿ ಕುಳಿತು ಅವರ ಮುಖ, ಕುತ್ತಿಗೆಯ ಮೇಲೆ ಸಾಲುಗಟ್ಟಿದ್ದ ಬೆವರು ಹನಿಗಳನ್ನೊರಸುತ್ತ,

"ಮೈ ಚೆನ್ನಾಗಿ ಬೆವರಿದೆ. ಜ್ವರ ಬಿಡುತ್ತದೆ. ಬೆಚ್ಚಗೆ ಹೊದೆದುಕೊಂಡು ಮಲಗಿ. ನಿದ್ರೆ ಹತ್ತುತ್ತದೆ."

"ಇಲ್ಲ ಪಾತೂ—ಅದು ಜ್ವರ ಬಿಡುತ್ತಿರುವ ಲಕ್ಷಣವಲ್ಲ."

"ಇನ್ನೇನು ?"

"ಕನಸು—ಕೆಟ್ಟ ಕನಸು."

"ಏನಾಯಿತು ಕನಸು."

"ಯಮನ ಕೋರ್ಟಿನಲ್ಲಿ ನನ್ನನ್ನು ಅಪರಾಧಿಯಂತೆ ನಿಲ್ಲಿಸಿದ್ದಾರೆ. ಆ ಉಗ್ರಮೂರ್ತಿ ತನ್ನ ಕೆಂಗಣ್ಣುಗಳಿಂದ ಕಿಡಿ ಕಾರುತ್ತಾ ನನ್ನನ್ನು ದೂಷಿಸುತ್ತಿದ್ದಾನೆ. ಸುತ್ತಮುತ್ತಲಿದ್ದವರು 'ಮನೆ ಮುರುಕ' ಎಂದು ಚೀರಿ ಗಹಗಹಿಸಿ ನಗುತ್ತಿದ್ದಾರೆ. ಯಮನ ಕೋಣ ಕೂಡ ನನ್ನ ನೋಡಿ ನಗುತ್ತಿದೆ."

"ಕನಸಿಗಿಷ್ಟು ಹೆದರಬೇಕೇ? ಯಮ ಕ್ರೂರಮೂರ್ತಿಯಲ್ಲವಲ್ಲ. ಅವನು ಧರ್ಮಸ್ವರೂಪ. ದಿವ್ಯಸುಂದರಮೂರ್ತಿ. ಅವನ ಕಣ್ಣುಗಳಿಂದ ಸದಾ ದಯೆ, ಸಹನೆ, ಅನುಕಂಪ ಮಿಡಿಯುತ್ತದೆ. ಯಮಧರ್ಮ ನಮ್ಮ ಹೃದಯದಲ್ಲಿ ಶಾಂತಿ ಮೊಳಗಿಸುತ್ತಾನೇ ವಿನಾ ಭಯ ಹುಟ್ಟಿಸುವುದಿಲ್ಲ."

"ಪಾತೂ, ನೀನು ಧರ್ಮದೇವತೆ. ನಿನ್ನ ಕಣ್ಣಿಗೆ ಯಮನೂ ಧರ್ಮಸ್ವರೂಪನಾಗಿ ಕಾಣುತ್ತಾನೆ. ನಾನು ಪಾಪಿ, ನನ್ನ ಕಣ್ಣಿಗೆ ಪರಮೇಶ್ವರನೂ ಯಮಸ್ವರೂಪನಾಗಿ ಕಾಣುತ್ತಾನೆ."

"ನಿಮ್ಮ ಧರ್ಮವೇ ನನ್ನ ಧರ್ಮ—ನನ್ನ ಧರ್ಮವೇ ನಿನ್ನ ಧರ್ಮ. ಸತಿಪತಿಯರಲ್ಲಿ ಭೇದಕ್ಕೆಡೆಯೆಲ್ಲಿದೆ?"

"ಪಾತೂ, ಹಣವೇ ಸರ್ವಸ್ವವೆಂದು ಭಾವಿಸಿದ್ದೆ. ಜೀವನದಲ್ಲಿ ಹಣ ಸಂಗ್ರಹಕ್ಕಲ್ಲದೆ ಬೇರೆ ಯಾವುದಕ್ಕೂ ನಾನು ಮನಸ್ಸು ಕೊಡ ಲಿಲ್ಲ. ಈ ವ್ಯಾಧಿಗೀಡಾಗಿ ಹಲವು ಅನ್ಯಾಯಗಳನ್ನು ಮಾಡಿದೆ. ನಿರಪರಾಧಿಗಳನ್ನೂ ಹಿಂಸಿಸಿದೆ. ಆರ್ತರನ್ನೂ ನಿರ್ಗತಿಕರನ್ನಾಗಿ ಮಾಡಿದೆ. ನನ್ನ ಮನೆಯನ್ನೇ ನರಕ ಮಾಡಿಬಿಟ್ಟೆ................"

"ಹಾಗನ್ನಬೇಡಿ................!"

"ನಿಜ ಪಾತೂ, ನನ್ನ ಅವಸಾನಕಾಲದಲ್ಲಿಯಾದರೂ ತಪ್ಪು ಒಪ್ಪಿಕೊಳ್ಳುತ್ತೇನೆ. ಇದರಿಂದ ನಾನು ಕ್ಷಮಾಯಾಚನೆ ಮಾಡುತ್ತಿಲ್ಲ. ಆದರೆ ನನ್ನ ಮನಸ್ಸಿಗೆ ಅಲ್ಪಸ್ವಲ್ಪ ಶಾಂತಿ ಸಿಕ್ಕುತ್ತದೆ. ನಿನ್ನನ್ನು ಮನೆಯೊಳಗಿನ ದಾಳಿನಂತೆ ನೋಡಿಕೊಂಡೆ. ಒಂದು ದಿನವೂ ನಾನು ಪ್ರೀತಿಯಿಂದ ಮಾತನಾಡಲಿಲ್ಲ—ನಿನ್ನ ಮನಸ್ಸಿನ ಒಂದು ಅಭೀಷ್ಟವನ್ನೂ ಪೂರೈಸಲಿಲ್ಲ."

"ಗರತಿಯ ಮನಸ್ಸಿನಲ್ಲಿ ಪತಿಹಿತ ಕೋರುವ ಅಭೀಷ್ಟವಲ್ಲದೆ ಬೇರೆ ಅಭೀಷ್ಟವೇ ಇರುವುದಿಲ್ಲ."

"ಶ್ರೀಮಂತನ ಕೈಹಿಡಿದೆ—ಆದರೆ ಭಿಕ್ಷುಕಳಂತೆ ಬಾಳುವೆ ಮಾಡಿದೆ. ಬಿಡಿಕಾಸು ನೀನು ಸ್ವತಂತ್ರವಾಗಿ ಖರ್ಚುಮಾಡುವುದಕ್ಕೆ ನಾನು ಅವ ಕಾಶ ಕೊಡಲಿಲ್ಲ."

"ಕಳೆದುಹೋದುದನ್ನು ಕಟ್ಟಿಕೊಂಡೇಕೆ ದುಃಖಿಸುವಿರಿ. ಭಗವ ದ್ಸಂಕಲ್ಪವಿದ್ದಂತೆ ಆಯಿತು. ನೀವು, ಮಕ್ಕಳು ಚೆನ್ನಾಗಿರುವುದು ನೋಡುವುದಕ್ಕಿಂತ ನನಗೆ ಬೇರೆ ಭಾಗ್ಯ ಬೇಕೇ?"

"ಶಂಕರನನ್ನು ಓದಿಸಿ ಕಾಲೇಜಿಗೆ ಕಳಿಸಬೇಕೆಂದಿದ್ದೆ."

"ಕಳಿಸುವಿರಂತೆ."

"ನಾನು ಕಳಿಸುವ ಮಾತು ದೂರ ಉಳಿಯಿತು. ನೀನೂ ಸುಬ್ಬೂ ಆ ಕೆಲಸ ನಿರ್ವಹಿಸಬೇಕು. ನಮ್ಮ ವಂಶದಲ್ಲಿ ಯಾರೂ ಬಿ.ಎ., ಎಂ.ಎ. ಮಾಡಲಿಲ್ಲ, ಶಂಕರ ಬಿ.ಎ. ಮಾಡಿಕೊಂಡು ದೊಡ್ಡ ಅಧಿಕಾರಿ ಯಾಗಲಿ, ಎಂದು ಬಯಸಿದ್ದೆ."

"ನಿಮ್ಮ ಬಯಕೆ ಈಡೇರುತ್ತದೆ. ನಿಶ್ಚಿಂತರಾಗಿರಿ."

"ನಿಂಗವ್ವನಿಗೆ ನಾನು ತುಂಬ ಅನ್ಯಾಯಮಾಡಿದೆ ಪಾತೂ."

"ಅವಳು ಒಂದು ದಿನವೂ ನಿಮ್ಮನ್ನು ಆಕ್ಷೇಪಿಸಿಲ್ಲ."

"ಅದು ಅವಳ ದೊಡ್ಡ ಗುಣ. ಈ ಮನೆಗಾಗಿ ಆ ಜೀವ ದೇಹ ತೇದುಬಿಟ್ಟಿದೆ."

"ಹೌದು,—ಯಾವುದೋ ಜನ್ಮದಲ್ಲಿ ಅವಳು ಈ ಮನೆಯ ಮಗಳಾಗಿದ್ದಿರಬಹುದು."

"ಅವಳ ಕೋರಿಕೆಯೇನಿದ್ದರೂ ಪೂರೈಸಬೇಕೆಂದಿದ್ದೇನೆ."

"ನೀವು ಗುಣಹೊಂದಿ ಮೊದಲಿನಂತೆ ಎದ್ದು ಓಡಿಯಾಡಬೇಕೆಂಬುದೇ ಅವಳ ಕೋರಿಕೆ."

ರಾಯರ ಕಥೆ ನಾಲ್ಕಾರು ದಿವಸಗಳಲ್ಲಿ ಮುಗಿಯುತ್ತದೆಂದು ಲೆಕ್ಕ ಹಾಕಿದ್ದ ಊರಿನವರು ನಿರಾಶೆಗೊಳ್ಳಬೇಕಾಯಿತು. ರಾಯರ ಆರೋಗ್ಯ ಸುಧಾರಿಸಲಿಲ್ಲ; ಆದರೆ ಅವರು ಭರತವಾಕ್ಯವನ್ನೂ ಹೇಳಲಿಲ್ಲ.

ಎಲ್ಲರಿಗಿಂತ ಹೆಚ್ಚು ಆಶ್ಚರ್ಯವಾದುದು ಸಂಪತ್ಕೃಷ್ಣ ಜೋಯಿಸರಿಗೆ. ಘನ ಜ್ಯೋತಿಷ್ಯರೆಂದು ಜೋಯಿಸರು ಅಪಾರ ಖ್ಯಾತಿ ಗಳಿಸಿಕೊಂಡಿದ್ದರು. ಶ್ರೀಮನ್ಮಹಾರಾಜರು, ದಿವಾನರು, ಕೌನ್ಸಿಲರ್‌ಗಳ ವರೆಗೆ ಅವರ ಕೀರ್ತಿ ಹಬ್ಬಿತ್ತು. ಕುರ್ತಕೋಟಿನಂತೆ ಭವಿಷ್ಯ ಹೇಳಬಲ್ಲೆ ಎಂಬ ಹೆಮ್ಮೆಯೂ ಜೋಯಿಸರಿಗಿತ್ತು.

ಜೋಯಿಸರಿಗೆ ಪರಂಪರಾಗತವಾಗಿ ಜ್ಯೋತಿಷ್ಯವಿದ್ಯೆ ಬಂದಿತ್ತು. ಅವರ ತಂದೆ, ಚಿಕ್ಕಪ್ಪ, ತಾತ ಎಲ್ಲರೂ ಜ್ಯೋತಿಷ್ಯರಾಗಿದ್ದರು. ಸಂಪತ್ಕೃಷ್ಣ ಜೋಯಿಸರು ಸದಾಚಾರ ಸಂಪನ್ನರಾಗಿ ಸಾತ್ವಿಕರಾಗಿದ್ದುದರಿಂದ ಅವರ ಜ್ಯೋತಿಷ್ಯಕ್ಕೆ ಭಗವದನುಗ್ರಹವಿದೆಯೆಂದೂ ಜನ ನಂಬಿದ್ದರು.

ಬಾಯಿಚಪಲಕ್ಕೀಡಾದ ರಾಯರಿಗೆ ಕಾಹಿಲೆ ಮರುಕಳಿಸಿಕೊಂಡಾಗ ಪಾರ್ವತಮ್ಮನವರೇ ಅವರ ಜಾತಕ ತೆಗೆದುಕೊಂಡುಹೋಗಿ ಜೋಯಿಸರಿಗೆ ತೋರಿಸಿದರು. ಜೋಯಿಸರು ಮೂರು ದಿವಸ ಅವಧಿ ತೆಗೆದುಕೊಂಡು ಜಾತಕವನ್ನು ಸರಿಯಾಗಿ ಗುಣಿಸಿನೋಡಿ ಭವಿಷ್ಯತ್ಫಲಗಳನ್ನು ನಿರ್ಧರಿಸಿದರು.

ರಾಯರ ಜಾತಕ ಜೋಯಿಸರ ಮನಸ್ಸಿಗೆ ತುಂಬ ಭೀತಿಯನ್ನುಂಟುಮಾಡಿತು. ಅಮಾವಾಸ್ಯೆಯ ದಿನ ರಾಯರಿಗೆ ಪ್ರಬಲ ಗಂಡವಿತ್ತು. ಅದನ್ನು ದಾಟಿದರೆ ರಾಯರು ಮತ್ತೆ ಒಂಭತ್ತು ವರ್ಷ ಬದುಕುವುದರಲ್ಲಿ ಸಂದೇಹವಿರಲಿಲ್ಲ. ಆದರೆ ಗಂಡಾಂತರದಿಂದ ಪಾರಾಗುವ ಯಾವ ಚಿಹ್ನೆಯೂ ಇರಲಿಲ್ಲ. ಶನಿ ತುಂಬ ಕ್ರೂರನಾಗಿದ್ದ. ಬುಧ ದುರ್ಬಲನಾಗಿದ್ದ. ಗುರು, ಸೂರ್ಯ ಇಬ್ಬರೂ ತಲೆತಪ್ಪಿಸಿ ಕೊಂಡರು.

ಪಾರ್ವತಮ್ಮನವರಿಗೆ ಏನು ಹೇಳಬೇಕೆಂಬುದೇ ಜೋಯಿಸರಿಗೆ ದೊಡ್ಡ ಸಮಸ್ಯೆಯಾಯಿತು.

ಮೂರು ದಿವಸಗಳ ಅವಧಿ ಕಳೆದ ಮೇಲೆ ಪಾರ್ವತಮ್ಮನವರು ಜಾತಕಫಲ ಕೇಳುವುದಕ್ಕೆ ಬಂದರು. ತಮ್ಮ ಪರೀಕ್ಷಾಕಾಲ ಒದಗಿತೆಂದು ಜೋಯಿಸರು ಹೆದರಿದರು.

"ಕಾಹಿಲೆ ಉಲ್ಬಣಾವಸ್ಥೆಗೆ ಬಂದಿದೆ. ಆದರೆ ಪ್ರಾಣಭೀತಿ ಇಲ್ಲಮ್ಮ. ಅಮಾವಾಸ್ಯೆ ಬಹಳ ಕ್ರೂರವಾಗಿದೆ. ಆ ದಿನ ರಾಯರಿಗೆ ಹೆಚ್ಚು ಹಿಂಸೆಯಾಗಬಹುದು. ಅಮಾವಾಸ್ಯೆ ಕಳೆದುಬಿಟ್ಟರೆ ರಾಯರು ಪುಟವಿಟ್ಟ ಚಿನ್ನದಂತಾಗುತ್ತಾರೆ."

"ಅಮಾವಾಸ್ಯೆ ಗಂಡ ಕಳೆಯುವುದಕ್ಕೇನು ಮಾಡಬೇಕು?"

"ಎಳ್ಳು ಎಣ್ಣೆ ದಾನ ಕೊಡಿ-ರುದ್ರಾಭಿಷೇಕ ಮಾಡಿಸಿ."

ಜೋಯಿಸರ ಭವಿಷ್ಯ ಪಾರ್ವತಮ್ಮನವರ ಮನಸ್ಸಿನಲ್ಲಿ ಧೈರ್ಯವನ್ನು ನೆಟ್ಟಿತು.

ಆದರೆ ಜೋಯಿಸರ ಮನಸ್ಸಿಗೇ ಧೈರ್ಯವಿರಲಿಲ್ಲ. ರಾಯರು ಉಳಿಯುವುದು ಸಾಧ್ಯವೇ ಇಲ್ಲವೆಂಬುದು ಜೋಯಿಸರಿಗೆ ಖಚಿತವಾಗಿತ್ತು.

ಅಮಾವಾಸ್ಯೆ ಕಳೆಯಿತು. ಜೋಯಿಸರ ಭವಿಷ್ಯ ಸುಳ್ಳಾಯಿತು. ರಾಯರೆದ್ದು ಕುಳಿತರು. ತಮ್ಮ ಭವಿಷ್ಯ ಸುಳ್ಳಾಯಿತೆಂದು ಜೋಯಿಸರು ಪರಿತಾಪಪಡಲಿಲ್ಲ.

'ಹಾವು ಸಾಯಲಿಲ್ಲ, ಕೋಲು ಮುರಿಯಲಿಲ್ಲ' ಎನ್ನುವಂತೆ

ಆಯಿತು. ರಾಯರ ಸ್ಥಿತಿ. ರಾಯರ ಕಾಹಿಲೆ ದಿನಕ್ಕೊಂದೊಂದು ಅವತಾರ ತಳೆಯುತ್ತಿದ್ದರೂ ಅವರ ಆಯುಸ್ಸಿಗೆ ಯಾವ ಧಕ್ಕೆಯೂ ಬರಲಿಲ್ಲ.

ರಾಯರು ಆಗಾಗ ಮಗನನ್ನು ಹತ್ತಿರ ಕರೆದು ತಮ್ಮ ವ್ಯವಹಾರದ ಪರಿಚಯಮಾಡಿಕೊಡುತ್ತ ಬಂದರು. ಆದರೆ ಬೀಗದ ಕೈಗೊಂಚಲು ರಾಯರ ಕೈಯಿಂದ ಸುಬ್ರಹ್ಮಣ್ಯನ ಕೈಗೆ ಮಾತ್ರ ಬರಲಿಲ್ಲ.

೫

ಆರು ತಿಂಗಳ ಕಾಲ ರಾಯರು ಒಂದೇ ಸಮನಾಗಿ ನರಳಿದರು. ನೋವಿನ ಬಾಧೆ ಸಹಿಸಲಾಗದೆ ಹಲವು ಸಲ ಮೃತ್ಯುವನ್ನು ಸ್ವಾಗತಿಸುತ್ತಿದ್ದರು. ಮಹಾ ನಾರಾಯಣಿ ತೈಲದ ಲೇಪ, ಬಿಸಿನೀರಿನ ಕಾವುಟವಾದ ಮೇಲೆ ನೋವು ಸ್ವಲ್ಪ ಇಳಿಮುಖವಾದ ಕೂಡಲೆ ರಾಯರ ವಿಚಾರವೇ ಬದಲಾಗುತ್ತಿತ್ತು.

ಜೀವ, ಸಾವುಗಳ ಮಧ್ಯೆ ರಾಯರು ತೂಗಾಡುತ್ತಿದ್ದರೂ ಅವರ ಮನಸ್ಸಿನಲ್ಲಿ ಒಂದೇ ಚಿಂತೆ.

'ತೋಟದ ಮಗ್ಗುಲಲ್ಲಿ ಕರೀಗೌಡನ ಎಂಟು ಎಕರೆ ತೆಂಗಿನ ತೋಟವಿದೆ. ಅದನ್ನು ಸೇರಿಸಿಕೊಂಡರೆ ತನ್ನ ತೋಟ ಚೆನ್ನಾಗುತ್ತದೆ. ಅಡಿಕೇಗೆ ಒಳ್ಳೆ ಧಾರಣೆಯಿದೆ. ಅಡಿಕೆ ತೋಟ ಮಾಡಿಕೊಂಡರೆ ಕೈತುಂಬ ಹಣ ಬರುತ್ತದೆ. ಡೆಪ್ಯುಟಿ ಕಮೀಶನರ್ ಸಾಹೇಬರನ್ನು ಕಂಡು ಊರ ಪಕ್ಕದ ಹಳೇ ಗೋಮಾಳ ಹೊಡೆದುಕೊಳ್ಳಬೇಕು. ಸಯ್ಯದ್ ಸಾಬಿ ಹಣ ಬರಲಿಲ್ಲ. ಚಿಕ್ಕ ನಂಜಪ್ಪ ಬಡ್ಡಿಹಣ ತಂದು ಕೊಡಲಿಲ್ಲ.'

ಹಣ ಬೆಳಸುವುದಕ್ಕೆ ಯೋಚನೆ ಮಾಡಬೇಕು. ಚಿಂತನೆ ಮಾಡಬೇಕು, ಶ್ರಮಪಡಬೇಕು, ಇದ್ದದ್ದು ಇಲ್ಲವೆನಿಸಬೇಕು, ಇಲ್ಲದ್ದು ಇದೆಯೆನಿಸಬೇಕು. ಮನೆ ಬೆಳಸುವುದಕ್ಕೆ ಏಕೆ ಕಷ್ಟಪಡಬೇಕು? "ಹಣ ಬೆಳೆಸುವುದೆಂದರೆ ಕೈದೋಟ ಮಾಡಿದಂತೆ; ಮನೆ ಬೆಳಸುವುದೆಂದರೆ ಕಾಡು ಬೆಳಸಿದಂತೆ" ಎನ್ನುವುದೇ ರಾಯರ ಜೀವನ ಸಿದ್ಧಾಂತವಾಗಿತ್ತು. ರಾಯರು ಬಾಯಲ್ಲಿ "ದೇಹ ನಶ್ವರ, ಸಾವು ಶಾಶ್ವತ" ಎನ್ನುತ್ತಿದ್ದರೂ ಮನಸ್ಸಿನಲ್ಲಿ 'ದೇಹ ಶಾಶ್ವತ ಸಾವು ನಶ್ವರ' ಎಂದು ನಿರ್ಧರಿಸಿಕೊಂಡಿದ್ದರು.

ರಾಯರ ಕಾಹಿಲೆಯ ಏಳನೆಯ ತಿಂಗಳು ಕಾಲಿಟ್ಟಿತು. ಕಾರ್ತೀಕ ಮಾಸ. ಅಮಾವಾಸ್ಯೆ ಸಮೀಪಿಸುತ್ತಿದ್ದಂತೆ ರಾಯರ ಸ್ಥಿತಿ ಚಿಂತಾ

ಜನಕವಾಯಿತು. ಗಂಟೆ ಗಂಟೆಗೆ ಜ್ಞಾನತಪ್ಪಿ ಹೋಗುತ್ತಿತ್ತು. ಸುಬ್ಬು, ಶಂಕರ ಮನೆಯಲ್ಲಿಯೇ ಇರಬೇಕೆಂದು ಪಾರ್ವತಮ್ಮನವರು ಆಜ್ಞೆವಿಧಿಸಿದ್ದರು.

ಅಮಾವಾಸ್ಯೆ—ಮಂಗಳವಾರ—ಬೆಳಿಗ್ಗೆ ಎದ್ದು ಪಾರ್ವತಮ್ಮನವರು ತಮ್ಮ ಪೂಜಾವಿಧಿ ತೀರಿಸಿಕೊಂಡರು. ರಾಯರಿಗೆ ಸ್ನಾನ ಮಾಡಿಸುವುದು ದುಸ್ಸಾಧ್ಯವಾಗಿತ್ತು. ರಾಯರು ಮಲಗಿದಲ್ಲಿಯೇ ಮುಖ ತೊಳೆದು ಅವರ ವಸ್ತ್ರಗಳನ್ನು ಬದಲಾಯಿಸಿದರು. ರಾಯರಿಗೆ ಸಂಪೂರ್ಣವಾಗಿ ಮಾತು ನಿಂತುಹೋಗಿತ್ತು. ಆಗಾಗ್ಗೆ ಪ್ರಯತ್ನ ಪೂರ್ವಕವಾಗಿ ಮಾತನಾಡಲೆತ್ನಿಸುತ್ತಿದ್ದರು. ಬಾಯಿ ತಿರುಗುತ್ತಿತ್ತು. ಧ್ವನಿ ಹೊರಡುತ್ತಿರಲಿಲ್ಲ. ಕಟಬಾಯಲ್ಲಿ ಜೊಲ್ಲು ಧಾರಾಕಾರವಾಗಿ ಇಳಿಯುತ್ತಿತ್ತು.

ಹನ್ನೊಂದು ಗಂಟೆಯ ವೇಳೆಗೆ ರಾಯರಿಗೆ ಅಸ್ಥಾವಸ್ಥೆಯಾಯಿತು. ಪಾರ್ವತಮ್ಮ ಪಂಡಿತರಿಗೆ ಹೇಳಿ ಕಳಿಸಿದರು. ಅವರು ಊರಿನಲ್ಲಿರಲಿಲ್ಲ.

ಮಂತ್ರಗಾರ ಪುಟ್ಟಸಿದ್ದನನ್ನು ಕರೆದುಕೊಂಡು ಬರಲು ನಿಂಗವ್ವ ಓಡಿಹೋದಳು. ಅವನು ಮನೆಯಲ್ಲಿದ್ದರೂ ಇಲ್ಲವೆನ್ನಿಸಿಕೊಂಡ.

ಪಾರ್ವತಮ್ಮ, ಜೋಯಿಸರ ಹೆಂಡತಿ ಚೌಡಮ್ಮನವರಿಗೆ ಹೇಳಿ ಕಳಿಸಿದರು. ಅವರು ಒಳಗಿಲ್ಲವೆಂದು ಗೊತ್ತಾಯಿತು.

ಗಂಡನ ಬದಿಯಲ್ಲಿ ಪಾರ್ವತಮ್ಮ ಅತ್ತಿತ್ತ ಸುಬ್ಬು, ಶಂಕರು, ರಾಯರ ಪಾದದ ಬಳಿ ಗೌರಮ್ಮ, ಸ್ವಲ್ಪ ದೂರದಲ್ಲಿ ನಿಂಗವ್ವ ಕುಳಿತು ರಾಯರ ಜೀವಜ್ಯೋತಿ ನಂದುವುದನ್ನು ಅಸಹಾಯಕತೆಯಿಂದ ನೋಡುತ್ತ ಕುಳಿತರು.

ಮಟಮಟ ಮಧ್ಯಾಹ್ನ ಮನೆಯ ಹೆಂಚುಗಳೇ ಹೊತ್ತುಕೊಂಡು ಉರಿಯುವಂತೆ ಬಿಸಿಲು ಸುಡುತ್ತಿದೆ. ರಾಯರಿಗೆ ಮರಣಸಂಕಟವಾರಂಭವಾಯಿತು. ಪಾರ್ವತಮ್ಮ ಗಂಗೆಥಾಲಿ ಒಡೆದು ರಾಯರ ಬಾಯಿಗೆ ಒಂದೆರಡು ತೊಟ್ಟು ಗಂಗೋದಕ ಹಾಕಿದರು. ಒಮ್ಮೆ ಬಿಕ್ಕಳಿಕೆ ಬಂದಂತಾಗಿ ನೀರು ಕಟಬಾಯಿಯಲ್ಲಿ ಕೆಳಕ್ಕುರುಳಿತು. ರಾಯರ ಕಣ್ಣುಗುಡ್ಡೆಗಳು ಊರ್ಧ್ವಮುಖವಾದುವು. ಸುಬ್ಬು ತಂದೆಯ ಹತ್ತಿರ ಬಂದು

"ಅಣ್ಣಾ–ಅಣ್ಣಾ" ಎಂದ. ರಾಯರು ಆ ವೇಳೆಗಾಗಲೇ ಹೊಸ ಊರಿನಲ್ಲಿ ಹಳಬರಾಗಿದ್ದರು.

ಪಾರ್ವತಮ್ಮ ಕುಳಿತಲ್ಲಿಯೇ ಕುಸಿದುಬಿದ್ದರು. ನಿಂಗವ್ವ ಹತ್ತಿರ ಬಂದು ಪಾರ್ವತಮ್ಮನವರನ್ನು ಅಪ್ಪಿಕೊಂಡು ಕುಳಿತಳು. ಶಂಕರ ಗೌರಮ್ಮ ದೀರ್ಘವಾಗಿ ರೋದಿಸಲಾರಂಭಿಸಿದರು. ಸುಬ್ಬು ಸಿಡಿಲಿನ ಹೊಡೆತಕ್ಕೆ ಸಿಕ್ಕಿದವನಂತೆ ನಿಂತುಬಿಟ್ಟ.

ಒಂದೆರಡು ಗಂಟೆಗಳು ಯಾರೂ ತುಟಿಪಿಟಿಕ್ಕೆನ್ನಲಿಲ್ಲ. ಅಸೀಮ ದುಃಖ ಎಲ್ಲರನ್ನೂ ದುರ್ಬಲರನ್ನಾಗಿ ಮಾಡಿತ್ತು. ಸುಬ್ಬು ತಲೆಯ ಮೇಲೆ ಕೈಹೊತ್ತು ಅಳುತ್ತ ಕುಳಿತಿದ್ದ. ಪಾರ್ವತಮ್ಮ ಸೆರಗಿನಿಂದ ಮುಖ ಮುಚ್ಚಿಕೊಂಡು ದುಃಖಿಸುತ್ತಿದ್ದರು.

ನಿಂಗವ್ವನ ಕಣ್ಣಲ್ಲಿಯೂ ಧಾರಾಕಾರವಾಗಿ ನೀರು. ಒಮ್ಮೆ ಪಾರ್ವತಮ್ಮನವರನ್ನು ಸಂತೈಸುವಳು. ಒಮ್ಮೆ ಸುಬ್ಬು ಬಳಿಗೆ ಬಂದು ಅವನ ತಲೆದಡವುವಳು. ಒಮ್ಮೆ ಶಂಕರನನ್ನಪ್ಪಿಕೊಂಡು ಮೂಕ ಸಹಾನುಭೂತಿ ತೋರುವಳು. ಒಮ್ಮೆ ಗೌರಮ್ಮನನ್ನು ನೇವರಿಸುತ್ತಾ ಅವಳ ಕಂಬನಿ ಒರಸುವಳು.

ಗಂಟೆಗಳುರುಳುತ್ತಲಿದ್ದುವು. ನಿಂಗವ್ವ ಸ್ಥೈರ್ಯ ತಂದುಕೊಂಡು,

"ಸುಬ್ಬಪ್ಪ........ಹಿಂಗೆ ಅತ್ತಾಕೂತ್ರೆ ಕೆಲಸ ಆಯಿತ್ತೈತಾ........ ಜಟಪಟನೆದ್ದು ಊರಲ್ಲಿ ಯಾರವ್ರೆ ನೋಡ್ಕೊಂಡು ಬಾ. ಜೋಸ್ರು ಇದ್ರೆ ಕರ್ಕೊಂಡು ಬಾ." ಎಂದಳು.

ಸುಬ್ರಹ್ಮಣ್ಯ ಎದ್ದು ಮಾತನಾಡದೆ ಹೊರಟುಹೋದ. ನಿಂಗವ್ವ ಶಂಕರನ ಕಡೆ ತಿರುಗಿ,

"ಸಂಕ್ರಪ್ಪ........ಬ್ರಾಂಬರ ಕೇರೀಲಿ ಯಾರವ್ರೆ ನೋಡು........ ಸೂರನಾರಾಣಪ್ಪ ಇದ್ದರೆ ಕರ್ಕೊಂಡು ಬಾ" ಎಂದಳು.

ಶಂಕರ ಎದ್ದು ಹೊರಗೆ ಹೋದ.

ಇಬ್ಬರೂ ಹೋದ ಮೇಲೆ ನಿಂಗವ್ವ ಪಾರ್ವತಮ್ಮನ ಬಳಿ ಬಂದು ಕುಳಿತು,

"ಮಕ್ಕಳ ಮಕ ನೋಡಿ ದುಕ್ಕ ಮರೀಬೇಕವ್ವ. ಸಾವು ಯಾರಿಗೂ ತಪ್ಪಿದ್ದಲ್ಲ."

" ನಾನು ಹ್ಯಾಗೆ ಬದುಕಿರಲೇ ನಿಂಗಿ."

" ಬದುಕಿರಬೇಕವ್ವ, ಸಂಕ್ರಪ್ಪ ನಿಮ್ಮ ಕೊರಳಿಗೆ ಬಿದ್ದಿಲ್ವಾ! ಆಲು ಅಸುಳೇನ ಪರದೇಸಿ ಮಾಡ್ತೀರಾ!"

" ನಾನು ಬದುಕಿರಬಾರದೆ ನಿಂಗವ್ವ, ಅರಸಿನ ಕುಂಕುಮ ಹೋದ ಮೇಲೆ ನಾನಿದ್ದೇನು ಸಾರ್ಥಕ. ರಾಯರ ಪಾದಕ್ಕೆ ತಲೆಚಚ್ಚಿಕೊಂಡು ಪ್ರಾಣ ಬಿಡುತ್ತೇನೆ."

ಎಂದು ಎದ್ದರು. ನಿಂಗವ್ವ, ಗೌರಮ್ಮ ಇಬ್ಬರೂ ಪಾರ್ವತಮ್ಮನವರನ್ನು ಹಿಡಿದುಕೊಂಡರು. ಪಾರ್ವತಮ್ಮನವರು ಪತಿಯ ಪಾದಗಳ ಮೇಲೆ ತಲೆಯಿಟ್ಟು ಮಲಗಿದರು.

ಸುಬ್ರಹ್ಮಣ್ಯ ಹಿಂದಿರುಗಿದವನು ನಿಂಗವ್ವನನ್ನು ಪಕ್ಕಕ್ಕೆ ಕರೆದು,

" ಊರಿನಲ್ಲಿ ಯಾರೂ ಇಲ್ಲ ನಿಂಗವ್ವ." ಎಂದ.

" ಊರ್ನಲ್ಲಿ ಯಾರೂ ಇಲ್ಲ! ಎಲ್ಲಾರೂ ಸತ್ತೋದರಾ!"

" ಎಲ್ಲಾರ ಮನೆಯ ಬಾಗಿಲೂ ಹಾಕಿದೆ. ಯಾರನ್ನು ಕೂಗಿದರೂ ಧ್ವನಿಯಿಲ್ಲ."

" ಊರಿನ ಹಿರೇ ಮನುಸ ಸತ್ತು ಬಿದ್ದಿದ್ರೆ ಹಾರವಯಗೋಳು ಒಳಗೇ ಕುಂತ್ಕೊಂಡು ಉಣ್ತಾರೇನಪ್ಪಾ?"

" ನಾನು ಕಾಣೆನಮ್ಮ–ಮುಂದಿನ ವಿಷಯ........?"

ಸಪ್ಪೆಮೋರೆ ಹಾಕಿಕೊಂಡು ಹಿಂದಿರುಗಿದ ಶಂಕರನೂ ಅದೇ ಸುದ್ದಿ ಹೇಳಿದ.

"ಸೂರನಾರಣಪ್ಪ ಏನಾದನಂತೆ!"

"ಗಂಗೇನ ಹಳ್ಳಿಯಲ್ಲಿ ಯಾರೋ ಸಂಬಂಧಿಕರು ತೀರಿಕೊಂಡರಂತೆ. ಅಲ್ಲಿಗೆ ಹೋದನಂತೆ."

"ಬ್ರಾಂಬರ ಕೇರೀಲಿ ಯಾರೂ ಇಲ್ವಾ?"

"ಯಾರೂ ಇಲ್ಲ ನಿಂಗವ್ವ."

"ಅಂಗಡಿ ದಾಸಪ್ಪ?"

"ಅವನ ಅಂಗಡಿ ಬಾಗಿಲು ಹಾಕಿದೆ."

"ಒಳ್ಳೇ ಚೋಜಿಗವಾಗೈತಲ್ಲಾ!"

ಎಂದುಕೊಂಡು ನಿಂಗವ್ವ ಆಲೋಚಿಸಲಾರಂಭಿಸಿದಳು. ಸಮಸ್ಯೆ ಒಮ್ಮೆಲೇ ಅವಳಿಗೆ ಬಗೆಹರಿಯಲಿಲ್ಲ. ಸ್ವಲ್ಪಕಾಲ ಕಳೆದ ಮೇಲೆ ಅವಳಿಗೆ ಏನೋ ಭಾಸವಾಯಿತು. ಮುಖದಲ್ಲಿ ಕಠಿಣ ನಿರ್ಧಾರ ಕಂಡು ಬಂದಿತು. ಹೊರಗೆ ಹೋಗಲು ಎದ್ದು ನಿಂತಳು.

"ಎಲ್ಲಿಗೆ ನಿಂಗವ್ವ?" ಎಂದು ಸುಬ್ರಹ್ಮಣ್ಯ ಕೇಳಿದ.

"ಬತ್ತೀನಿರು."

ಎಂದುಕೊಂಡೇ ನಿಂಗವ್ವ ಹೊರಬಿದ್ದಳು.

ನಿಂಗವ್ವನ ಮನಸ್ಸಿನಲ್ಲಿ ಮೂಡಿದ್ದ ಪ್ರಬಲ ನಿರ್ಧಾರ ಅವಳ ಮುಖದಲ್ಲಿ ಎದ್ದು ಕಾಣುತ್ತಿತ್ತು. ಅವಳ ಕಣ್ಣುಗಳು ಕೆಂಡ ಕಾರುತ್ತಿದ್ದುವು. ಕೆದರಿದ ತಲೆ, ಅಸ್ತವ್ಯಸ್ತವಾದ ವಸ್ತ್ರಗಳು ಅವಳ ಸಹಜ ಸಾಮ್ಯತೆಯನ್ನು ಮರೆಸಿದ್ದುವು. ವಯಸ್ಸಿನಿಂದ, ದುಃಖದಿಂದ ಜೀರ್ಣವಾಗಿದ್ದ ಅವಳ ದೇಹಕ್ಕೆ ರಾಕ್ಷಸಶಕ್ತಿ ಬಂದುಬಿಟ್ಟಿತ್ತು.

ನಿಂಗವ್ವ ಒಮ್ಮೆ ಊರು ಪ್ರದಕ್ಷಿಣೆ ಮಾಡಿಕೊಂಡು ಬಂದಳು. ಸುಬ್ರಹ್ಮಣ್ಯ, ಶಂಕರ ಹೇಳಿದುದು ಅಕ್ಷರಶಃ ದಿಟವಾಗಿತ್ತು. ಮನೆಯ ಬಾಗಿಲುಗಳು ಭದ್ರವಾಗಿ ಮುಚ್ಚಿದ್ದುವು. ಬೀದಿಯಲ್ಲಿ ಯಾರ ಸುಳಿವೂ ಇಲ್ಲ. ಊರಿನ ಜನವೆಲ್ಲಾ ಊರು ಬಿಟ್ಟು ಹೋದಂತೆ ಕಂಡುಬರುತ್ತಿತ್ತು. ನಿಂಗವ್ವ ನಾಲ್ಕಾರು ಮನೆ ಬಾಗಿಲು ಬಡಿದು ನೋಡಿದಳು. ಒಳಗಿನಿಂದ ಉತ್ತರ ಬರಲಿಲ್ಲ. ಬ್ರಾಂಬರ ಕೇರಿಗೆ ಬಂದು ಚೌಕದಲ್ಲಿ ನಿಂತು ಗಟ್ಟಿಯಾಗಿ,

"ಜೋಸ್ಯರೇ, ಸೂರನಾರಣಪ್ಪ, ದಾಸಪ್ಪ, ತಮ್ಮಯ್ಯ"

ಎಂದು ಕೂಗಿದಳು. ಯಾರಿಂದಲೂ ಮರುದನಿ ಬರಲಿಲ್ಲ. ನಿಂಗವ್ವನ ಆಪಾದಮಸ್ತಕ ಕೋಪದಿಂದ ಉರಿಯಲಾರಂಭಿಸಿತು.

"ಈ ಊರಿನ ಬ್ರಾಂಬರೆಲ್ಲಾ ಸತ್ರೇನು? ಊರಲ್ಲಿ ಹಿರೇ ಮನುಸ್ನ ಹೆಣ ಇಟ್ಕೊಂಡು ಅನ್ನ ತಿನ್ನೋರು ನೀವೇನು ಬ್ರಾಂಬರೋ ಹೊಲೇರೋ? ಎಣಕ್ಕೆ ಬೆಂಕಿ ಕಾಣ್ಸೋದು ನಿಮ್ಮ ಧರ್ಮ ಅಲ್ವಾ! ಅರೀದ ಮಕ್ಕಳು ಮನೇಲಿ ಅಸಿದು ಕುಂತವ್ರೆ. ಊರ್ನೋರು ಬಾಗಿಲಾಕ್ಕೊಂಡು ಉಣ್ತಾ ಕುಂತಿದ್ದೀರಲ್ಲಾ! ನಂಜುಂಡಪ್ನೋರು ನಿಮಕ ಬ್ಯಾಡ

ವಾಗಿರ್ಲ್ವೋದು; ಅವರ ಮಕ್ಕಳೂ ಅವ್ರ್ಮಾವ್ರೂ ನಿಮಕ ಅನ್ಯಾಯ ಮಾಡವ್ರಾ? ಈ ಊರ್ನಾಗೆ ಧರ್ಮ ಕರ್ಮ ಎಲ್ಲಾ ಸತ್ತ್ಹೋಯ್ತ? ಏಳೋರು ಕೇಳೋರು ಯಾರೂ ಇಲ್ವಾ? ಒತ್ತು ಮುಳುಗ್ತಾ ಬಂದೈತೆ-ಊರಿನ ಬ್ರಾಂಬರು ಬಂದು ಎಣ ಒಪ್ಪ ಮಾಡ್ದೆ ಇದ್ರೆ, ನಮ್ಜನ ಬರ್ಮ್ಕೊಂಡು ನಾನೇ ಒಪ್ಪ ಮಾಡಿಸ್ಬಿಡ್ತೀನಿ—ಎಂಗೂ ಮಾರಾಯ್ರು ಅನ್ನ ಉಂಡಿವ್ನಿ—ಅವರಿಗೆ ನಾನೇ ಮಣ್ಣು ಕೊಟ್ಟುಬಿಡ್ತೀನಿ"

ಎಂದು ಕೂಗಿ ಹೇಳಿದಳು.

ಹೊರಗೆ ತಲೆಯಿಡಲು ಯಾರಿಗೂ ಧೈರ್ಯವಾಗಲಿಲ್ಲ.

ನಿಂಗವ್ವ ಅಲ್ಲಿಯೇ ಕ್ಷಣಕಾಲ ನಿಂತಿದ್ದು ಮನೆ ಸೇರಿದಳು.

ಅರ್ಧ ಗಂಟೆಯೊಳಗಾಗಿ ಒಬ್ಬೊಬ್ಬರಾಗಿ ರಾಯರ ಮನೆ ಮುಂದೆ ಸೇರತೊಡಗಿದರು; ಮನೆಯ ಒಳಗೆ ಕಾಲಿಡಲು ಯಾರಿಗೂ ಧೈರ್ಯವಾಗಲಿಲ್ಲ.

ಮನೆಯ ಮುಂದೆ 'ವಾಹನ'ದ ಏರ್ಪಾಡು ನಡೆದಿತ್ತು; ಸೂರ್ಯನಾರಾಯಣಪ್ಪ ತಲೆಗೊಂದು ಹಳೆಯ ಕೊಳಕಲು ಟವಲು ಸುತ್ತಿಕೊಂಡು ಚಟ್ಟ ಸಿದ್ಧಗೊಳಿಸುತ್ತಿದ್ದ. ಜನ ಗುಂಪು ಗುಂಪಾಗಿ ಹೊರಗೆ ನೆರದಿದ್ದರು.

ಸಂಪತ್ಕೃಷ್ಣ ಜೋಯಿಸರನ್ನು ಮುಂದೆ ಮಾಡಿಕೊಂಡು ನಾಲ್ವರು ಜನ ಊರಿನ ಗಣ್ಯರು ಒಳಕ್ಕೆ ಪ್ರವೇಶಿಸಿದರು. ನಿಂಗವ್ವ ಒಮ್ಮೆ ಅವರ ಕಡೆ ದೃಷ್ಟಿಬೀರಿದಳು.

ಜೋಯಿಸರು ಮುಂದೆ ಬಂದು,

"ನಾನು ಊರಿನಲ್ಲಿರಲಿಲ್ಲ. ಇದೇ ಬಂದೆ. ಸಮಾಚಾರ ತಿಳಿಯಿತು. ವಿಧಿವಿಲಾಸ—ಯಾರೇನು ಮಾಡಲು ಸಾಧ್ಯ!"

ಎಂದು ದುಃಖಪ್ರದರ್ಶನ ಮಾಡಿದರು.

ಫೂಟ್ ಲಾಯರ್ ಭೀಮಾಚಾರಿ, ಅಕ್ಕಸಾಲೆ ಚಿನ್ನಪ್ಪ ಸುಬ್ರಹ್ಮಣ್ಯನಿಗೆ ಸಮಾಧಾನ ಹೇಳಿದರು. ಶಾಂತರುದ್ರಪ್ಪ, ದಾಸರ ಪರಮಾನಂದಯ್ಯ ಶಂಕರನನ್ನು ಸಮಾಧಾನಪಡಿಸಲೆತ್ನಿಸಿದರು.

ಜೋಯಿಸರ ಹೆಂಡತಿ ಚೌಡಮ್ಮ ಬಂದು ಪಾರ್ವತಮ್ಮನವರನ್ನು ಮುಟ್ಟಿಕೊಂಡು ದುಃಖೋಪಶಮನ ಮಾಡಲೆತ್ನಿಸಿದರು.

ವಾಹನ ಸಿದ್ಧವಾಯಿತು. ಸೂರ್ಯನಾರಾಯಣ ಅವನ ಸಂಗಡಿಗರು ಕಳೇಬರವನ್ನು ಹೊತ್ತುಕೊಂಡು ಹೋಗಲು ಒಳಗೆ ಬಂದರು.

ಅವರ ಮುಖ ನೋಡಿದೊಡನೆಯೇ ಚಿಟ್ಟನೆ ಚೀರಿ, ಪಾರ್ವತಮ್ಮ ಗಟ್ಟಿಯಾಗಿ ಪತಿಪಾದಗಳನ್ನು ಹಿಡಿದು,

"ನಾನು ಕಳಿಸಲ್ಲ-ಅವರನ್ನು ನಾನು ಕಳಿಸಲ್ಲ" ಎಂದರು.

ಚೌಡಮ್ಮ, ಗೌರಮ್ಮ ಇಬ್ಬರೂ ಪಾರ್ವತಮ್ಮನವರನ್ನು ಹಿಡಿದು ಕೊಳ್ಳಬೇಕಾಯಿತು. ಎದೆ ಚಚ್ಚಿಕೊಂಡು ಅಳುತ್ತಿದ್ದ ಶಂಕರನಿಗೆ ನಿಂಗವ್ವನ ವಕ್ಷಸ್ಥಳದಲ್ಲಿ ಎಡೆ ದೊರೆಯಿತು.

ಶುಷ್ಕಕಾಷ್ಠದಂತಿದ್ದ ರಾಯರ ಕಳೇಬರವನ್ನು ಸೂರ್ಯನಾರಾಯಣ ಅವನ ಸಂಗಡಿಗರು ಮೂಟೆಯನ್ನು ಹೊತ್ತೊಯ್ಯುವಂತೆ ಎತ್ತಿಕೊಂಡು ಹೋದರು.

ಸುಬ್ರಹ್ಮಣ್ಯ, ಶಂಕರನನ್ನು ಅಂತಿಮಯಾತ್ರೆಗೆ ಸಿದ್ಧಗೊಳಿಸಲು ಜೋಯಿಸರು ಮುಂದಾದರು.

ರಾಯರ ಕಳೇಬರದ ಅಂತಿಮಯಾತ್ರೆ ಸಾಗಿತು. ಮುಂದೆ ಸುಬ್ರಹ್ಮಣ್ಯ ಅಗ್ನಿಯನ್ನು ಹಿಡಿದು ಹೊರಟ, ಅವನ ಜೊತೆಯಲ್ಲಿ ತಮ್ಮ ಶಂಕರ.

ರಾಯರ ಕಳೇಬರದ ಹಿಂದೆ ನಿಂಗವ್ವ. ಕಳೇಬರದ ಹಿಂದೆ ಹೋಗಲು ಧಾವಿಸುತ್ತಿದ್ದ ಪಾರ್ವತಮ್ಮನವರನ್ನು ಚೌಡಮ್ಮ, ಗೌರಮ್ಮ ಬಲವಂತವಾಗಿ ಒಳಕ್ಕೆ ಕರೆದೊಯ್ದರು.

ಇದ್ದಕ್ಕಿದ್ದಂತೆ ತನ್ನ ಮೇಲೆ ಒರಗಿದ ಗುರುತರ ಜವಾಬ್ದಾರಿಯನ್ನು ಕಂಡು ಸುಬ್ರಹ್ಮಣ್ಯ ಭಯಗ್ರಸ್ಥನಾದ. ಒಂದು ವರ್ಷದಿಂದ ತಂದೆ ಅಲ್ಪಸ್ವಲ್ಪ ವ್ಯವಹಾರ ಜ್ಞಾನ ತಂದು ಕೊಟ್ಟಿದ್ದರು. ಅವರ ವ್ಯವಹಾರದ ವ್ಯಾಪ್ತಿ ಎಷ್ಟೆಂಬುದರ ಪೂರ್ಣಪರಿಜ್ಞಾನ ಅವನಿಗಿರಲಿಲ್ಲ. ತಾಯಿ ಮೊದಲಿನಿಂದಲೂ ಅಜ್ಞಾನದಲ್ಲಿದ್ದುದರಿಂದ ಅವರಿಂದ ಯಾವ ನೆರವೂ ದೊರೆಯುವಂತಿರಲಿಲ್ಲ. ರೈತರ ಜೊತೆ ರಾಯರು ಮಾಡಿದ್ದ ವ್ಯವಹಾರದ ಕಗ್ಗಂಟು ಬಿಡಿಸಬೇಕಾದರೆ ಸುಬ್ರಹ್ಮಣ್ಯ ನಿಂಗವ್ವನ ಸಹಾಯ ಕೋರಲೇ ಬೇಕಾಗಿ ಬಂತು.

ತಂದೆಯ ಅಂತಿಮಕಾಲದಲ್ಲಿ ನಿಂಗವ್ವ ತೋರಿದ್ದ ಧೈರ್ಯ, ಶ್ರದ್ಧೆ, ಭಕ್ತಿ ಸುಬ್ರಹ್ಮಣ್ಯನ ಮನಸ್ಸಿನಲ್ಲಿ ಅವಳ ಬಗ್ಗೆ ಗೌರವ ಹುಟ್ಟಿಸಿತ್ತು. ಗೌರಿ ನಿಂಗವ್ವನ ಜತೆಯಲ್ಲಿ ಮಾತನಾಡಿದರೆ ಆಕ್ಷೇಪಿಸಲು ಸುಬ್ರಹ್ಮಣ್ಯ ಪ್ರಯತ್ನಿಸುತ್ತಿರಲಿಲ್ಲ.

ರೈತರ ಕುಲಕ್ಕೆ ಸೇರಿದ್ದ ನಿಂಗವ್ವ ಅವರ ರಹಸ್ಯಗಳನ್ನು ಚೆನ್ನಾಗಿ ಬಲ್ಲವಳಾಗಿದ್ದಳು. ಮನೆಯ ಯಜಮಾನ ಕಣ್ಣು ಮುಚ್ಚಿಕೊಂಡುದನ್ನೇ ನೆಪಮಾಡಿಕೊಂಡು ರಾಯರ ಮಕ್ಕಳಿಗೆ ದ್ರೋಹವೆಸಗಲು ಹವಣಿಸುತ್ತಿದ್ದ ರೈತರಿಗೆ ನಿಂಗವ್ವ ಎಚ್ಚರಿಕೆ ಕೊಟ್ಟಳು. ರಾಯರಿಂದ ನೊಂದಿದ್ದ ಮೂಡಲಿ, ಕರುವಿನಹಟ್ಟಿ ರಂಗ ಇವರಿಗೆ ಯೋಗ್ಯ ಪರಿಹಾರ ಕೊಡಬೇಕೆಂದೂ ನಿಂಗವ್ವ ಪ್ರಾರ್ಥಿಸಿಕೊಂಡಿದ್ದಳು.

ತಂದೆಯ ಶವ ಮನೆಯಲ್ಲಿ ಬಿದ್ದಿದ್ದರೂ ಅದನ್ನು ಕತ್ತೆತ್ತಿ ನೋಡದಿದ್ದ ಊರಿನವರ ಮೇಲೆ ಸುಬ್ರಹ್ಮಣ್ಯನಿಗೆ ಭಯಂಕರ ಕೋಪ ಬಂದಿತ್ತು. ಆದರೇನು ಮಾಡುವುದು ? ಊರಿನವರನ್ನು ಬಿಟ್ಟು ಬಾಳ್ವೆ ಮಾಡುವುದು ಸಾಧ್ಯವೇ ? ನಾಳೆ ರೈತರು ಮುಷ್ಕರ ಮಾಡಿ ರಾಯರ ಹೊಲ, ಗದ್ದೆ, ತೋಟ ಮಾಡುವುದಿಲ್ಲವೆಂದರೆ ಗತಿಯೇನು ? ಊರನ್ನು ಬಿಟ್ಟು ಬೇರೆ ಕಡೆಗೆ ಹೋಗುವುದೂ ಸಾಧ್ಯವಿರಲಿಲ್ಲ. ಪಾರ್ವತಮ್ಮ

ನವರು ಆ ಸೂಚನೆಯನ್ನೊಪ್ಪುವ ಸಂಭವವಿರಲಿಲ್ಲ. ಅಲ್ಲದೆ ಇಷ್ಟೊಂದು ಸಂಪತ್ತನ್ನು ಕಂಡವರ ಕೈಗೆ ಹಾಕಿ ಹೋಗುವುದೇ ಎಂಬ ಚಿಂತೆ ಸುಬ್ರಹ್ಮಣ್ಯನನ್ನು ಕಾಡತೊಡಗಿತು.

ಊರಿನವರನ್ನು ಒಲಿಸಿಕೊಂಡು ಅವರ ಪ್ರೀತಿ ವಿಶ್ವಾಸ ದೊರಕಿಸಿ ಕೊಳ್ಳುವುದೊಂದೇ ಮಾರ್ಗವೆಂದು ಸುಬ್ರಹ್ಮಣ್ಯ ನಿರ್ಧರಿಸಿದ. ಊರಿನವರ ಅಸಂತೋಷಕ್ಕೆ ತಂದೆಯ ಲೋಭ, ದುರಾಸೆ ಎರಡೂ ಕಾರಣವೆಂಬುದನ್ನು ತರ್ಕಿಸಿಕೊಂಡು ಅದಕ್ಕೆ ಪ್ರತಿಯಾಗಿ ತಾನು ಉದಾರಿಯೂ ತೃಪ್ತನೂ ಆಗಿರಬೇಕೆಂದು ನಿರ್ಧರಿಸಿಕೊಂಡ.

ಭೀಮಾಚಾರಿಯನ್ನು ರಾಯರು ತಾವು ಬದುಕಿರುವ ವರೆಗೆ ಮನೆಯ ಕಟ್ಟೆ ಹತ್ತಿಸಿರಲಿಲ್ಲ. ಅವನು ರಾಯರ ಮನೆಗೆ ಬಂದುದು ಆ ಕೊನೆಯ ದಿವಸವೇ. ವೈಕುಂಠ ಸಮಾರಾಧನೆಯ ವರೆಗೂ ಭೀಮಾಚಾರಿ ರಾಯರ ಮನೆ ಬಿಡಲಿಲ್ಲ. ಸುಬ್ರಹ್ಮಣ್ಯನಿಗೆ ಸಮಾಧಾನ ಹೇಳುವ ವ್ಯಾಜಮಾಡಿಕೊಂಡು ಅವನ ಸ್ನೇಹ ಬೆಳಸುತ್ತ ಬಂದ.

ಭೀಮಾಚಾರಿ ನೋಡುವುದಕ್ಕೆ ಭೀಮನ ಹಾಗಿರಲಿಲ್ಲ. ಭೀಮನ ಆಕಾರವಾಗಲಿ, ರೂಪಾಗಲಿ, ಶೌರ್ಯವಾಗಲಿ, ಆಚಾರಿಯಲ್ಲಿ ಸಂಪೂರ್ಣವಾಗಿ 'ಕಾಣೆ'ಯಾಗಿದ್ದಿತು. ಆದರೆ ಬುದ್ಧಿಶಕ್ತಿಯಲ್ಲಿ ದ್ವಿತೀಯ ಪಾಂಡವನನ್ನು ತಾವರೆಕೆರೆ ಭೀಮಾಚಾರಿ ಖಂಡಿತವಾಗಿಯೂ ಮೀರಿಸುತ್ತಿದ್ದ. ಊರಿನಲ್ಲಿ ಪಾರ್ಟಿ ಕಲಹಗಳನ್ನು ತಂದು ಹಾಕಿ, ಅವುಗಳಿಗೆ ನೀರೆರೆದು ಬೆಳಸಿ, ಉಭಯಪಕ್ಷದವರನ್ನೂ ಮೈಸೂರು ಕೋರ್ಟು ಬಾಗಿಲು ತುಳಿಸಿ, ಆಚಾರಿ ತನ್ನ ಜೀವನಾರ್ಥ ಸುಖವಾಗಿ ಸಾಗಿಸುತ್ತಿದ್ದ. ಅಮಲ್ದಾರರೂ, ರೆವಿನ್ಯೂ ಇನ್‌ಸ್ಪೆಕ್ಟರೂ, ಪೋಲೀಸ್ ಇನ್‌ಸ್ಪೆಕ್ಟರೂ ಭೀಮಾಚಾರಿಯ ಸ್ನೇಹಕ್ಕೆ ಹಾತೊರೆಯುತ್ತಿದ್ದರು. ಮೂಕರ್ಜಿ ಬರೆಯುವುದರಲ್ಲಿ, ಬರೆಸುವುದರಲ್ಲಿ, ಅಧಿಕಾರಿಗಳಿಗೆ ಕಿರುಕುಳಕೊಡುವುದರಲ್ಲಿ, ರೈತರನ್ನು ಸುಲಿದು ತಿನ್ನುವುದರಲ್ಲಿ ಆಚಾರಿ ನಿಸ್ಸೀಮ ಪಾಂಡಿತ್ಯ ದೊರಕಿಸಿಕೊಂಡಿದ್ದ. ತನ್ನ ಕುಬ್ಜ ಕೃಷ್ಣಕಾಯಕ್ಕೆ ಆಚಾರಿ ಶುಭ್ರ ಶ್ವೇತ ಉಡುಗೆಗಳನ್ನುಡಿಸಿ, ನವರಾತ್ರಿ ಹಬ್ಬದ ಪಟ್ಟದ ಬೊಂಬೆಯನ್ನು ಸ್ಮರಣೆಗೆ ತರುತ್ತಿದ್ದ. ಅವನ ಶುಭ್ರದಂತಪಂಕ್ತಿ, ಕಪ್ಪುಮುಖದ ಚೌಕಟ್ಟಿನಲ್ಲಿ ಪ್ರಭಾವಶಾಲಿಯಾಗಿ ರಾರಾಜಿಸುತ್ತಿತ್ತು.

ಬಾಲಬ್ರಹ್ಮಚಾರಿಯಾಗಿದ್ದ ಭೀಮಾಚಾರಿಗೆ ಹೆಂಡತಿ ಮಕ್ಕಳ ಕಾಟವಿರಲಿಲ್ಲ. ನಿರ್ದಾಕ್ಷಿಣ್ಯವಾಗಿ ಕಂಡವರ ಮನೆಯಲ್ಲಿ ಕವಳ ಕತ್ತರಿಸುತ್ತಿದ್ದುದರಿಂದ ಅವನಿಗೆ ಯಾವ ತೊಂದರೆಯೂ ಇರಲಿಲ್ಲ. ಎಲ್ಲಿಯೂ ಊಟಕ್ಕೆ ಅನುಕೂಲವಾಗದಿದ್ದ ದಿನ ಸ್ವಯಂಪಾಕ ಮಾಡಿಕೊಳ್ಳುತ್ತಿದ್ದ. ಭೀಮಪಾಕ ಇಳಿಸುವುದರಲ್ಲಿ ತಾನು ಪ್ರವೀಣನೆಂಬ ಹೆಮ್ಮೆಯೂ ಆಚಾರಿಗಿತ್ತು.

ಸುಬ್ರಹ್ಮಣ್ಯನಿಗೂ ಭೀಮಾಚಾರಿಗೂ 'ಗಳಸ್ಯ ಕಂಠಸ್ಯ' ಆಗುವುದಕ್ಕೆ ಬಹಳ ಕಾಲ ಹಿಡಿಸಲಿಲ್ಲ.

ಅಕ್ಕಸಾಲೆ ಚಿನ್ನಪ್ಪ, ದಾಸರ ಪರಮಾನಂದಯ್ಯ ಇಬ್ಬರೂ ಆಚಾರಿಯ ಬಳಗಕ್ಕೆ ಸೇರಿದವರು. ಆಚಾರಿಯ ಮಾತೆಂದರೆ ಅವರಿಗೆ ವೇದ ವಾಕ್ಯ. ಚಿನ್ನಪ್ಪನ ಜುಟ್ಟು ಭದ್ರವಾಗಿ ಭೀಮಾಚಾರಿ ಕೈಗೆ ಸಿಕ್ಕುವುದಕ್ಕೆ ಒಂದು ಕಾರಣವಿತ್ತು. ಚಿನ್ನಪ್ಪನ ನೀತಿಯ ಬಗ್ಗೆ ಊರಿನವರಿಗೆ ಗೌರವವಿರಲಿಲ್ಲ. ಮಾಮೂಲಾಗಿ ಎಲ್ಲ ಅಕ್ಕಸಾಲೆಗಳಂತೆ ಅವನು ಚಿನ್ನ ಬೆಳ್ಳಿ ಕದಿಯುವುದಕ್ಕೆ ಅವರು ಬೇಡವೆನ್ನುತ್ತಿರಲಿಲ್ಲ. ಆದರೆ ಹೆಣ್ಣು ಮಕ್ಕಳ ವಿಷಯದಲ್ಲಿ ಅವನು ತೋರುತ್ತಿದ್ದ ಹಾವಭಾವ ಅಸಹ್ಯಕರವಾಗಿತ್ತು. ಊರಿನ ಮರ್ಯಾದಸ್ಥರು ಒಡವೆ ಮಾಡಿಸಬೇಕಾದರೆ ಮೈಸೂರಿಗೋ ಬೆಂಗಳೂರಿಗೋ ಹೋಗುತ್ತಿದ್ದರಲ್ಲದೆ ಚಿನ್ನಪ್ಪನ ಅಂಗಡಿಗೆ ಕಾಲಿಡುತ್ತಿರಲಿಲ್ಲ. ಚಿನ್ನಪ್ಪ ಕೇವಲ ತನ್ನ ವೃತ್ತಿಯಿಂದಲೇ ಹೊಟ್ಟೆ ಹೊರೆಯಬೇಕಾಗಿರಲಿಲ್ಲ. ನೆಮ್ಮದಿಯಾಗಿ ಕೂತು ಉಣ್ಣುವಷ್ಟು ಹೊಲ ಗದ್ದೆಯಿದ್ದುದರಿಂದ ಅವನು ಊರಿನವರ ಅಸಹಕಾರವನ್ನು ಲಕ್ಷಿಸಿಯೇ ಇರಲಿಲ್ಲ. ಅಂಗಡಿಯ ಮೇಲೆ ಕೂಡ ಅವನು ಕೂರುತ್ತಿರಲಿಲ್ಲ. ಅವನ ಮುಟ್ಠಾಳ ಮಗ ಚೆಲುವಾಚಾರಿ ಹಾಗೂ ಹೀಗೂ ಅಂಗಡಿಯನ್ನು ತೂಗಿಸಿಕೊಂಡು ಹೋಗುತ್ತಿದ್ದ.

ಚೆಲುವಾಚಾರಿಯ ಮದುವೆಯನ್ನು ಚಿನ್ನಪ್ಪ ವಿಜೃಂಭಣೆಯಿಂದಲೇ ಮಾಡಿದ್ದ. ಮೂಗೂರಿನಿಂದ ನಾಯಕಸಾನಿಯರನ್ನು ಕರೆಸಿ 'ತಾಫೆ' ಮಾಡಿಸಿ, ಊರಿನವರ ತಾತ್ಸಾರಕ್ಕೆ ಬಲವಾಗಿ ಪೆಟ್ಟು ಕೊಟ್ಟಿದ್ದ.

ಸೊಸೆ ಜಾನಕಿ ಮನೆಗೆ ಬಂದ ದಿನದಿಂದಲೂ ಚಿನ್ನಪ್ಪನಿಗೆ

ಅವಳ ಮೇಲೆ ಕಣ್ಣು. ಗಂಡನ ಸ್ವಭಾವ ಚೆನ್ನಾಗಿ ಬಲ್ಲ ಚಿನ್ನಪ್ಪನ ಹೆಂಡತಿ ಸುಂದರಮ್ಮ ಮೈಯೆಲ್ಲಾ ಕಣ್ಣು ಮಾಡಿಕೊಂಡು ಸೊಸೆಯ ಕಾವಲು ಕಾಯುತ್ತಿದ್ದಳು. ಒಂದು ಸಲ ಸುಂದರಮ್ಮ ತೌರುಮನೆಗೆ ಹೋಗಬೇಕಾಗಿ ಬಂತು. ಸೊಸೆಗೆ ಮನೆಯ ವಿಷಯವನ್ನು ಸೂಕ್ಷ್ಮ ವಾಗಿ ತಿಳಿಸಿ, ಎಚ್ಚರವಾಗಿರುವಂತೆ ಸಂದೇಶವಿತ್ತು ತೌರುಮನೆಗೆ ಪ್ರಯಾಣಮಾಡಿದಳು. ಅದೇ ಸಂಜೆ ಚೆಲುವಾಚಾರಿ ವ್ಯಾಪಾರ ಮಾಡುತ್ತ ಅಂಗಡಿಯಲ್ಲೇ ಕುಳಿತಿದ್ದಾನೆ. ಚಿನ್ನಪ್ಪ ಮನೆಗೆ ಬಂದು ಕಾಮಚೇಷ್ಟೆ ಪ್ರಾರಂಭಿಸಿದ. ಜಾನಕಿಗೆ ಮೊದಲು ಮೊದಲು ಮಾವ ನವರ ಮಾತುಕತೆ ಅರ್ಥವಾಗಲಿಲ್ಲ. ಚಿನ್ನಪ್ಪ ಹೆಚ್ಚು ಕಾತರ ತೋರಿಸಲು ಜಾನಕಿ, ಅವನನ್ನು ನಿರಾಕರಿಸಿ, ಗಟ್ಟಿಯಾಗಿ ಚೀರುವು ದಾಗಿ ಬೆದರಿಕೆ ಹಾಕಿದಳು.

ಚಿನ್ನಪ್ಪನಿಗೆ ಮೈಮೇಲೆ ಸ್ವಲ್ಪವೂ ಜ್ಞಾನವಿರಲಿಲ್ಲ. ದೇವಿಸೇವೆ ಬೇರೆ ಅವನ ಬುದ್ಧಿಗೆ ಮತ್ತಷ್ಟು ಮಂಕು ಹಿಡಿಸಿತ್ತು. ನಿರ್ಲಜ್ಜೆಯಿಂದ ಸೊಸೆಯನ್ನು ವಶಪಡಿಸಿಕೊಳ್ಳಲೆತ್ನಿಸಿದ. ಜಾನಕಿ ಅವನ ಹಿಡಿತದಿಂದ ತಪ್ಪಿಸಿಕೊಳ್ಳುತ್ತ ಮನೆಯಿಂದ ಹೊರಬರಲೆತ್ನಿಸಿದಳು. ಚಿನ್ನಪ್ಪನಿಗೆ ಮೈಯಲ್ಲಿ ನಡುಕ ಹುಟ್ಟಿತು. ಜಾನಕಿ ಹಾದಿರಂಪ ಬೀದಿರಂಪ ಮಾಡುವುದರಲ್ಲಿ ಸಂದೇಹವಿಲ್ಲವೆಂದು ಗ್ರಹಿಸಿದ ಚಿನ್ನಪ್ಪ ಅವಳಿಗೆ ಆಶೆಯ ಬಲೆ ಬೀರಿದ. ಜಾನಕಿ ಮತ್ತಷ್ಟು ಬೆದರಿ ಚೀರಲಾರಂಭಿಸಿ ದಳು. ಚಿನ್ನಪ್ಪ ಅವಳ ಬಾಯನ್ನು ಕೈಯಲ್ಲಿ ಒತ್ತಿ ಹಿಡಿದು ಬಲವಾಗಿ ಮುಚ್ಚಿದ. ಎಡಗೈ ಅವಳ ಕುತ್ತಿಗೆಯ ಮೇಲಿದ್ದುದು ಅವನ ಮನಸ್ಸಿಗೆ ಹೊಳೆಯಲಿಲ್ಲ. ಜಾನಕಿ ಎರಡೇ ನಿಮಿಷದಲ್ಲಿ ಕುಸಿದು ಬಿದ್ದಳು.

ಚಿನ್ನಪ್ಪನ ಅಮಲು ಕ್ಷಣಾರ್ಧದಲ್ಲಿ ಕೆಳಗಿಳಿಯಿತು. ಬುದ್ಧಿ ತಿಳಿಯಾಯಿತು.. ಭಯದಿಂದ ಮೈನಡುಗಿತು. ಮೆಲ್ಲನೆ ಜಾನಕಿ ಯನ್ನೆತ್ತಿಕೊಂಡು ಹಾಸಿಗೆಯ ಮೇಲೆ ಮಲಗಿಸಿ, ಮನೆಗೆ ಬೀಗ ಹಾಕಿ ಕೊಂಡು ಭೀಮಾಚಾರಿಯನ್ನು ಹುಡುಕಿಕೊಂಡು ಹೋದ.

ಭೀಮಾಚಾರಿಯಲ್ಲಿ ಯಾವುದನ್ನೂ ಮರೆಮಾಚುವಂತಿರಲಿಲ್ಲ. ನಡೆದ ಸಂಗತಿಯನ್ನು ವಿವರಿಸಿ, ತನ್ನನ್ನು ಕಾಪಾಡಬೇಕೆಂದು ಮೊರೆ ಯಿಟ್ಟ.

"ಖೂನಿಮಾಡಿದ್ದೀಯಲ್ಲೋ ಮುಟ್ಠಾಳ!"

"ಬೇಕೂಂತ ಮಾಡಲಿಲ್ಲ ಭೀಮಣ್ಣ. ಅವಳ ಬಾಯಿ ಮುಚ್ಚಿದ್ರೆ, ಪ್ರಾಣ ಹೋಗಿಬಿಟ್ಟಿತು."

"ಇದಕ್ಕೇನು ಮಾಡೂಂತೀ?"

"ನೀನು ಏನು ಹೇಳಿದರೂ ಮಾಡ್ತೀನಪ್ಪಾ."

"ಮೊದಲು ಹೆಣದ ಒಪ್ಪ ಮಾಡಬೇಕು. ನಿನ್ನ ಸೊಸೆಗೇನಾದರೂ ಹೊಟ್ಟೆನೋವು ಬರ್ತಿತ್ತೋ?"

"ಇಲ್ಲಪ್ಪಾ—ಕಲ್ಲುಗುಂಡಿದ್ದ ಹಾಗಿದ್ದಳು."

"ನಾಲ್ಕೈದು ಸಾವಿರ ಕಕ್ಕುವುದಕ್ಕೆ ಸಿದ್ಧವಾಗಿದ್ದೀಯೋ?"

"ನಾಲ್ಕೈದು ಸಾವಿರ!"

"ಪೋಲೀಸಿನವರ ಕೈಬೆಚ್ಚಗೆ ಮಾಡದಿದ್ರೆ ಫಾಸೀಮರದಲ್ಲಿ ತೂಗಾಡುವೆಯಂತೆ!"

"ಆಗಲಪ್ಪಾ—ನೀನು ಹೇಳಿದಂತೆ ಮಾಡುತ್ತೇನೆ."

"ನಡೀ—ಮೊದಲು ಮನೆಗೆ ಹೋಗೋಣ."

ಆಚಾರಿ ಬುದ್ಧಿ ವಾಯುವೇಗದಲ್ಲಿ ಓಡಿತು. ಚಿನ್ನಪ್ಪನ ಸಹಾಯದಿಂದ ಹೆಣವನ್ನು ಭಾವಿಯ ಬಳಿಗೆ ತಂದು, ಒಂದು ಬಿಂದಿಗೆ ಕಟ್ಟಿ ಹಗ್ಗದ ಸಮೇತ ಅದನ್ನು ಭಾವಿಗೆ ನೂಕಿ, ಜಾನಕಿಯ ಕಳೇಬರವನ್ನು ಭಾವಿಗೆ ತಳ್ಳಿಬಿಟ್ಟ.

"ಮನೆ ಬೀಗ ಹಾಕಬೇಡ. ಹಿತ್ತಲು ಬಾಗಿಲಿಂದ ಹೊರಗೆ ಬಂದು ಬಿಡು. ನಾನು ದಾಸರಿ ಮನೆಯಲ್ಲಿರುತ್ತೇನೆ—ಅಲ್ಲಿಗೆ ಬಾ"

ಎಂದು ಹೇಳಿ ಹೋದ. ಅವನ ಹಿಂದೆಯೇ ಚಿನ್ನಪ್ಪ ಹೋಗಿ ದಾಸರಿ ಮನೆ ಸೇರಿಕೊಂಡ.

ದಾಸರಿ, ಶಾಂತರುದ್ರ ಇಬ್ಬರೇ ಕುಳಿತುಕೊಂಡು ಇಸ್ಪೇಟು ಆಡುತ್ತಿದ್ದರು. ಚಿನ್ನಪ್ಪ, ಆಚಾರಿ ಬಂದುದನ್ನು ನೋಡಿ ಸಂತೋಷಪಟ್ಟುಕೊಂಡು ಎಲೆಗಳನ್ನು ನಾಲ್ವರಿಗೂ ಹಂಚಿದರು.

ಆಟ ಎಷ್ಟು ಹೊತ್ತು ಸಾಗಿತೋ ಯಾರಿಗೂ ತಿಳಿಯದು. ಸುಮಾರು ಒಂಭತ್ತು ಗಂಟೆಯಿರಬಹುದು. ದಾಸರಿ ಮನೆಯ ಕೆಳಗೆ ಚೆಲುವಾಚಾರಿ ಧ್ವನಿ!

"ದಾಸರೇ—ದಾಸರೇ..........."

ದಾಸರಿ ಕಿಟಕಿಯಲ್ಲಿ ಬಗ್ಗಿ ನೋಡಿ,

"ಯಾರು—ಯಾರದು?" ಎಂದು ಕೇಳಿದ.

"ನಾನು ಚೆಲುವಾಚಾರಿ. ನಮ್ಮ ತಂದೆ ಬಂದವ್ರಾ?"

"ಬಂದವ್ರೆ. ಮೇಲಕ್ಕೇ ಬಾ."

ಚೆಲುವಾಚಾರಿ ಏಳುವುದನ್ನೂ ಬೀಳುವುದನ್ನೂ ನೋಡದೆ ಮೇಲಕ್ಕೆ ಬಂದು ಚಿನ್ನಪ್ಪನನ್ನು ನೋಡಿ,

"ಅಪ್ಪಯ್ಯಾ...........!"

ಎಂದ. ಅವನ ದುಃಖದ ಕಟ್ಟೆಯೊಡೆದು ಪ್ರವಾಹ ಹೊರಟು ಬಿಟ್ಟಿತು.

ಚಿನ್ನಪ್ಪ ಎಲೆಗಳನ್ನು ಜೋಡಿಸುತ್ತಾ ಶಾಂತವಾಗಿ,

"ಏನಾಯ್ತು ಚೆಲುವ?" ಎಂದು ಕೇಳಿದ.

"ಜಾನಕಿ ಮನೇಲಿಲ್ಲ ಅಪ್ಪಯ್ಯ. ಎಲ್ಲಿಗೋ ಒಂಟೋಗವಳೆ!"

"ಎಲ್ಲಿ ಹೋಗಿರುತ್ತಾಳೋ. ಅಲ್ಲೇ ಬಯಲು ಕಡೆ ಓಗಿರ ಭೋದು."

"ಇಲ್ಲ ಅಪ್ಪಯ್ಯಾ. ಎಲ್ಲಾ ಉಡುಕಿ ನೋಡಿದೆ. ಅವಳ ಸುಳಿವೇ ಇಲ್ಲ."

ಚಿನ್ನಪ್ಪ ಎಲೆಗಳನ್ನು ನೆಲದ ಮೇಲೆ ಅಪ್ಪಳಿಸಿ ಮಗನನ್ನು ಬಯ್ಯುತ್ತಾ ಅವನ ಜತೆ ಹೊರಟ. ಭೀಮಾಚಾರಿ, ದಾಸರಿ ಅವರನ್ನೇ ಹಿಂಬಾಲಿಸಿದರು. ಶಾಂತರುದ್ರ ಹೊತ್ತಾಯಿತೆಂದು ಹೇಳಿ ಮನೆಯ ದಾರಿ ಹಿಡಿದ.

ಚಿನ್ನಪ್ಪನ ಮನೆಯ ಶೋಧನೆಯ ಕೆಲಸ ನಡೆಯಿತು. ಜಾನಕಿ ಪತ್ತೆ ಯಾರಿಗೂ ಸಿಕ್ಕಲಿಲ್ಲ. ಭೀಮಾಚಾರಿ ಮೆಲ್ಲನೆ,

"ಚಿನ್ನಪ್ಪ, ಪೋಲೀಸಿನವರಿಗೆ ತಿಳಿಸುವುದೊಳ್ಳೆಯದು.......... ಜಾನಕಿಗೆ ಏನಾದರೂ ಕೆಟ್ಟಚಾಳಿ ಇತ್ತೇ?"

"ಇಲ್ಲ ಸೋಮಿ. ಅವಳು ಅಂಥವಳಲ್ಲ. ಭೋ ಒಳ್ಳೆಯವಳು."

ಎಂದು ಚೆಲುವಾಚಾರಿ ಆಗ್ರ್ರನಾಗಿ ನುಡಿದ.

ಭೀಮಾಚಾರಿ ದಾಸರಿಯನ್ನು ಕಳಿಸಿಕೊಟ್ಟು ಪೋಲೀಸ್ ಇನ್‌ಸ್ಪೆಕ್ಟರ್ ವೆಂಕಟಸ್ವಾಮಿಯನ್ನು ಬರಮಾಡಿಕೊಂಡ. ಇನ್‌ಸ್ಪೆಕ್ಟರ್ ತನಿಖೆ ನಡಸಿ ಮನೆಯೆನ್ನೆಲ್ಲಾ ಶೋಧಿಸಿ, ನೂರಾರು ಕೆಲಸಕ್ಕೆ ಬಾರದ ಪ್ರಶ್ನೆಗಳನ್ನು ಕೇಳುತ್ತಾ ಬಾವಿಯ ಕಡೆ ದೃಷ್ಟಿ ಬೀರಿದರು. ಹಗ್ಗ ಕಾಣದಿರಲು ಟಾರ್ಚ್‌ಲೈಟ್ ಬಿಟ್ಟು ಭಾವಿಯೊಳಗೆ ಬಗ್ಗಿ ನೋಡಿದರು. ಅವರಿಗೆ ಬಲವಾದ ಅನುಮಾನ ಬಂದಿತು. ತೋಟಿ ತಳವಾರರನ್ನು ಕರೆಸಿ ಭಾವಿಯಲ್ಲಿಳಿಸಿದರು.

ಜಾನಕಿಯ ಶವ ಮೇಲಕ್ಕೆ ಬಂದಿತು.

ಇನ್‌ಸ್ಪೆಕ್ಟರು ತುಟಿಯನ್ನು ನಾಲಗೆಯಲ್ಲಿ ಸವರಿಕೊಳ್ಳುತ್ತಾ,

" ಇದಕ್ಕೇನು ಹೇಳುವಿರಿ ಚಿನ್ನಪ್ಪಾಚಾರ್ರೇ ?" ಎಂದು ಕೇಳಿದರು.

ಚಿನ್ನಪ್ಪ ಗಡಗಡ ನಡುಗುತ್ತಾ ನಿಂತುಕೊಂಡ. ಭೀಮಾಚಾರಿ ಇನ್‌ಸ್ಪೆಕ್ಟರ ಸಮೀಪಕ್ಕೆ ಬಂದು,

"ನಾನು, ದಾಸರ ಪರಮಾನಂದಯ್ಯ, ಶಾಂತರುದ್ರಣ್ಣ, ಚಿನ್ನಪ್ಪ ಎಲ್ಲರೂ ಸಂಜೆಯಿಂದ ದಾಸರ ಮನೆಯಲ್ಲಿ ಇಸ್ಪೇಟ್ ಆಡುತ್ತಾ ಕುಳಿತ್ತಿದ್ದೆವು. ಚೆಲುವಾಚಾರಿ ಅಂಗಡಿಯಲ್ಲಿ ವ್ಯಾಪಾರಮಾಡುತ್ತ ಕುಳಿತ್ತಿದ್ದ"

ಎಂದ. ಇನ್‌ಸ್ಪೆಕ್ಟರು ಚೆಲುವಾಚಾರಿ ಕಡೆ ತಿರುಗಿ,

"ನೀನು ಎಷ್ಟು ಹೊತ್ತಿಗೆ ಮನೆಗೆ ಬಂದೆ ಚೆಲುವಾಚಾರಿ?"

ಎಂದು ಕೇಳಿದರು.

ಚೆಲುವಾಚಾರಿ ಮೈಬೆವರು ಒರಸಿಕೊಳ್ಳುತ್ತಾ ಗದ್ಗದ ಕಂಠದಿಂದ

"ಎಂಟೂವರೆಗೆ ಮಾಮೂಲಿನಂತೆ ಅಂಗಡಿ ಬಾಕಿಲು ಹಾಕಿ ಮನೇಗೆ ಬಂದೆ. ಬಾಕಿಲು ತಟ್ಟಿದೆ. ಯಾರೂ ಬಾಕಿಲು ತೆಗೀನಿಲ್ಲ. ಹಿತ್ತಲ ಕಡೆಯಿಂದ ಬಂದು ಅವಳ ಎಸರು ಇಡಿದು ಕೂಗಿದೆ—ಜವಾಬು ಬರ್ನಿಲ್ಲ, ದೀಪ ಹಚ್ಚಿ ಮನೆಯಲ್ಲೆ ಉಡುಕಿದೆ—ಅವಳು ಕಾಣಲಿಲ್ಲ. ಅಪ್ಪಾಜಿಯೋರು ದಾಸರ ಮನೇಲಿರಬೋದು ಅಂದ್ಕೊಂಡು ಅಲ್ಲಿಗೆ ಓಡ್ದೆ—ಅವರು ಚಿಕ್ಕಿದರು. ಇಷ್ಟೇ ಸೋಮಿ ನನಕೆ ಗೊತ್ತಿರೋದು."

ಹೆಣದ ಮಹಜರು ಕ್ರಮ ಮುಗಿಯಿತು.

ಭೀಮಾಚಾರಿಯೇ ಹೋಗಿ ಡಾಕ್ಟರನ್ನು ಕರೆದುಕೊಂಡು ಬಂದು ಪರೀಕ್ಷೆ ಮಾಡಿಸಿ 'ಸರ್ಟಿಫಿಕೇಟ್' ಕೊಡಿಸಿದ.

ಬೆಳಿಗ್ಗೆ ಶವಸಂಸ್ಕಾರಕ್ಕೆ ಇನ್ಸ್‌ಪೆಕ್ಟರ ಅಪ್ಪಣೆ ದೊರಕಿತು. 'ಜಾನಕಿ ನೀರು ಸೇದಲು ಹೋಗಿದ್ದಳು. ಹಗ್ಗ ಕಾಲಿಗೆ ತೊಡರಿಕೊಂಡಿತು. ಭಾವಿಗೆ ಬಿದ್ದು ಮೃತಳಾದಳು.' ಎಂದು ವರದಿ ಹೊರಬಿತ್ತು.

ಚಿನ್ನಪ್ಪನ ಕೈಯಿಂದ ಇನ್ಸ್‌ಪೆಕ್ಟರಿಗೆ, ಡಾಕ್ಟರಿಗೆ, ಭೀಮಾಚಾರಿಗೆ ಎರಡೆರಡು ಸಾವಿರ ಹಿಂದಿನ ರಾತ್ರಿಯೇ ಬಟವಾಡೆಯಾಗಿತ್ತು.

ಅಂದಿನಿಂದ ಭೀಮಾಚಾರಿಯೆಂದರೆ ಚಿನ್ನಪ್ಪನಿಗೆ ಸಾಕ್ಷಾತ್ ಪರಮೇಶ್ವರನಾಗಿದ್ದ.

ಭೀಮಾಚಾರಿ ಗುಂಪಿನಲ್ಲಿ ಶಾಂತರುದ್ರನೇ ಹೆಚ್ಚು ಓದಿದವನು. ಮೆಟ್ರಿಕ್‌ನಲ್ಲಿ ಮೂರು ಸಲ ಡುಮುಕಿ ಹೊಡೆದು, ನಾಲ್ಕನೆಯ ಸಲ ಪರೀಕ್ಷಕರ ಕೈಕಾಲು ಕಟ್ಟಿ ಪ್ಯಾಸ್ ಮಾಡಿ, ಒಂದು ವರ್ಷ ಕಾಲೇಜಿಗೂ ಮಣ್ಣು ಹೊತ್ತು ಸಾಕಾಗಿ ಊರು ಸೇರಿದ್ದ. ಅವನ ತಂದೆ ಸಿದ್ಧಲಿಂಗಪ್ಪ ಲೇವಾದೇವಿ ಮಾಡಿ ಸಾಕಷ್ಟು ಗಳಿಸಿದ್ದುದರಿಂದ ಶಾಂತರುದ್ರ ಹೊಟ್ಟೆಯ ಪಾಡಿಗೆ ದುಡಿಯಬೇಕಾಗಿರಲಿಲ್ಲ. ಸಂಜೆ ಹೊತ್ತು ಹೋಗಲೆಂದು ಪರಮಾನಂದಯ್ಯನ ಕ್ಲಬ್ಬಿಗೆ ಸೇರಿದ್ದ. ಇಸ್ಪೇಟ್ ಎಂದರೆ ಜೀವ ಬಿಡುತ್ತಿದ್ದ ಶಾಂತರುದ್ರನನ್ನು ಕ್ಲಬ್ಬಿಗೆ ಸೇರಿಸಿಕೊಳ್ಳುವುದಕ್ಕೆ ಪರಮಾನಂದಯ್ಯ ಹಿಂದೆ ಮುಂದೆ ನೋಡಲಿಲ್ಲ.

ದಾಸರ ಪರಮಾನಂದಯ್ಯ ಇವರೆಲ್ಲರನ್ನೂ ಕಟ್ಟುವ ತಂತುವಾಗಿದ್ದ. ಅವನ ಮನೆಯ ಮಹಡಿಯ ಮೇಲೆ ವಿಶಾಲವಾದ ಕೋಣೆಯಿದ್ದುದರಿಂದ ಇಸ್ಪೇಟ್ ಕಛೇರಿ ನಡಸಲು ಸೌಕರ್ಯವಿತ್ತು.

ಪರಮಾನಂದಯ್ಯನ ಪೂರ್ವಜರು ದಾಸರಿವೃತ್ತಿ ಮಾಡಿಕೊಂಡು, ಮಧುಕರಿಯ ಮೇಲೇ ಅವಲಂಬನ ಮಾಡಿಕೊಂಡಿದ್ದರು. ಪರಮಾನಂದಯ್ಯನೂ ಬಾಲ್ಯದಲ್ಲಿ ಜಾಗಟೆ ಬಾರಿಸಿಕೊಂಡು ಶಂಖ ಊದಿಕೊಂಡು ಮನೆ ಮನೆ ಅಲೆದಿದ್ದ. ಅವನ ರೂಪಕ್ಕೆ ಮರುಳಾದ ಒಂದು ನಾಟಕದ ಕಂಪೆನಿಯವರು ಕರೆದೊಯ್ದು ನಟನನ್ನಾಗಿ ಮಾರ್ಪಡಿಸಿದರು. ಕಂಪೆನಿಯಲ್ಲಿ ಪರಮಾನಂದಯ್ಯ ಹಾರ್ಮೋನಿಯಂ, ಮೃದಂಗ ವಾದ್ಯವಾದನ ಕಲಿತು 'ವಿದ್ವಾನ್'

ಪ್ರಶಸ್ತಿಯನ್ನು ತಾನೇ ಅಂಟಿಸಿಕೊಂಡ. ನಾಟಕದಲ್ಲಿ ನುರಿತು ಪರಮಾನಂದಯ್ಯ ಹಳೇಹುಲಿಯಾದ ಮೇಲೆ ತಾನೇ ಒಂದು ಕಂಪನಿ ಸ್ಥಾಪಿಸಿ ಹುಬ್ಬಳ್ಳಿಯ ವರೆಗೂ ಹೋಗಿ ಬಂದ. ಕಂಪೆನಿಯಲ್ಲಿ ಕಿತ್ತಾಟ ಆರಂಭವಾಗಿ ಅದು ಹರಿಹರದಲ್ಲಿ ಹೊಳೆಪಾಲಾಯಿತು. ಪರಮಾನಂದಯ್ಯ ರಾಣೀಪಾರ್ಟು ಮಾಡುತ್ತಿದ್ದ ಜಯಳನ್ನು ಕರೆದುಕೊಂಡು, ಕಂಪೆನಿಯ ಸಾಮಾನನ್ನೆಲ್ಲಾ ಮಾರಿಕೊಂಡು ಊರು ಸೇರಿದ. ಕೈಯಲ್ಲಿದ್ದ ಹಣದಲ್ಲಿ ಮನೆ, ಹೊಲ ಮಾಡಿಕೊಂಡು ಸುಖಜೀವನ ನಡಸಲಾರಂಭಿಸಿದ. ಸುತ್ತಮುತ್ತಲ ಹಳ್ಳಿಯವರು ನಾಟಕ ತರಬೇತಿ ಕೊಡುವುದಕ್ಕೆ, ಹಾರ್ಮೋನಿಯಂ, ಬಾರಿಸುವುದಕ್ಕೆ ಪರಮಾನಂದಯ್ಯನನ್ನು ಆಗಾಗ್ಗೆ ಕರೆದುಕೊಂಡು ಹೋಗಿ ಅವನಿಗೆ ಹತ್ತಿಪ್ಪತ್ತು ರೂಪಾಯಿ ಕೊಟ್ಟು ಕಳಿಸುತ್ತಿದ್ದರು.

ಪರಮಾನಂದಯ್ಯ, ಜಯ ಗಂಡಹೆಂಡಿರಂತೆ ಬಾಳ್ವೆ ಮಾಡುತ್ತಿದ್ದರು. ಅವರ ಮಗಳು ಮಂಗಳಾ ವಯಸ್ಸಿಗೆ ಬಂದು ನೋಡುವವರ ಕಣ್ಣು ಕೋರೈಸುತ್ತಿದ್ದಳು. ಮಗಳನ್ನು ಆಧಾರವಾಗಿಟ್ಟುಕೊಂಡು ಪುನಃ ನಾಟಕದ ಕಂಪೆನಿ ಸ್ಥಾಪಿಸುವ ಚಾಪಲ್ಯ ಪರಮಾನಂದಯ್ಯನನ್ನು ಬಲವಾಗಿ ಬಾಧಿಸುತ್ತಿತ್ತು. ಒಂದೆರಡು ಬಾರಿ ಈ ವಿಷಯ ಭೀಮಾಚಾರಿಯಲ್ಲಿ ಪ್ರಸ್ತಾಪಿಸಿದಾಗ ಅವನು,

"ಇರಲಿ ತಡೀ ನೋಡೋಣ. ದುಡ್ಡು ಕೊಡೋಕೆ ಒಬ್ಬ ಧಣಿ ಸಿಕ್ಕಲಿ" ಎಂದು ಹೇಳಿದ್ದ.

ಪರಮಾನಂದಯ್ಯ "ದುಡ್ಡು ಕೊಡುವ ಧಣಿ"ಯ ಬರುವನ್ನು ಕಾಯುತ್ತಿದ್ದ. ಶಾಂತರುದ್ರ ಕ್ಲಬ್ ಸೇರಿದಾಗ ಅವನ ಆಸೆ ಮೊಳಕೆ ಹಾಕಿತು. ಆದರೆ ಸಿದ್ಧಲಿಂಗಪ್ಪನವರ ಮುಂಗಮುಷ್ಟಿಯಲ್ಲಿದ್ದ ಶಾಂತರುದ್ರ ಮಿಸುಗಾಡುವ ಹಾಗಿಲ್ಲವೆಂದು ತಿಳಿದ ಮೇಲೆ ಅವನ ಮೇಲಣ ಆಸೆಯನ್ನು ತೊರೆದುಬಿಟ್ಟಿದ್ದ.

ಇದೇ ಸಮಯಕ್ಕೆ ಸರಿಯಾಗಿ ಭೀಮಾಚಾರಿ ಸುಬ್ರಹ್ಮಣ್ಯನನ್ನು ಕರೆತಂದು ಕ್ಲಬ್ಬು ಸೇರಿಸಿದ. ಊರಿನವರ ವಿಶ್ವಾಸಕ್ಕೆ ಹಾತೊರೆಯುತ್ತಿದ್ದ ಸುಬ್ರಹ್ಮಣ್ಯನಿಗೆ ಭೀಮಾಚಾರಿಯ ಸಲಹೆ ತುಂಬ ಪ್ರಿಯವಾಯಿತು.

೭

ಪತಿವಿಯೋಗವಾದ ಮೇಲೆ ಸಾಮಾನ್ಯವಾಗಿ ಪಾರ್ವತಮ್ಮನವರು ಮನೆಬಿಟ್ಟು ಹೊರಕ್ಕೇ ಬರುತ್ತಿರಲಿಲ್ಲ. ಮನೆಯಲ್ಲಿಯೂ ತಾವಾಗಿಯೇ ಯಾವುದಕ್ಕೂ ಬಾಯಿಹಾಕಿಕೊಂಡು ಬರುತ್ತಿರಲಿಲ್ಲ. ಸುಬ್ರಹ್ಮಣ್ಯನೋ ಗೌರಿಯೋ ಏನಾದರೂ ಬಂದು ಕೇಳಿದರೆ ಅದಕ್ಕೆ ಉತ್ತರಕೊಟ್ಟು ತೆಪ್ಪಗಾಗುತ್ತಿದ್ದರು.

ಸುಬ್ರಹ್ಮಣ್ಯ ಮನೆ ಯಜಮಾನಿಕೆಯನ್ನು ವಹಿಸಿಕೊಂಡ ಕುರುಹಾಗಿ ಮನೆಯನ್ನು ಪುನರ್ರಚಿಸುವ ಉದ್ಯಮ ಕೈಗೊಂಡಿದ್ದ. ಇದಕ್ಕೂ ಸ್ಫೂರ್ತಿ ಭೀಮಾಚಾರಿಯಿಂದಲೇ ಬಂದಿತ್ತು.

"ಊರಿನಲ್ಲಿ ದೊಡ್ಡ ಸಾಹುಕಾರ. ನಿನ್ನ ಮನೆ ನೋಡಿದರೆ ದನದ ಕೊಟ್ಟಿಗೆ ಇದ್ದ ಹಾಗಿದೆಯಪ್ಪ" ಎಂದು ಭೀಮಾಚಾರಿ ಕೆಣಕಿದ.

"ಹಳೇ ಕಾಲದ ಮನೆ ಬಂದೋಬಸ್ತಾಗಿದೆ, ಭೀಮಾಚಾರಿ."

"ಊರಹೊರಗಿನ ಹಾಳುಮಂಟಪವೂ ಬಂದೋಬಸ್ತಾಗಿದೆ. ಮನೆ ಬಿಚ್ಚಿ ಲಕ್ಷಣವಾಗಿ ಕಟ್ಟಿಸಬಾರದೇ? ನಾಳೆ ನೀನು ಅಸೆಂಬ್ಲಿ, ಕೌನ್ಸಿಲ್ ಮೆಂಬರಾಗೋನು. ಹತ್ತಾರು ಜನ ಮನೆಗೆ ಬರುತ್ತಿರುತ್ತಾರೆ, ಹೋಗುತ್ತಿರುತ್ತಾರೆ. ಅವರನ್ನೆಲ್ಲಾ ಸಗಣಿ ಸಾರಿಸಿದ ನೆಲದ ಮೇಲೆ ಹರಕಲು ಮಂದಲಿಗೆ ಹಾಕಿ ಕೂಡಿಸುತ್ತೀಯಾ? ದೊಡ್ಡಸ್ಥಿಕೆ ಉಳಿಯಬೇಕಾದರೆ ಅದಕ್ಕೆ ಸ್ವಲ್ಪ ಪ್ರದರ್ಶನವೂ ಬೇಕು ಸುಬ್ರಹ್ಮಣ್ಯ."

ಪ್ರದರ್ಶನದ ಕೆಲಸ ನಿರ್ವಹಿಸುವ ಜವಾಬ್ದಾರಿಯನ್ನು ಸುಬ್ರಹ್ಮಣ್ಯ ಭೀಮಾಚಾರಿಗೆ ಒಪ್ಪಿಸಲು ತಡವಾಗಲಿಲ್ಲ. ತಾವರೆಕೆರೆಯಲ್ಲಿ 'ಮೌಲ್ಡಿಂಗ್' ಮಾಡಿಸಿದ ಮೊಟ್ಟ ಮೊದಲನೆಯ ಮನೆಯೇ ಸುಬ್ರಹ್ಮಣ್ಯನದಾಯಿತು. ಮನೆ ಪ್ರವೇಶಮಾಡಿದ ಕೂಡಲೇ ಒಂದು ದೊಡ್ಡ ಕೋಣೆ. ಅದೇ ಸುಬ್ರಹ್ಮಣ್ಯನ ಆಫೀಸ್ ರೂಂ ಆಯಿತು. ಅದರೆದುರಿಗೆ ವೆರಾಂಡ. ಒಳಗೆ ಪ್ರವೇಶಿಸಿದೊಡನೆಯೇ ದೊಡ್ಡ ಹಜಾರ, ಅತ್ತಿತ್ತ ಎರಡೆರಡು ರೂಮುಗಳು. ಆಫೀಸ್

ರೂಂ ಪಕ್ಕದಲ್ಲಿದ್ದ ಎರಡು ರೂಮುಗಳನ್ನೂ ಸುಬ್ರಹ್ಮಣ್ಯ ಸ್ವಂತ ಉಪ ಯೋಗಕ್ಕೆ ಇಟ್ಟುಕೊಂಡ. ಅವುಗಳಲ್ಲಿ ಒಂದು ಅವನ ಶಯ್ಯಾಗೃಹ ವಾಗಿತ್ತು; ಇನ್ನೊಂದು ಖಾಸಗಿ ಉಗ್ರಾಣವಾಗಿತ್ತು. ಕಬ್ಬಿಣದ ಪೆಟ್ಟಿಗೆ, ಒಡವೆಗಳು, ಮುಖ್ಯವಾದ ಕಾಗದ ಪತ್ರಗಳನ್ನಿಡುವುದಕ್ಕೆ ಆ ರೂಮು ವಿನಿಯೋಗವಾಯಿತು. ಹಜಾರದ ಬಲಭಾಗದಲ್ಲಿದ್ದ ರೂಮುಗಳಲ್ಲಿ ಒಂದು ಶಂಕರನಿಗೂ ಇನ್ನೊಂದು ಪಾರ್ವತಮ್ಮನವರಿಗೂ ಮೀಸಲಾ ಯಿತು. ಮನೆಗೆ ಬೇಕಾಗುವ ಎಲ್ಲ ಫರ್ನೀಚರುಗಳೂ ಮೈಸೂರು ಟೆಕ್ನಾಲಜಿಕಲ್ ಇನ್ಸಿಟ್ಯೂಟನಿಂದಲೇ ಬಂದುವು. ವಿದ್ಯುದ್ದೀಪ ಮನೆ ಯನ್ನೆಲ್ಲಾ ಬೆಳಗಿಸಿತು. ಶಂಕರನ ಕೋರಿಕೆಯಂತೆ ಸುಬ್ರಹ್ಮಣ್ಯ ಒಂದು ರೇಡಿಯೋ ಯಂತ್ರವನ್ನೂ ತಂದಿಟ್ಟ.

ಮನೆಯ ಅಚ್ಚುಗಟ್ಟು ನೋಡಿ ತೃಪ್ತನಾದ ಭೀಮಾಚಾರಿ,

"ಎಲ್ಲಾ ಸೊಗಸಾಯಿತು. ನೀನೊಂದು ಕಾರ್ ಕೊಂಡುಬಿಟ್ಟರೆ ಚೆನ್ನಾಗುತ್ತದೆ" ಎಂದು ಸೂಚಿಸಿದ.

ಅಷ್ಟು ದೂರ ಹೋಗಲು ಸುಬ್ರಹ್ಮಣ್ಯ ಧೈರ್ಯಮಾಡಲಿಲ್ಲ. ಪಾರ್ವತಮ್ಮನವರ ಮೌನ ಅವನ ಹೃದಯದಲ್ಲಿ ಭೀತಿಯನ್ನು ಹುಟ್ಟಿ ಸಿತ್ತು.

ಸುಬ್ರಹ್ಮಣ್ಯನ ಬೆಳಿಗ್ಗೆಯ ಕಾರ್ಯಕ್ರಮ ಸ್ವಲ್ಪ ಬದಲಾಯಿಸಿತು. ತಂದೆ ಬದುಕಿದ್ದಾಗ ಐದು ಗಂಟೆಗೆ ಏಳದಿದ್ದರೆ ಮನೆಯಲ್ಲಿ ರಾಮಾಯಣ ವಾಗಿಹೋಗುತ್ತಿತ್ತು. ಈಗ ತಂದೆಯ ಕಾಟವಾಗಲಿ ಭಯವಾಗಲಿ ಇರಲಿಲ್ಲ. ಎಂಟು ಗಂಟೆಗೆದ್ದು ಸುಬ್ರಹ್ಮಣ್ಯ ಮುಖ ತೊಳೆದು ಕಾಫಿ ಕುಡಿದು, ಸ್ವಲ್ಪ ಹೊತ್ತು ಕಳೆದ ಮೇಲೆ ಸ್ನಾನಮಾಡಿ ಉಪಾಹಾರ ಸ್ವೀಕ ರಿಸಿ, ಸುಮಾರು ಒಂಭತ್ತು ಗಂಟೆಯ ವೇಳೆಗೆ ಮನೆ ಬಿಡುತ್ತಿದ್ದ. ತೋಟದ ಕಡೆ ಸುತ್ತಾಡಿಕೊಂಡು ಬಂದು ಹನ್ನೆರಡರ ವೇಳೆಗೆ ಊಟ ಮಾಡಿ, ಸ್ವಲ್ಪ ಹೊತ್ತು ರೇಡಿಯೋ ತಿರುಗಿಸುತ್ತಿದ್ದು ಮಲಗುತ್ತಿದ್ದ. ಮೂರು ಗಂಟೆಗೆದ್ದು ಉಪಾಹಾರ ಸ್ವೀಕರಿಸಿ, ಪೇಟೆಯ ಕಡೆ ತಿರುಗಾಡಿ ಕೊಂಡೋ ಕಛೇರಿಯ ಕೆಲಸಗಳಿದ್ದರೆ ಮಾಡಿಕೊಂಡೋ ಸಂಜೆ ಆರರ ವೇಳೆಗೆ ಕ್ಲಬ್ ಸೇರುತ್ತಿದ್ದ. ರಾತ್ರಿ ಒಂಭತ್ತೂವರೆಗೆ ಮನೆಗೆ ಹಿಂದಿ ರುಗಿ ಊಟಮಾಡಿ ಮಲಗುತ್ತಿದ್ದ.

ಮನೆಯಲ್ಲಾಗಿದ್ದ ಬದಲಾವಣೆ, ಸುಬ್ರಹ್ಮಣ್ಯನ ಜೀವನಕ್ರಮದಲ್ಲಾಗಿದ್ದ ಮಾರ್ಪಾಟನ್ನು ಪಾರ್ವತಮ್ಮ ಸೂಕ್ಷ್ಮವಾಗಿ ಗಮನಿಸಿದ್ದರು. ಆದರೆ ಒಂದು ದಿನವೂ 'ಹೀಗೇಕೆ ಮಾಡುತ್ತಿರುವೆ' ಎಂದು ಕೇಳಲು ಮನಸ್ಸುಮಾಡಲಿಲ್ಲ.

ಪಾರ್ವತಮ್ಮನವರೇ ಅಡಿಗೆ ಮಾಡುತ್ತಿದ್ದರು; ಗೌರಿ ಅದನ್ನು ಗಂಡನಿಗೂ ಮೈದುನನಿಗೂ ಬಡಿಸುತ್ತಿದ್ದಳು. ಎರಡು ಗಂಟೆಗೋ ಮೂರು ಗಂಟೆಗೋ ಪಾರ್ವತಮ್ಮ ಒಂದು ತುತ್ತು ಉಂಡು, ನಿಂಗವ್ವನಿಗೆ ಬಡಿಸಿ, ಮುಸುರೆ ಪಾತ್ರೆಗಳನ್ನು ಹೊರಗೆ ಹಾಕುತ್ತಿದ್ದರು. ರಾತ್ರಿ ಅಡಿಗೆಯನ್ನು ಮಾತ್ರ ಗೌರಿಯೇ ನಿರ್ವಹಿಸುತ್ತಿದ್ದಳು.

ಅಡಿಗೆ ಮಾಡಿಟ್ಟು ಹೊರಬಂದು ತುಳಸೀಕಟ್ಟೆಯ ಬಳಿ ಯಾವುದೋ ಹಾಡು ಕುರುಕಿಕೊಳ್ಳುತ್ತಾ ಪಾರ್ವತಮ್ಮ ಬಿಸಿಲು ಕಾಯಲು ಕೂಡುತ್ತಿದ್ದರು. ನಿಂಗವ್ವ ಸ್ವಲ್ಪ ದೂರದಲ್ಲಿ ಕುಳಿತು ಹಚ್ಚಡ ಹೊಲಿದುಕೊಳ್ಳುತ್ತಿದ್ದಳು. ಒಂದೊಂದು ದಿನ ಅಕ್ಕಿಯನ್ನು ಆರಿಸುತ್ತ ಕೂಡುತ್ತಿದ್ದಳು.

ಅವರೂ ಹೆಚ್ಚು ಮಾತನಾಡುತ್ತಿರಲಿಲ್ಲ.

"ಬಿಸ್ಲು ಭೋ ಜೋರಾಗೈತ್ರವ್ವಾ."

"ಹೌದು—ಮಾಗಿ ಬಿಸಿಲಿದ್ದ ಹಾಗಿದೆ."

ಮಾತಿನ ಕುಣಿಕೆ ತಪ್ಪಿಹೋಗುತ್ತಿತ್ತು. ಹತ್ತು ಹದಿನೈದು ನಿಮಿಷಗಳ ಮೌನ.

"ಅಕ್ಕೀಲಿ ಎಷ್ಟು ಕಲ್ಲಿದೆಯೇ ನಿಂಗಿ."

"ಔದ್ರವ್ಮಣ್ಣಿ—ಅಪಾರ ಕಲ್ಲು ಬಂದೈತೆ."

ಮತ್ತೆ ಅದೇ ಮೌನ.

"ಸುಬ್ಬಪ್ಪ ತಂದಿರೋ ಪೆಟ್ಟಿಗೆ ಒಳಗಿಂದ ಸುವ್ವಿ ಪದಗೋಳೆಲ್ಲಾ ಬರ್ತೈತಲ್ರವ್ಮಣ್ಣಿ."

"ದೇಶ ದೇಶದ ಹಾಡುಗಳೆಲ್ಲಾ ಬರುತ್ತೆ ನಿಂಗಿ."

"ಎಂಗೆ ಬರ್ತೈತ್ರವ್ಮಣ್ಣಿ?"

"ನಂಗೇನವ್ವಾ ಗೊತ್ತು. ಏನೂ ಅರೀದ ಮುಕ್ಕ—ಶಂಕರನ್ನ ಕೇಳು, ಅವನು ಎಲ್ಲಾ ಹೇಳ್ತಾನೆ."

ಮತ್ತೆ ಮೌನ.

"ನೆನ್ನೆ ಸುಬ್ಬಪ್ಪ ಭಾಳ ಒತ್ಗಂಟೆ ಮನೀಕೆ ಬರ್ಲಿಲ್ರಮ್ಮಣ್ಣಿ."

"ನಿನ್ನೆ ನನಗೆ ಬೇಗ ನಿದ್ದೆ ಹತ್ತಿಬಿಟ್ಟಿತು ನಿಂಗಿ."

"ಸುಬ್ಬಪ್ಪನ ವಿಸ್ಯ ನಂಗ್ಯಾಕೋ ಬಯವಾಗ್ತೈತೆ."

"ಏಕೆ?"

"ಕರಿ ಭೀಮಾಚಾರಿ ನ್ಯಾಸ್ತ ಒಳ್ಳೇದಲ್ರಮ್ಮಣ್ಣಿ."

"ಭೀಮಾಚಾರಿ ಮಹಾತರಲೆ ಎಂದು ನಾನೂ ಕೇಳಿದ್ದೇನೆ."

"ಎಲ್ಲಾ ತಿಳ್ಕೊಂಡು ಸುಮ್ನೇ ರಾಮಾ ಕ್ರಿಸ್ನಾ ಅನ್ಕೊಂಡು ಕುಂತು ಬಿಟ್ರೆ ಆಯ್ತೈತಾ?"

"ಇನ್ನೇನು ಮಾಡಬೇಕು?"

"ಭೋ ಚಂದಾಯ್ತು. ಮನೆ ಯಜಮಾನವ್ವನೇ ಏನಾ ಮಾಡೋದು ಎಂತಾ ಕೇಳಿದ್ರೆ ಗೆಯ್ಯೋ ಎಣ್ಣು ಉತ್ತರ ಕೊಡೋಕಾಗ್ತೈತಾ?"

"ಈಗ ಮನೆಗೆ ಗೌರಿ ಯಜಮಾನಿ ನಿಂಗಿ."

"ಅದ್ಹೆಂಗಾಗ್ತೈತ್ರವ್ವಾ! ನಿಮ್ಮ ಜೀವಮಾನ ಇರೋಟಂಕಾ ನೀವೇ ಯಜಮಾನ್ತಿ. ಗೌರವ್ವ ಏಟಾದ್ರೂ ಮನೆ ಸೊಸೆ."

"ನಮ್ಮ ಕಾಲ ಮುಗಿದ ಮೇಲೆ ಚಿಕ್ಕವರ ಕೈಗೆ ಅಧಿಕಾರ ಕೊಟ್ಟು ನಾವು ತೆಪ್ಪಗಿರೋದೇ ಗಂಭೀರ ನಿಂಗಿ. ಇದರಿಂದ ವಿಶ್ವಾಸವೂ ಉಳಿಯುತ್ತೆ—ಚಿಕ್ಕವರಿಗೆ ತಮ್ಮ ಜವಾಬ್ದಾರಿಯೂ ಗೊತ್ತಾಗುತ್ತೆ."

"ಅವರು ತೆಪ್ಪಿ ನಡದ್ರೆ ತಿದ್ದಬ್ಯಾಡವೇನ್ರವ್ವಾ."

"ಮಕ್ಕಳು ತಪ್ಪು ಹೆಜ್ಜೆಹಾಕಿ, ಬಿದ್ದು ಎದ್ದೇ ನಡೆಯುವುದನ್ನು ಕಲಿಯುವುದು ನಿಂಗಿ."

"ಸುಬ್ಬಪ್ಪನ ಅಂದಾದುಂದಿ ದೊಡ್ರಾಯ್ತು ನೋಡಿದ್ರೆ...."

"ಅಂದಾದುಂದಿ ಏನು ಮಾಡಿದನೇ ನಿಂಗಿ?"

"ಇನ್ನೇನ್ರವ್ವಾ ಬೇಕು–ಮನೀಕೆ ಈ ಸಿಂಗಾರ ಬೇಕಾಗಿತ್ತು–ಗೌರವ್ವನ ಮೈತುಂಬ ಒಡವೆ ಮಾಡಿಸ್ಬಿದ್ರೆ ಲೋಕ ಅಳ್ತಿತ್ತಾ...."

"ನಿನ್ನ ಕಾಲ ನನ್ನ ಕಾಲ ಬೇರೆ, ಈ ಕಾಲ ಬೇರೆ ನಿಂಗಿ.

ಕಾಲಕ್ಕೆ ತಕ್ಕಂತೆ ನಾವು ಹೊಂದಿಕೊಳ್ಳಬೇಕು. ಹೊಂದಿಕೊಳ್ಳುವುದ ಕ್ಕಾಗದಿದ್ದರೆ ಸುಮ್ಮನೆ ಇದ್ದುಬಿಡಬೇಕು."

"ಬಿಡ್ರವ್ವಾ–ಯಾಸಾಟ ಮಾತಿದು. ನಿಮ್ಮ ಮ್ಯಾಕೂ ನಂಗೆ ಕ್ವಾಪ ಬತ್ತೈತೆ."

"ಏಕೆ ನಿಂಗಿ ?"

"ಹಿರಿಯೋರು ನೀವು–ಸುಬ್ಬಪ್ಪಂಗೆ ಒಂದು ಬುದ್ಧಿ ಮಾತು ಏಳಾ ಕಾಗಾಕಿಲ್ಲವೇನ್ರವ್ವಾ. ಆಯಪ್ಪ ಓದ್ದ ದಾರೀಗೇ ಬಿಡಾದಾ?"

ಎಂದು ಗೊಣಗಿಕೊಂಡಳು. ಪಾರ್ವತಮ್ಮನವರು ಮರು ಮಾತಾಡದೆ ಮಂತ್ರಪಠನ ಮಾಡಿಕೊಳ್ಳುತ್ತ ಕುಳಿತರು.

ಹೊರಗೆ ತೋರಿಸಿಕೊಳ್ಳದಿದ್ದರೂ ಪಾರ್ವತಮ್ಮನವರ ಮನಸ್ಸು ನಿಂಗಿಯ ವಿಚಾರವಾಣಿ ಕೇಳಿ ಅಲ್ಲಕಲ್ಲೋಲವಾಗಿತ್ತು. ಅವರು ಹಲವು ಬಾರಿ ಯೋಚಿಸಿದ್ದ ವಿಷಯವನ್ನೇ ನಿಂಗಿ ಪ್ರಸ್ತಾಪಿಸಿದ್ದಳು.

ಮನೆಯ ನಡೆವಳಿಕೆ, ಸುಬ್ರಹ್ಮಣ್ಯನ ಆಡಳಿತ ವಿಚಕ್ಷಣೆ ಎರಡೂ ಪಾರ್ವತಮ್ಮನವರ ಮನಸ್ಸಿಗೆ ಬಂದಿರಲಿಲ್ಲ. ಈಚೆಗಂತೂ ಸುಬ್ರಹ್ಮಣ್ಯ ಯಾವುದಕ್ಕೂ ತಾಯಿಯನ್ನು ಕೇಳುತ್ತಿರಲಿಲ್ಲ. ತಾಯಿಯ ಬಗ್ಗೆ ಅವ ನೆಂದೂ ಅವಿನಯದಿಂದ ನಡೆದುಕೊಳ್ಳದಿದ್ದರೂ, ಅವರಿಗೆ ಯಾವ ಅಧಿ ಕಾರವನ್ನೂ ಉಳಿಸಿರಲಿಲ್ಲ.

ಸುಬ್ರಹ್ಮಣ್ಯ ಮಾಡುತ್ತಿದ್ದ ಖರ್ಚಿಗಿಂತ ಹೆಚ್ಚಾಗಿ ಅವನ ಸಹ ವಾಸ ಪಾರ್ವತಮ್ಮನವರಿಗೆ ಹೆಚ್ಚು ಆತಂಕವನ್ನುಂಟುಮಾಡಿತ್ತು. 'ದಾಸರಿ, ಭೀಮಾಚಾರಿ, ಚಿನ್ನಪ್ಪ! ಎಂಥ ಬಳಗ ಇವನಿಗೆ ಗಂಟುಬಿತ್ತು!' ಎಂದುಕೊಳ್ಳುವರು. ದಾಸರಿ ವಿಷಯ ಊರಿಗೆಲ್ಲಾ ತಿಳಿದೇ ಇತ್ತು. ಚಿನ್ನಪ್ಪನ ಮನೆಯಲ್ಲಿ ನಡೆದಿದ್ದ ಪ್ರಕರಣವನ್ನು ಅವನ ಹೆಂಡತಿ ಸುಂದ ರಮ್ಮನೇ ಊರಿಗೆ ಡಂಗುರ ಹೊಡೆದು ಸಾರಿದ್ದಳು. ಭೀಮಾಚಾರಿ ಯಂತೂ ಸರಿಯೋ ಸರಿ–ದಗಲ್ಬಾಜಿ, ಕಂಡವರ ಮನೆ ಹಾಳುಮಾಡುವು ದರಲ್ಲಿ ನಿಸ್ಸೀಮ.

ಮಕ್ಕಳಿಗೆ ಯಾವ ಕೇಡೂ ಸಂಭವಿಸದಿರಲೆಂದು ಪಾರ್ವತಮ್ಮ ಅಹ ರ್ನಿಶಿ ದೇವರಲ್ಲಿ ಮೊರೆಯಿಡುತ್ತಿದ್ದರು. ತಾಯಿಯ ತಪಸ್ಸು ಮಕ್ಕಳ ರಕ್ಷಾಕವಚವಾಗಿತ್ತು. ರಕ್ಷೆ ಬೇಡವೆನ್ನುವವರನ್ನು ಅದು ರಕ್ಷಿಸಬಲ್ಲುದೇ?

# ೮

ಪರಮಾನಂದಯ್ಯ ಲೋಕ ಬಲ್ಲವನು. ತನ್ನ ಅನ್ನಕ್ಕೆ ತುಪ್ಪ ಹೇಗೆ ದೊರಕಿಸಬೇಕೆಂಬುದನ್ನು ಅವನು ಚೆನ್ನಾಗಿ ತಿಳಿದಿದ್ದ. ಅವನ ಮಾತಿನ ಮಾರ್ದವತೆ, ನಡತೆಯ ನಾಜೂಕು ಎಂಥವರನ್ನೂ ಬೆರಗು ಮಾಡುತ್ತಿತ್ತು. ಮಾತುಮಾತಿಗೊಮ್ಮೆ ನಿಜಗುಣರು, ಸರ್ಪಣ್ಣಸ್ವಾಮಿಗಳು, ಮುಪ್ಪಿನಾರ್ಯರು, ಮಹಾಲಿಂಗರಂಗನ ಪದ್ಯ ಹೇಳಿ ತನ್ನ ಪಾಂಡಿತ್ಯ, ಆಧ್ಯಾತ್ಮಿಕ ಸಂಪನ್ನತೆಯನ್ನು ಮೆರಸುವ ಕಲೆ ಅವನಿಗೆ ಚೆನ್ನಾಗಿ ಸಾಧಿಸುತ್ತಿತ್ತು. ಲೋಕದಲ್ಲಿ ತಾನು ಸರ್ವತಂತ್ರ ಸ್ವತಂತ್ರನೆಂದು ತೋರಿಸಿಕೊಳ್ಳುತ್ತಾ,

"ನಂಗೇನು ಸ್ವಾಮಿ ಆಗ್ಬೇಕು. ಕೈಯಲ್ಲಿ ಏಕನಾದ ಹಿಡಿದು, ಹೆಗಲ ಮೇಲೆ ಜೋಳಿಗೆ ಹಾಕಿಕೊಂಡು ಹೊರಟುಬಿಟ್ಟರೆ ಮೂರು ಹೊಟ್ಟೆಗಾಗುವಷ್ಟು ಭಿಕ್ಷ ಸಿಗುತ್ತದೆ" ಎಂದು ಹೇಳುತ್ತಿದ್ದ. ತನ್ನನ್ನು ಯಾರೂ, ಯಾವ ಕಾಲದಲ್ಲಿಯೂ ಋಣದಲ್ಲಿ ಇಡಲು ಸಾಧ್ಯವಿಲ್ಲವೆಂಬ ಭಾವನೆಯ ವಿಸ್ತಾರದಲ್ಲಿ ಪರಮಾನಂದಯ್ಯ ಬಹಳ ಎಚ್ಚರವಾಗಿರುತ್ತಿದ್ದ.

ಪರಮಾನಂದಯ್ಯನ ಬಗ್ಗೆ ಕೃತ್ರಿಮವೋ, ಸಹಜವೋ ಅಂತೂ ಎಲ್ಲರೂ ಗೌರವ ತೋರುತ್ತಿದ್ದರು. ಅವನನ್ನು ಕಾಸಿಗೆ ಕಡೆಯಾಗಿ ಕಾಣುತ್ತಿದ್ದವಳು ಜಯ ಒಬ್ಬಳೇ. ಗಂಡಹೆಂಡತಿಯಲ್ಲಿ ಪದೇಪದೇ ತಲೆದೋರುತ್ತಿದ್ದ ವಾಗ್ಯುದ್ಧ ಪರಿಹರಿಸುವ ಕೆಲಸ ಭೀಮಾಚಾರಿಯ ಪಾಲಿಗೆ ಬೀಳುತ್ತಿತ್ತು.

ತುಂಬ ನಿರೀಕ್ಷಣೆಯಿಟ್ಟುಕೊಂಡೇ ಜಯ ನಾಟಕದ ಕಂಪೆನಿ ಸೇರಿದ್ದಳು. ಕಾಲಾನುಕಾಲಕ್ಕೆ ತಾನೇ ಮಂಡಳಿಯ ಮಾಲೀಕಳಾಗುವ ಆಸೆಹೊತ್ತಿದ್ದಳು. ಆದರೆ ವಿಧಿ ಅವಳೊಂದಿಗೆ ಚೆಲ್ಲಾಟವಾಡಿ, ಅವಳನ್ನು ಪರಮಾನಂದಯ್ಯನ ಮಡಿಲಿಗೆ ಒಗೆದಿತ್ತು. ಪರಮಾನಂದಯ್ಯ ಉಪಾಯವಾಗಿ ಅವಳ ಪುಟ್ಟ ಗಂಟನ್ನು ಲಪ್ಟಾಯಿಸಿ, ಅದರ ಕಥೆ ಮುಗಿಸಿಯೂ ಬಿಟ್ಟಿದ್ದ. ಜಯಳ ಮನಸಿನಿಂದ ಈ ಕಿಸಿಸು ಹೋಗೇ

ಇರಲಿಲ್ಲ. ಪರಮಾನಂದಯ್ಯ ಕಾಸಿಗೆ ಕೊಸರಿದಾಗ ಜ್ವಾಲಾಮುಖಿ ಸಿಡಿಯುತ್ತಿತ್ತು.

ಜಯಳ ಎಲ್ಲ ಬೇಡಿಕೆಗಳಿಗೂ ಪರಮಾನಂದಯ್ಯ ಒಂದೇ 'ರಾಮ ಬಾಣ' ಪ್ರಯೋಗಿಸುತ್ತಿದ್ದ.

"ಸ್ವಲ್ಪ ತಡೀ. ಮಂಗಳನ್ನ ಮುಂದಿಟ್ಟುಕೊಂಡು ನಾಟಕದ ಕಂಪೆನಿ ಮಾಡುತ್ತೀನಿ. ವೈಕುಂಠದಿಂದ ಲಕ್ಷ್ಮೀನೇ ಎಳೆದುಕೊಂಡು ಬಂದು ನಿನ್ನ ಪಾದಸೇವೆಗೆ ಬಿಡುತ್ತೀನಿ."

"ನಿಮ್ಮ ಮುಖ ನೋಡಿ, ನಿಮ್ಮನ್ನು ಹಿಂಬಾಲಿಸುವವಳು, ವೈಕುಂಠದ ಲಕ್ಷ್ಮಿಯಲ್ಲ—ದರಿದ್ರಲಕ್ಷ್ಮಿ"

ಎಂದು ಜಯ ಸೋಟೆ ತಿವಿಯುತ್ತಿದ್ದಳು.

ಒಂದು ಶನಿವಾರ ದೇವಸ್ಥಾನಕ್ಕೆ ಹೋಗಿ ಚೌಡಮ್ಮನವರ ಜತೆ ಹಿಂತಿರುಗುತ್ತಿದ್ದ ಗೌರಿ, ಜಯಳ ಕಣ್ಣಿಗೆ ಬಿದ್ದಳು. ಗಂಡ ಹೊಸ ದಾಗಿ ಮಾಡಿಸಿಕೊಟ್ಟಿದ್ದ ಆಭರಣಗಳನ್ನು ಹೇರಿಕೊಂಡಿದ್ದ ಗೌರಿಯನ್ನು ನೋಡಿ ಜಯಳ ಹೊಟ್ಟೆಯಲ್ಲಿ ತಳಮಳವಾಯಿತು. ಮನೆಗೆ ಬಂದವಳೇ ಗಂಡನ ಮೇಲೆ ಹೆದೆಯೇರಿಸಿದಳು.

"ಪಾರ್ವತಮ್ಮನವರು ಹೇಗಿದ್ದರು ನೋಡಿ—ಅವರ ಸೊಸೆ ಹೇಗಿ ದ್ದಾಳೆ ನೋಡಿ. ಮೈತುಂಬ ಒಡವೆ ಧರಿಸಿಕೊಂಡು ರಾಜರಾಜೇಶ್ವರಿ ಇದ್ದ ಹಾಗಿದ್ದಾಳೆ. ನಾನೂ, ಮಂಗಳ ಬಿಚ್ಚೋಲೆ ಗೌರಮ್ಮಗಳ ಹಾಗಿ ದ್ದರೆ ನೋಡಿಕೊಂಡು ಸುಮ್ಮನಿರೋರು ನೀವೆಂಥಾ ಗಂಡಸರ್ರೀ."

"ಗೌರಮ್ಮನ ಮಾವ ಮನೆಯಲ್ಲಿ ಮೂಟೆಗಟ್ಟಳೆ ಹಣ ತುಂಬಿಟ್ಟಿ ದ್ದಾನೆ. ನಿಮ್ಮ ಮಾವ ಏನಿಟ್ಟಿದ್ದಾನೆ?"

"ಇಟ್ಟಿದ್ದಾನಲ್ಲಾ—ಒಡಕಲು ಏಕನಾದ, ಮುರುಕಲು ಹಾರ್ಮೋ ನಿಯಂ, ಹರಕಲು ಮೃದಂಗ."

"ಸ್ವಲ್ಪ ತಡ್ಕೋಳೇ—ಅವಸರಪಟ್ಟರೆ ಏನಾಗುತ್ತೆ? ದೇವರು ಕಣ್ಣುಬಿಟ್ಟು ನೋಡೋ ತನಕಾ ನಾವೆಷ್ಟು ಎಗರಲಾಡಿದರೂ ಏನೂ ಆಗಾಕಿಲ್ಲ."

"ನಿಮ್ಮ ದೇವರು ಕಣ್ಣುಬಿಟ್ಟು ನೋಡೋ ಹೊತ್ತಿಗೆ ನಾನು ಕಣ್ಣು ಮುಚ್ಚಿಕೊಂಡಿರುತ್ತೇನೆ."

ಎಂದು ಬಿರುಸಾಗಿಯೇ ನುಡಿದಳು.

ಜಯಳ ಕಾಟ ಹೆಚ್ಚುತ್ತ ಬರಲು ಪರಮಾನಂದಯ್ಯ ಒಂದು ದಿನ ಭೀಮಾಚಾರಿಯಲ್ಲಿ ಆಪ್ತಾಲೋಚನೆ ಮಾಡಿದ. ಭೀಮಾಚಾರಿ ಯೋಚನೆ ಮಾಡುತ್ತಾ 'ಆಗಲಿ. ಸ್ವಲ್ಪ ಸುಮ್ಮನೆ ಇರು. ಈ ವಿಷಯ ಯಾರಲ್ಲಿಯೂ ಬಾಯಿಬಿಡಬೇಡ' ಎಂದು ಮುನ್ನೆಚ್ಚರಿಕೆ ಇತ್ತ.

ಒಂದು ದಿನ ಶಾಂತರುದ್ರಪ್ಪ ಕ್ಲಬ್ಬಿಗೆ ಬರಲಿಲ್ಲ.

"ಎಲ್ಲಿಗೆ ಹೋಗಿದ್ದಾನೆ?" ಎಂದು ಸುಬ್ರಹ್ಮಣ್ಯ ಕೇಳಲು ಭೀಮಾಚಾರಿ "ಹೊಸಪೇಟೆಗೆ ಹೋಗಿದ್ದಾನಂತಪ್ಪ—ಹೆಣ್ಣು ನೋಡಿಕೊಂಡು ಬರುವುದಕ್ಕಂತೆ" ಎಂದು ಉತ್ತರಿಸಿ ಪರಮಾನಂದಯ್ಯನ ಕಡೆ ತಿರುಗಿ,

"ನಿನ್ನ ಪ್ರಯಾಣ ಎಂದೋ ಪರಮಾನಂದ?" ಎಂದು ಕೇಳಿದ.

"ಹೋಗಬೇಕಪ್ಪಾ—ನಾಳೆಯೋ ನಾಡಿದ್ದೋ ಹೊರಡಬೇಕು. ಕಾಗದದ ಮೇಲೆ ಕಾಗದ ಬರುತ್ತಾ ಇದೆ."

"ಎಲ್ಲಿಗೆ ಪ್ರಯಾಣ ಪರಮಾನಂದಯ್ಯ?" ಎಂದು ಕುತೂಹಲ ಗ್ರಸ್ತನಾಗಿ ಸುಬ್ರಹ್ಮಣ್ಯ ಕೇಳಿದ.

"ಮಗಳಿಗೆ ವರ ಹುಡುಕುತ್ತಿದ್ದಾನೆ ಸುಬ್ಬಣ್ಣ. ಒಳ್ಳೆಯ ಐನಾತಿ ವರ ಆರಿಸಿದ್ದಾನೆ. ರಾಮಸಾಗರದ ಗಿಡ್ಡೇಗೌಡರ ಮಗ–ಎರಡು ಸಾವಿರ ರೂಪಾಯಿ ಕಂದಾಯ ಕೊಡುವ ಕುಳ."

"ನಿಶ್ಚಯವಾಗಿದೆಯೋ?"

"ಇಲ್ಲ—ಅದಕ್ಕೇ ಹೋಗಬೇಕಾಗಿದೆ."

ಸುಬ್ರಹ್ಮಣ್ಯನ ಮಾತು, ಆಟ ಎರಡೂ ನಿಂತುಹೋಯಿತು. ಇಸ್ಪೇಟಿನಲ್ಲಿ ಏಳು ರೂಪಾಯಿ ಸೋತು ಪೆಚ್ಚುಮೋರೆ ಹಾಕಿಕೊಂಡು ಮನೆ ಸೇರಿದ

ಮಾರನೆಯ ದಿನ ಮಧ್ಯಾಹ್ನಾನಂತರ ಸುಬ್ರಹ್ಮಣ್ಯ ಮನೆ ಬಿಟ್ಟವನು ಆಕಸ್ಮಾತ್ತಾಗಿ ಭೀಮಾಚಾರಿಯನ್ನು ಸಂಧಿಸಿದಂತೆ ಮಾಡಿ, ಅವನನ್ನು ಜತೆಯಲ್ಲಿ ಕರೆದುಕೊಂಡು ತನ್ನ ತೋಟದ ಕಡೆ ಹೋದ.

ಬಹಳ ಹೊತ್ತು ಮಾತು ಲೋಕಾಭಿರಾಮವಾಗಿ ಸಾಗಿತು. ಏನೋ ಹೇಳುವುದಕ್ಕೆ ಹವಣಿಸುತ್ತ ಸುಬ್ರಹ್ಮಣ್ಯ ತೊಂಚಾವಂಚ ಪಡುತ್ತಿರುವುದನ್ನು ಕಂಡುಕೊಂಡ ಭೀಮಾಚಾರಿ ಮೆಲ್ಲನೆ,

"ಏಕೆ—ಮೈಯಲ್ಲಿ ಚೆನ್ನಾಗಿಲ್ಲವೇ ಸುಬ್ಬಣ್ಣ?" ಎಂದು ಕೇಳಿದ.

"ಚೆನ್ನಾಗಿಲ್ಲದೆ ಏನು?"

"ಏನೋ ಚಿಂತೆ ಮಾಡುತ್ತಿದ್ದೀ?"

"ಇಲ್ಲವಲ್ಲಾ!"

"ಇರಲಿ ಹೇಳಯ್ಯಾ—ನನ್ನ ಹತ್ತಿರ ಅದೆಂಥಾ ಸಂಕೋಚ. ನಿನ್ನ ಕೆಲಸ—ಯಾವುದೇ ಆಗಲಿ ಸಾಧಿಸಿಕೊಡುವುದಕ್ಕೆ ನಾನಿರುವಾಗ ನೀನು ಯೋಚನೆಯೇಕೆ ಮಾಡಬೇಕು."

"ಹೇಳುತ್ತೇನೆ ಭೀಮಣ್ಣಾ–ಆದರೆ ವಿಷಯ ನಮ್ಮಿಬ್ಬರಲ್ಲೇ ಇರಲಿ."

"ನನ್ನ ವಿಷಯ ನಿನಗೆ ಗೊತ್ತಿದೆಯಷ್ಟೆ!"

"ಗೊತ್ತಿಲ್ಲದೆ ಉಂಟೇ?"

"ಸರಿ-ಹೇಳು."

"ಪರಮಾನಂದಯ್ಯ ಮಗಳ ಮದುವೆಗೆ ಓಡಿಯಾಡುತ್ತಿರುವುದು ನಿಜವೇ ?"

"ನಿಜ ಕಣಯ್ಯಾ—ದೊಡ್ಡವರ ಸಂಬಂಧ, ಮದುವೆ ಚೆನ್ನಾಗಿ ಮಾಡಬೇಕಾಗುತ್ತದೆ. ಎಲ್ಲಿಯಾದರೂ ನಾಲ್ಕು ಸಾವಿರ ರೂಪಾಯಿ ಸಾಲ ಕೊಡಿಸು ಎಂತಾ ನನಗೆ ಗಂಟುಬಿದ್ದಿದ್ದಾನೆ."

"ನಾಟಕದ ಕಂಪೆನಿ ಮಾಡುತ್ತೇನೆ ಎನ್ನುತ್ತಿದ್ದ."

ಹೌದು. ಮದುವೆ ಸಾಧ್ಯವಿಲ್ಲವೆಂದುಕೊಂಡು ಹಾಗೆ ಯೋಚನೆ ಮಾಡುತ್ತಿದ್ದ. ಈಗ ಅಣಿಯಾದ ಸಂಬಂಧ ಸಿಕ್ಕುವಾಗ, ಅದನ್ನು ಕಳೆದುಕೊಳ್ಳುವುದಕ್ಕೆ ಅವನೇನು ದಡ್ಡನೇ ? ಈಗವನು ಕಂಪೆನಿ ಮಾಡುವುದಕ್ಕೆ ಸಿದ್ಧವಾದರೂ ಹಣ ಕೊಡುವವರು ಯಾರು ?"

"ಹಣದ್ದು ಹೇಗಾದರೂ ಮಾಡಬಹುದು. ಅವನು ಕಂಪೆನಿ ಮಾಡುವುದೊಂದು ಇತ್ಯರ್ಥವಾಗಬೇಕಲ್ಲ."

"ನೀನು ಕೊಡ್ತೀಯೇನು ಹೇಳು—ನಾನು ಕುದುರಿಸುತ್ತೇನೆ."

"ಯಾವ ಆಧಾರದ ಮೇಲೆ ?"

ಭೀಮಾಚಾರಿ ನಸುನಗುತ್ತಾ,

"ಸ್ಪಷ್ಟವಾಗಿ ಹೇಳಲೋ?—ಮಂಗಳನ ಆಧಾರದ ಮೇಲೆ."

ತನ್ನ ಅಸ್ಥಿರತೆಯ ಮೇಲೆ ಮುಸುಕು ಹಾಕಲು ಸುಬ್ರಹ್ಮಣ್ಯನೂ ನಕ್ಕ.

"ನಿನಗೆ ಮಂಗಳನ ಮೇಲೆ ಮನಸ್ಸಾಗಿದೆ. ಮದುವೆ ಸುದ್ದಿ ಕೇಳಿದ ಮೇಲಂತೂ ತಳಮಳವಾಗಿದೆ. ಹೌದೋ ಅಲ್ಲವೋ ?"

"ನಿನಗೆ ಹೇಗಯ್ಯಾ ಗೊತ್ತಾಯಿತು."

"ಕ್ಲಬ್ಬಿಗೆ ನೀನು ಏಳು ರೂಪಾಯಿ ಒಪ್ಪಿಸಿದಾಗಲೇ ತಿಳಿದು ಕೊಂಡೆ."

"ಅಸಾಧ್ಯನಪ್ಪಾ ನೀನು."

"ದಾಸರಿ ಹತ್ತಿರ ಮಾತಾಡಲೇನು ?"

"ಮಾತಾಡು."

"ಬಹಳ ಖರ್ಚಿನ ಬಾಬತ್ತಾಗುತ್ತೆ ಸುಬ್ಬಣ್ಣ. ಜಯನಿಗೆ, ಮಂಗಳನಿಗೆ ಒಡವೆ ಮಾಡಿಸಬೇಕಾಗುತ್ತದೆ."

"ಆಗಬಹುದು."

"ಮನೆಯಲ್ಲಿ ತಿಳಿದರೆ..........."?

"ತಿಳಿಯದ ಹಾಗೆ ನೋಡಿಕೊಳ್ಳಬೇಕು. ಕ್ಲಬ್ಬಿಗೆ ಬರುವ ಹಾಗೆ ಬಂದು ಹೋಗುತ್ತೇನೆ."

"ಹೆಂಗಸರ ಬಾಯಿ ಸುಮ್ಮನಿರುತ್ತದೆಯೇನಯ್ಯಾ ?"

"ಸದ್ಯಕ್ಕೆ ತಿಳಿಯದಿದ್ದರೆ ಸಾಕು. ನಿಧಾನವಾಗಿ ತಿಳಿದರೆ ತಿಳಿದು ಕೊಂಡು ಹೋಗಲಿ. ಅಮ್ಮನ ಮನಸ್ಸಿಗೆ ವ್ಯಥೆಯುಂಟುಮಾಡಲು ನನಗಿಚ್ಛೆಯಿಲ್ಲ."

"ಮಾತೃಭಕ್ತಿಯಾದರೂ ನಿನ್ನಲ್ಲಿದೆಯಲ್ಲಾ !"

"ಅವಳು ತುಂಬ ಕಷ್ಟ ಸೋಸಿದ್ದಾಳೆ ಭೀಮಣ್ಣ."

"ದಾಸರಿ ಹತ್ತಿರ ನಾನು ಮಾತಾಡುತ್ತೇನೆ. ನೀನು, ಆಗಾಗ್ಗೆ ಅವರ ಮನೆಗೆ ಹೋಗಿ ಜಯನ ವಿಶ್ವಾಸ ಸಂಪಾದಿಸಿಕೋ."

"ನಿನ್ನನ್ನೇ ನಂಬಿದ್ದೀನಿ ಭೀಮಣ್ಣ."

ಭೀಮಾಚಾರಿ ನಗುತ್ತ ಮನಸ್ಸಿನಲ್ಲಿಯೇ 'ನನ್ನನ್ನು ನಂಬಿದವನು ಯಾವನೂ ಉದ್ಧಾರವಾಗಿಲ್ಲ' ಎಂದುಕೊಂಡ.

೯

ಗೌರಿ ಗಂಡನ ಆಜ್ಞೆಯನ್ನು ಅಕ್ಷರಶಃ ಪಾಲಿಸುತ್ತಿದ್ದಳು.

"ಊರಿನವರಿಗೂ ನಮ್ಮ ಮನೆಗೂ ಬದ್ಧದ್ವೇಷ ಬಂದುಬಿಟ್ಟಿದೆ. ಅದನ್ನು ಹೋಗಲಾಡಿಸದಿದ್ದರೆ ನಾವು ಈ ಊರಿನಲ್ಲಿ ಬಾಳುವೆ ನಡಸುವುದೇ ಕಷ್ಟ. ಊರಿನ ಹೆಣ್ಣು ಮಕ್ಕಳ ವಿಶ್ವಾಸ ಸಂಪಾದಿಸು. ಅವರ ಮನೆಗೆ ಹೋಗಿ ಬಾ. ಅವರನ್ನು ನಮ್ಮ ಮನೆಗೆ ಕರೆದು ಉಪಚಾರ ಮಾಡು."

ಎಂದು ಸುಬ್ರಹ್ಮಣ್ಯ ಗೌರಿಗೆ ಸಂದೇಶವಿತ್ತಿದ್ದ. ಗೌರಿ ಜೋಯಿಸರ ಹೆಂಡತಿ ಮೂಲಕ ಎಲ್ಲರ ಪರಿಚಯ ಮಾಡಿಕೊಂಡಳು. ಮನೆಯ ಹಿತ್ತಲಲ್ಲಿ ಬೆಳೆಯುತ್ತಿದ್ದ ಹೂಗಳನ್ನಾಯ್ದು ಕುಚ್ಚು ಕಟ್ಟಿ ನಾಲ್ಕಾರು ಜನ ಹೆಣ್ಣು ಮಕ್ಕಳಿಗೆ ಕಳಿಸಿಕೊಡುತ್ತಿದ್ದಳು. ಶುಕ್ರವಾರದ ಪೂಜೆ ಹೂಡಿಕೊಂಡು, ಊರಿನ ಸುವಾಸಿನಿಯರನ್ನೆಲ್ಲಾ ಮನೆಗೆ ಬರಮಾಡಿಕೊಂಡು ಅವರಿಗೆ ಕೋಸುಂಬರಿ, ಸೀಕರಣೆ, ತೆಂಗಿನಕಾಯಿ ಕೊಟ್ಟು ಕಳಿಸುತ್ತಿದ್ದಳು. ಸಂಪತ್ತು ಶುಕ್ರವಾರ, ವರಮಹಾಲಕ್ಷ್ಮಿ, ನವರಾತ್ರಿ ಹಬ್ಬಗಳಲ್ಲಿ ಊರಿನ ಹತ್ತಾರು ಹೆಣ್ಣುಮಕ್ಕಳಿಗೆ ಕುಪ್ಪಸದ ಕಣ ಕೊಡುತ್ತಿದ್ದಳು.

ಊರಿನ ಹೆಣ್ಣುಮಕ್ಕಳ ಬಾಯಲ್ಲಿ ಗೌರಿಯ ಮಾತೇ ಮಾತು.

"ಎಂಜಲು ಕೈಯಲ್ಲಿ ಕಾಗೆ ಹೊಡೆಯದವರ ಮನೆ ಸೇರಿದರೂ ಗೌರಿ ಒಳ್ಳೆಯವಳಮ್ಮ–ಉದಾರಿ–ಒಳ್ಳೆಯ ತಾಯಿ ಹೆತ್ತ ಮಗಳು"

ಎಂದು ಊರಿನ ಹೆಣ್ಣುಮಕ್ಕಳು ಅವಳ ಗುಣಗಾನ ಮಾಡತೊಡಗಿದ್ದರು. ಇದರಿಂದ ಸುಬ್ರಹ್ಮಣ್ಯನ ಘನತೆಗೂ ಕುಂದಣವಿಟ್ಟಂತಾಗಿತ್ತು. ಅವನು ಊರೊಳಗೆ ಬಂದರೆ ಜನ 'ನಮಸ್ಕಾರ ಸ್ವಾಮಿ' ಎನ್ನುತ್ತಿದ್ದರು.

ಊರಿನಲ್ಲಾದ ಮಾರ್ಪಾಟು ನೋಡಿ ಪಾರ್ವತಮ್ಮನವರ ಮನಸ್ಸಿಗೆ ಹಿಡಿಸಲಾರದಷ್ಟು ಸಂತೋಷವಾಯಿತು.

"ಗೌರಮ್ಮ ನಿಜವಾಗಿಯೂ ನಮ್ಮನೆ ಗೌರಮ್ಮ"

ಎಂದು ನಿಂಗವ್ವನ ಮುಂದೆ ಹಾಡಿ ಹೊಗಳುತ್ತಿದ್ದರು.

ಒಂದು ದಿನ ಗೌರಿ ಮನೆಯಲ್ಲಿ ಕಟ್ಟಿದ ಹೂವಿನ ಕುಚ್ಚು ಹಿಡಿದು ಕೊಂಡು ಹೆರಳು ಹಾಕಿಸಿಕೊಂಡು ಬರುವುದಕ್ಕೆ ಜೋಯಿಸರ ಮನೆಗೆ ಹೋದಳು. ಜೋಯಿಸರ ಹೆಂಡತಿಯ ಜತೆ ನಾಲ್ಕಾರು ಊರಿನ ಮಹಿಳೆಯರು ಹರಟೆಕೊಚ್ಚುತ್ತ ಕುಳಿತಿದ್ದರು. ಚೌಡಮ್ಮನವರು ಗೌರಿಯನ್ನು ತಮ್ಮ ಮುಂದೆ ಕೂಡಿಸಿಕೊಂಡು ತಲೆ ಬಾಚತೊಡಗಿದ್ದರು. ಅಂಗಡಿ ದಾಸಪ್ಪನ ಹೆಂಡತಿ ಕಮಲಮ್ಮ ರಾಗ ಎಳೆದುಕೊಂಡು,

"ದಾಸರಿ ಮಗಳಿಗೆ ಮದುವೆಯಂತೆ, ನಿಜವೇನ್ರೀ ಚೌಡಮ್ಮನವರೇ" ಎಂದು ಕೇಳಿದರು.

"ನನಗೆ ಗೊತ್ತಿಲ್ಲಮ್ಮ."

"ನಿಮ್ಮ ಯಜಮಾನರು ಏನೂ ಹೇಳಲಿಲ್ಲವೇ ?"

"ಅವರಿಗೂ ಗೊತ್ತಿರುವ ಮಟ್ಟಿಗಿಲ್ಲ. ವರ ಯಾರಂತೆ ?"

"ರಾಮಸಾಗರದ ಗಿಡ್ಡೇಗೌಡರ ಮಗನಂತೆ !"

"ಭಾರಿ ಕುಳ."

"ದಾಸರಿ ಮಗಳನ್ನು ಯಾರು ಮದುವೆಯಾಗುತ್ತಾರ್ರೀ. ಗಿಡ್ಡೇ ಗೌಡರ ಮಗನಿಗೆ ಈ ನಾಟಕದೋನ ಮಗಳು ಬಿಟ್ಟರೆ ಯಾರೂ ಗತಿ ಯಿಲ್ಲವೆ ?"

ಎಂದು ತಾಯಮ್ಮ ಸವಾಲು ಹಾಕಿದಳು.

"ಮದುವೆ ಎಲ್ಲಿ ಬಂತ್ರೀ—ಕೂಡಿಕೇನೋ ಪಾಡಿಕೇನೋ ಇರ ಬಹುದು"

ಎಂದು ಅಮಲ್ದಾರ್ರ ಸೊಸೆ ನರ್ಮದಾ ಸೂಚಿಸಿದಳು.

"ಕಾಲ ಹೇಗಾಯ್ತು ನೋಡಿದಿರಾ. ಗಂಡಿಗೊಂದು ಹೆಣ್ಣಿದ್ದ ರಾಯಿತು. ಜಾತಿ, ಕುಲ, ಗೋತ್ರವೆಲ್ಲಾ ಯಾರಿಗೆ ಬೇಕು."

ಜೋಯಿಸರ ಹೆಂಡತಿ ನಿಟ್ಟುಸಿರು ಬಿಡುತ್ತಾ ಗೌರಿಯನ್ನು ತಿರು ಗಿಸಿಕೊಂಡು, ಅವಳ ಮುಂದಲೆ ತಿದ್ದಿ, ಹಣೆಗೆ ಕುಂಕುಮವಿಟ್ಟರು.

ಗೌರಿ ಎಲ್ಲರಿಗೂ ಹೂವು ಹಂಚಿ ತಾನೂ ಮುಡಿದುಕೊಂಡಳು.

ಕಮಲಮ್ಮ ಹೂ ಮುಡಿದುಕೊಳ್ಳುತ್ತಾ,

"ನಮಗೆಲ್ಲಾ ಹೋಳಿಗೆಯೂಟ ಯಾವಾಗ ಹಾಕುತ್ತೀ ಗೌರಮ್ಮ"

ಎಂದು ಕೇಳಿದಳು.

"ಯಾವಾಗ ಬೇಕಾದ್ರೂ ಆಗಲಿ—ನಾಳೆಯೇ ಆಗಲಿ."

"ಹಾಗೆಲ್ಲಾ ಹಾಕಿದ್ರೆ ನಾವು ಬರಲ್ಲಮ್ಮ. ಗಂಡು ಮಗನ್ನ ಎತ್ತಿಕೊಂಡು ಹೋಳಿಗೆ ಹಾಕಬೇಕು."

ಗೌರಮ್ಮ ನಸು ನಾಚಿ ಕತ್ತು ತಗ್ಗಿಸಿದಳು, ಕಮಲಮ್ಮನ ಮಾತು ಕೇಳಿ ಅವಳ ಮನಸ್ಸಿಗೆ ಅಪಾರ ಆನಂದವೂ ಆಗಿತ್ತು. ಸೂಕ್ಷ್ಮ ವೇದನೆಯೂ ಆಗಿತ್ತು.

"ಯೋಚನೆ ಮಾಡಬೇಡ ಗೌರೂ—ಭಕ್ತಿಯಿಂದ ಲಕ್ಷ್ಮೀ ಪೂಜೆ ಮಾಡುತ್ತಾ ಇದ್ದೀ. ಲಕ್ಷ್ಮೀಪತಿ ಬೇಗ ಅನುಗ್ರಹಿಸುತ್ತಾನೆ."

ಎಂದು ಜೋಯಿಸರ ಹೆಂಡತಿ ಶುಭ ನುಡಿದರು.

ಗೌರಿ ಹೋಗುವುದನ್ನೇ ಕಾದಿದ್ದ ಕಮಲಮ್ಮ ಮೆಲ್ಲನೆ ಚೌಡಮ್ಮನವರ ಬಳಿ ತೆವಳಿಕೊಂಡು,

"ಸುದ್ದಿ ಕೇಳಿದಿರಾ ಚೌಡತ್ತೆ!" ಎಂದಳು.

"ಏನು ಸುದ್ದಿಯಮ್ಮ! ಸುದ್ದಿ ಅಂದರೆ ಭಯವಾಗತ್ತೆ!"

"ಭಯವಾಗೊ ಅಂಥಾದ್ದೇ, ಗೌರಿ ಗಂಡ ಸುಬ್ರಹ್ಮಣ್ಯ ದಾಸರಿ ಮನೆಗೆ ತುಂಬ ತುಕ್ಕುತ್ತಾನಂತೆ!"

"ನಿನಗೆ ಯಾರು ಹೇಳಿದರು ಕಮಲಮ್ಮ."

"ಚಿನ್ನಪ್ಪಾಚಾರಿ ಹೆಂಡತಿ ಸುಂದರಮ್ಮ."

"ಗೌರಮ್ಮನ ಹಾಗಿರೋ ಹೆಂಡತಿ ಬಿಟ್ಟು ನಾಯಿ ಮುಟ್ಟಿದ ಮಡಕೆ ಬಯಸತ್ತೆ ಮುಕ್ಕ."

"ಗೌರೀಗೆ ಇದೊಂದೂ ಗೊತ್ತಿಲ್ಲಾಂತೀನಿ."

"ಎಳೇ ಬಸುರಿ. ಅವಳ ಕಿವೀಗೆ ಈ ಹಾಳು ಸುದ್ದಿ ಹಾಕಿ ಅವಳ ಕಣ್ಣಲ್ಲಿ ಯಾಕೆ ನೀರು ತರಿಸುತ್ತೀ ಕಮಲಮ್ಮ."

"ಅಂಥಾ ಪಾಪ ನಾನು ಯಾಕೆ ಕಟ್ಟಿಕೊಳ್ಳಲಮ್ಮ. ಯಾರು ಎತ್ತಲಾಗಾದರೂ ಹೋಗಲಿ—ನನಗೇಕೆ?"

ಜೋಯಿಸರ ಹೆಂಡತಿ ಕಮಲಮ್ಮನ ಆಶ್ವಾಸನ ನಂಬದಿದ್ದರೂ ನಂಬಿದಂತೆ ತೋರಿಸಿಕೊಂಡರು.

ಒಂದೆರಡು ವಾರ ಕಳೆದ ಮೇಲೆ ಜೋಯಿಸರೇ ಈ ಸುದ್ದಿ ತಂದು ಹೆಂಡತಿಗೆ ಹೇಳಿದರು. ಚೌಡಮ್ಮನವರು ಚಕಿತರಾಗಿ,

"ಅವತ್ತೇ ಕಮಲಮ್ಮ ಈ ವಿಷಯ ಹೇಳಿದಳೊಂದ್ರೆ—ನಾನು ನಂಬಲಿಲ್ಲ."

"ನಾನೂ ನಂಬಲಿಲ್ಲ—ಇನ್ನೂ ನಂಬುತ್ತಿಲ್ಲ. ಸುಬ್ಬೂ ಒಳ್ಳೆಯ ಹುಡುಗ. ಅವನೆಂದಿಗೂ ಇಂಥ ಹೀನ ಕೆಲಸಕ್ಕೆ ಕೈಹಾಕುವುದಿಲ್ಲ ಎನ್ನುವ ನಂಬಿಕೆ ನನಗಿದೆ. ಆದರೆ ಅವನು ದಾಸರಿ ಮನೆಗೆ ಇಸ್ಪೇಟು ಆಡುವುದಕ್ಕೆ ಹೋಗುತ್ತಾನೆಂಬುದಂತೂ ನಿಜ. ಭೀಮಾಚಾರಿ, ಚಿನ್ನಪ್ಪ ಶಾಂತರುದ್ರ ಎಲ್ಲರೂ ಸೇರುತ್ತಾರಂತೆ."

"ಭೀಮಾಚಾರಿ ಇದ್ದ ಕಡೆ ಇಂಥ ಕೆಲಸಗಳು ಆಗುವುದರಲ್ಲಿ ಸಂಶಯವೇ ಇಲ್ಲ. ಜಾನಕಿ ಕೊಲೆಯನ್ನೇ ಸುಳ್ಳು ಎನಿಸಿಬಿಟ್ಟ. ಈಗ ಸುಬ್ರಹ್ಮಣ್ಯನ ಆಹುತಿ ತೆಗೆದುಕೊಳ್ಳುವುದಕ್ಕೆ ಹೊರಟಿದ್ದಾನೇನೋ?"

"ಹೋಗಲಿ ಸುಮ್ಮನಿರು, ನಮಗೇಕೆ ಇವೆಲ್ಲಾ."

"ಇದೇನೊಂದ್ರೆ—ತಿಳಿದವರು ನೀವೇ ಹೀಗೆ ಹೇಳಿದರೆ ಹೇಗೆ? ಗೌರಿ ತಲೆಯ ಮೇಲೆ ಕಲ್ಲು ಬೀಳುವುದನ್ನು ನೋಡುತ್ತ ಕುಳಿತುಕೊಳ್ಳುವುದು ಯಾವ ನ್ಯಾಯ. ನೀವು ಸಮಯ ನೋಡಿ ಸುಬ್ರಹ್ಮಣ್ಯನಿಗೆ ವಿವೇಕ ಹೇಳಿ. ನಾನೂ ಪಾರ್ವತಮ್ಮನವರನ್ನು ಕಂಡು ಒಂದು ಮಾತು ಹೇಳುತ್ತೇನೆ."

"ದುಡುಕಬೇಡ ತಡೀ—ಯೋಚಿಸೋಣ"

ಎಂದು ಜೋಯಿಸರು ಸಮಾಧಾನ ಹೇಳಿದರು.

# ೧೦

ಸುಬ್ರಹ್ಮಣ್ಯ ಭೀಮಾಚಾರಿಯ ಸಲಹೆಯನ್ನು ಗುರುವಾಜ್ಞೆ ಎಂದು ಭಾವಿಸಿಕೊಂಡು ಪಾಲಿಸ ತೊಡಗಿದ. ಸಾಮಾನ್ಯವಾಗಿ ದಾಸರಿ ನಾಲ್ಕು ಗಂಟೆಯ ವೇಳೆಗೆ ಮನೆಯಲ್ಲಿರುತ್ತಿರಲಿಲ್ಲ. ಸ್ವಲ್ಪ ಹೊತ್ತು ಬಯಲು ಕಡೆ ಸುತ್ತಾಡಿಕೊಂಡು ಬಂದು ಇಸ್ಪೇಟಿಗೆ ಕೂಡುವುದು ಅವನ ವಾಡಿಕೆಯಾಗಿತ್ತು. ದಾಸರಿ ಮನೆಯಲ್ಲಿಲ್ಲದ ವೇಳೆಯನ್ನೇ ಸಾಧಿಸಿ ಸುಬ್ರಹ್ಮಣ್ಯ ಒಂದು ದಿನ ಅವನ ಮನೆಗೆ ಹೋದ.

"ಬನ್ರಣ್ಣ. ಕೂತುಕೊಳ್ಳಿ—ಬಯಲು ಕಡೆ ಹೋಗವ್ರೆ—ಈಗ ಬರ್‍ತಾರೆ"

ಎಂದು ಜಯಮ್ಮ ಸ್ವಾಗತ ಬಯಸಿದಳು. ಸುಬ್ರಹ್ಮಣ್ಯ ಕುಳಿತುಕೊಂಡು ಆ ಮಾತು ಈ ಮಾತು ಆಡುತ್ತಾ ಕೊನೆಗೆ,

"ಮಂಗಳೆ ಮದುವೆ ಗೊತ್ತಾಗಿದೆಯಂತೆ ನಿಜವೇ ಜಯಮ್ಮ?"

ಎಂದು ಕೇಳಿದ.

ಜಯಮ್ಮ ಆಶ್ಚರ್ಯಗೊಂಡು,

"ಯಾರು ಹೇಳಿದರು?" ಎಂದು ಕೇಳಿದಳು.

"ಊರಿಗೆ ಊರೇ ಮಾತಾಡುತ್ತಿದೆ. ರಾಮಸಾಗರದ ಗಿಡ್ಡೇಗೌಡರ ಮಗನಿಗೆ ಕೊಡುವುದೆಂದು ನಿಶ್ಚಯವಾಗಿದೆಯಂತೆ?"

"ಸರಿ—ಇವರ ಬಡಿವಾರಕ್ಕೇನು ಮುಟ್ಟೆಸಬೇಕು ಹೇಳಿ. ಬಡವರ ಮನೆ ಹೆಣ್ಣನ್ನ ಗೌಡರು ತಂದುಕೊಳ್ಳುತ್ತಾರೆಯೇ?—ಅಲ್ಲದೆ ನಮ್ಮ............"

"ಹಾಗಾದರೆ ಮುಂದಿನ ಯೋಚನೆ?"

"ಇವರು ಬಿದ್ದ ಕಡ್ಡಿ ಎತ್ತಿಡುವುದಿಲ್ಲ. ಹೆಣ್ಣು ಹೆಂಗಸು ನಾನೇನು ಮಾಡಲಿ ಹೇಳಿ. ಮಂಗಳೆ ಉಟ್ಟು ತೊಟ್ಟುದನ್ನು ನೋಡೋ ಭಾಗ್ಯ ನನ್ನ ಹಣೇಲಿ ಬರೆದಿದೆಯೋ ಇಲ್ಲವೋ?"

"ಯಾಕಿಲ್ಲ ಜಯಮ್ಮ, ನೀವು ಹೂ ಅಂದರೆ ಮಂಗಳೆ ಉದ್ದಕ್ಕೂ ಚಿನ್ನ ಹೇರುವುದಕ್ಕೆ ಸಿದ್ಧವಾಗಿರುವವರಿದ್ದಾರೆ."

ಜಯಮ್ಮ ಮೈಯೆಲ್ಲಾ ಕಣ್ಣು ಮಾಡಿಕೊಂಡು ಸುಬ್ರಹ್ಮಣ್ಯನನ್ನೇ ನೋಡುತ್ತಾ,

"ನಿಜವಾ ! ?........"

"ನಾನು ಸುಳ್ಳು ಏಕೆ ಹೇಳಲಿ."

"ಯಾರವರು?"

"ಲಗ್ನವಾಗಬೇಕೂಂತೀಯೇನೋ?"

"ನನಗೆ ಯಾವ ಲಗ್ನವಾಯಿತು!"

"ಹಾಗಾದರೆ ನಿನ್ನ ಒಪ್ಪಿಗೆ ಇದೆಯೆನ್ನು.

"ಯಾರು ಹೇಳಲಿಲ್ಲವಲ್ಲಾ."

"ನಿನಗೇ ಗೊತ್ತಾಗುತ್ತೆ. ಭೀಮಾಚಾರಿ ಬಂದು ಎಲ್ಲಾ ತಿಳಿಸುತ್ತಾನೆ"

ಎಂದು ಸುಬ್ರಹ್ಮಣ್ಯ ಎದ್ದ.

"ಕಾಪಿ ತಕ್ಕೊಂಡೋಗಿ" ಎಂದಳು ಜಯಮ್ಮ.

"ಈಗ ಬೇಡ. ಪರಮಾನಂದಯ್ಯ ಬಂದ ಮೇಲೆ ನಾನು ತಿರುಗಿ ಬರುತ್ತೇನೆ."

ಎಂದು ಹೇಳಿ ಸುಬ್ರಹ್ಮಣ್ಯ ಹೊರಟುಬಿಟ್ಟ.

ಸಂತೋಷದ ಭರದಲ್ಲಿ ಜಯಮ್ಮ ಮಗಳನ್ನಪ್ಪಿ ಮುದ್ದಾಡಿದಳು.

ಭೀಮಾಚಾರಿ ಉಭಯ ಪಕ್ಷಗಳಿಗೂ ಸಮ್ಮತವಾಗುವಂತೆ ವ್ಯಾಪಾರ ಕುದುರಿಸಿದ:

"ಸುಬ್ರಹ್ಮಣ್ಯ ಮಂಗಳೆಗೆ ಎರಡು ಸೇರು ಭಂಗಾರ, ಜಯಮ್ಮನಿಗೆ ಒಂದು ಸೇರು ಭಂಗಾರ ಕೊಟ್ಟು, ಮೇಲೆ ನಗದು ಸಾವಿರ ರೂಪಾಯಿ ಕೊಡಬೇಕು.

"ಪರಮಾನಂದಯ್ಯ, ಜಯಮ್ಮ ಸುಬ್ರಹ್ಮಣ್ಯನನ್ನು ಅಳಿಯನೆಂದು ಭಾವಿಸಿಕೊಂಡು ಅವನಿಗೆ ತೃಪ್ತಿಯಾಗುವಂತೆ ನಡೆದುಕೊಳ್ಳಬೇಕು.

"ಈ ಸಂಬಂಧದ ವಿಷಯ ಬಹಳ ಗೋಪ್ಯವಾಗಿಟ್ಟಿರಬೇಕು. ಪರಮಾನಂದಯ್ಯನಾಗಲಿ ಜಯಮ್ಮನಾಗಲಿ ಮಂಗಳೆಯಾಗಲಿ ಯಾರಲ್ಲಿಯೂ ಬಾಯಿ ಬಿಡಕೂಡದು.

"ಪ್ರತಿ ತಿಂಗಳೂ ಸುಬ್ರಹ್ಮಣ್ಯ ಪರಮಾನಂದಯ್ಯನ ಮನೆಖರ್ಚಿಗೆ ನೂರು ರೂಪಾಯಿ ಕೊಡಬೇಕು.

"ಮಂಗಳಿ ದಾರಿಬಿಟ್ಟು ಹೋದರೆ ಪರಮಾನಂದಯ್ಯ ಮೂರು ಸೇರು ಭಂಗಾರ ಸುಬ್ರಹ್ಮಣ್ಯನಿಗೆ ಹಿಂದಿರುಗಿಸಬೇಕು."

ಪರಮಾನಂದಯ್ಯ ಎಲ್ಲಾ ಕೇಳಿ,

"ನನ್ನ ಕಂಪೆನಿ ವಿಷಯ ಬರಲೇ ಇಲ್ಲವಲ್ಲಾ ಭೀಮಣ್ಣ?" ಎಂದ.

ಭೀಮಾಚಾರಿ ಕೋಪ ಬ್ರಹ್ಮರಂಧ್ರಕ್ಕೇರಿತು. ದಾಸರಿ ಮೇಲೆ ಉಗ್ರನೋಟ ಬೀರಿ,

"ನಿನ್ನಂಥ ಮೂರ್ಖ ಜಗತ್ತಿನಲ್ಲೇ ಇಲ್ಲವೋ ದಾಸರಿ. ಜನ್ಮಕ್ಕಂಟಿದ ತಿರುಪೆ ಬುದ್ಧಿ ಹೇಗೆ ಬಿಡುತ್ತೆ ಹೇಳು. ಆಸಾಮಿ ಕೈಗೆ ಸಿಕ್ಕಿದರೆ ನಾಟಕದ ಕಂಪೆನೀಗೆ ಹಣ ಕೀಳುವುದೊಂದು ದೊಡ್ಡ ವಿಷಯವೇನೋ ?"

ಎಂದ. ಜಯಮ್ಮ ಅವನ ವಾದವನ್ನೊಪ್ಪಿಕೊಂಡಳು. ದಾಸರಿ ಬಾಯಿಮುಚ್ಚಿಕೊಳ್ಳಬೇಕಾಯಿತು.

ಜಯಮ್ಮ ಬಹಳ ದಿನಗಳಿಂದ ಬಯಸುತ್ತಿದ್ದ 'ಲಕ್ಷ್ಮೀತಾಂಡವ' ಅವಳ ಮನೆಯಲ್ಲಿ ಆಡಲು ತಡವಾಗಲಿಲ್ಲ.

ಚಿನ್ನಪ್ಪಾಚಾರೀಗೆ ಒಡವೆಮಾಡಲು ಹೇಳುವುದು ಅನಿವಾರ್ಯವಾಗಿತ್ತು. ಅವನು ಅತೃಪ್ತನಾಗಿ ಎಲ್ಲಿ ಗುಲ್ಲೆಬ್ಬಿಸುವನೋ ಎಂಬ ಭಯ ಎಲ್ಲರನ್ನೂ ಕಾಡುತ್ತಿತ್ತು. ಒಡವೆಗಳನ್ನು ಪರಮಾನಂದಯ್ಯನ ಕಣ್ಣೆದುರಿಗೇ ಮಾಡತಕ್ಕದು ಎಂಬ ಕರಾರಿಗೆ ಆಚಾರಿ ಒಪ್ಪಿಕೊಂಡ ಮೇಲೆ ಅವನಿಗೇ ಒಡವೆ ಮಾಡುವ ಕೆಲಸ ಒಪ್ಪಿಸಲಾಯಿತು.

ಪರಮಾನಂದಯ್ಯ, ಜಯಮ್ಮ, ಮಂಗಳ ಮೈಸೂರಿಗೆ ಹೋಗಿ ತಮಗೆ ಬೇಕಾದ ಸೀರೆ, ಕಣಗಳನ್ನಾರಿಸಿಕೊಂಡು ಬಂದರು.

ಸುಬ್ರಹ್ಮಣ್ಯನ ಸಂತೋಷದ ಕೊಡ ತುಂಬಿ ತುಳುಕುತ್ತಿದ್ದರೂ ಮನಸ್ಸಿನಿಂದ ಅಳುಕು ಹೋಗಿರಲಿಲ್ಲ. ಈ ಸಮಾಚಾರ ಮನೆಗೆ ಮುಟ್ಟಿದರೆ ತನ್ನ ಗತಿಯೇನು ಎಂದು ಯೋಚಿಸುವನು. ಭೀಮಾಚಾರಿಯ 'ಕೃಷ್ಣಸಂಧಾನ'ದ ಮೇಲೆ ಭರವಸೆಯಿಟ್ಟುಕೊಂಡು ಮನಸ್ಸಿಗೆ ಶಾಂತಿ ತಂದುಕೊಳ್ಳುವನು.

ಸುಬ್ರಹ್ಮಣ್ಯನ 'ಅಳಿಯತನ' ಪರಮಾನಂದಯ್ಯನ ಮನೆಯಲ್ಲಿ ವಿಜೃಂಭಣೆಯಿಂದ ಆರಂಭವಾಯಿತು.

# ೧೧

ಅಣ್ಣನ ಸ್ನೇಹಿತರ ಪೈಕಿ ಶಂಕರ ಗೌರವಿಸುತ್ತಿದ್ದುದು ಶಾಂತ ರುದ್ರಪ್ಪನೊಬ್ಬನನ್ನೇ. ಊರಿನ ಕಿಡಿಗೇಡಿಗಳಾದ ಭೀಮಾಚಾರಿ, ಚಿನ್ನಪ್ಪ, ಪರಮಾನಂದಯ್ಯನ ಸ್ನೇಹವನ್ನು ಅಣ್ಣ ಬೆಳಸಿರುವುದೂ. ಪರಮಾನಂದಯ್ಯನ ಮನೆಗೆ ಹೋಗಿ ನಿತ್ಯ ಇಸ್ಪೀಟಿಗೆ ಕೂಡುತ್ತಿದ್ದುದೂ ಅವನಿಗೆ ಅಸಹನೀಯವಾಗಿತ್ತು.

ಶಂಕರ ಶೈಶವ್ಯ, ಬಾಲ್ಯ ಕಳೆದು ತಾರುಣ್ಯದ ಹೊಸ್ತಿಲ ಮೇಲೆ ಕಾಲಿಟ್ಟಿದ್ದ. ಮೆಟ್ರಿಕ್ ಪರೀಕ್ಷೆಗೆ ಕುಳಿತು, ಫಲಿತಾಂಶದ ದಾರಿ ನೋಡು ತ್ತಿದ್ದ. ತಂದೆ ತೀರಿಕೊಂಡ ಮೇಲೆ ನಡೆದ ಘಟನೆಗಳು, ಜನರ ಬಾಯಲ್ಲಿ ಬಂದ ಮಾತುಗಳು, ಮನೆಯಲ್ಲಿ ತಾಯಿಯ ಗೋಳು ಎಲ್ಲ ವನ್ನೂ ಕಂಡಿದ್ದ ಶಂಕರನ ಅನುಭವ ವೃಕ್ಷ ಕುಡಿಯೊಡೆದು ಚಿಗುರಿತ್ತು. ಹತ್ತು ವರ್ಷ ಶಾಲೆಯಲ್ಲಿ ದೊರೆಯದ ಅನುಭವ ಅವನಿಗೆ ಒಂದೆರಡು ವರ್ಷಗಳಲ್ಲಿ ಮನೆಯಲ್ಲಿಯೇ ಲಭಿಸಿತ್ತು.

ಶಂಕರನಿಗೂ ಶಾಂತರುದ್ರನಿಗೂ ಸ್ನೇಹ ಬೆಳೆಯಲು ಒಂದು ಪ್ರಬ ಲವಾದ ಕಾರಣವಿತ್ತು. ಪರೀಕ್ಷೆ ಮುಗಿದ ಮೇಲೆ ಶಂಕರನಿಗೆ ಹೊತ್ತು ಕಳೆಯುವುದೇ ಒಂದು ಸಮಸ್ಯೆಯಾಗಿತ್ತು. ಅದೇ ಸಮಸ್ಯೆ ಶಾಂತ ರುದ್ರನನ್ನೂ ಕಾಡುತ್ತಿತ್ತು. ಶಂಕರ ಶಾಂತರುದ್ರ ಇಬ್ಬರಿಗೂ ಮನೆಯ ಜವಾಬ್ದಾರಿ ಇರಲಿಲ್ಲ. ನಿತ್ಯ ಜೀವನಕ್ಕೆ ಅವರು ದುಡಿಯಬೇಕಾಗಿರ ಲಿಲ್ಲ. ಶಂಕರನಿಗೆ ಸುಬ್ರಹ್ಮಣ್ಯ, ಶಾಂತರುದ್ರನಿಗೆ ಸಿದ್ಧಲಿಂಗಪ್ಪ ಕಲ್ಪ ವೃಕ್ಷವಾಗಿದ್ದರು. ಇಬ್ಬರಿಗೂ ಇದ್ದ 'ಓದುವ ಚಟ' ಅವರನ್ನು ಒಂದು ಗೂಡಿಸಿತ್ತು.

ಶಾಂತರುದ್ರಪ್ಪನ ತಂದೆ ಸಿದ್ಧಲಿಂಗಪ್ಪ ಅತುಲ ಧರ್ಮಾಭಿಮಾನಿ ಗಳಾಗಿದ್ದರು. ಪ್ರತಿ ತಿಂಗಳೂ ಹತ್ತಿಪ್ಪತ್ತು ರೂಪಾಯಿಗಳನ್ನು ಧಾರ್ಮಿಕ ಪುಸ್ತಕಗಳು, ಪತ್ರಿಕೆಗಳನ್ನು ಕೊಂಡುಕೊಳ್ಳುವುದಕ್ಕೆ ಅವರು ಧಾರಾಳವಾಗಿ ಖರ್ಚುಮಾಡಿದ್ದರು. ಅವುಗಳ ಜತೆಯಲ್ಲಿ ಕೆಲವು ಕಥೆ,

ಕಾದಂಬರಿ ಪುಸ್ತಕಗಳೂ ನುಸುಳಿಕೊಂಡಿದ್ದುವು. ಪುಸ್ತಕಪ್ರಿಯನಾಗಿದ್ದ ಶಂಕರನೂ ಒಂದು ಸಣ್ಣ ಪುಸ್ತಕಭಂಡಾರ ಸಂಗ್ರಹಿಸಿಕೊಂಡಿದ್ದ.

ಪುಸ್ತಕ ವಿನಿಮಯದಲ್ಲಿ ಆರಂಭವಾದ ಅವರ ಸ್ನೇಹ ಕ್ರಮ ಕ್ರಮೇಣ ಬಲಿಯುತ್ತ ಬಂತು. ವೈಯಕ್ತಿಕ ಪ್ರಶ್ನೆಗಳಿಗೆ ಸ್ನೇಹ ಅವಕಾಶಕೊಡುವ ವರೆಗೆ ಕಾದಿದ್ದು ಒಂದು ದಿನ ಶಂಕರ ಕೇಳಿದ,

"ಶಾಂತರುದ್ರಾ, ನೀನು ಮುಂದೇನು ಮಾಡಬೇಕೆಂದಿರುವೆ ?"

"ಹೊಸಪೇಟೆಗೆ ಹೋಗಿದ್ದೆನಪ್ಪಾ, ಜಡೆ ಚನ್ನಬಸಪ್ಪನವರ ಸಂಬಂಧ ಬೆಳಸಬೇಕೆಂದು ನಮ್ಮ ತಂದೆ ತುಂಬ ಆತುರರಾಗಿದ್ದಾರೆ."

"ಈ ಮದುವೆ ಮಾತು ಬಹಳ ದಿವಸಗಳಿಂದ ಕೇಳಿ ಬರುತ್ತಲಿದೆ. ಇನ್ನೂ ಏಕೆ ಇತ್ಯರ್ಥಕ್ಕೆ ಬರಲೊಲ್ಲದು."

"ಅದರ ರಹಸ್ಯವಿಷ್ಟೇ ಶಂಕರಾ, ಚನ್ನಬಸಪ್ಪನವರು ಭಾರಿ ಶ್ರೀಮಂತರು. ಆ ಪ್ರಾಂತಕ್ಕೆಲ್ಲಾ ಹೆಸರುವಾಸಿಯಾದ ಕುಳ. ಹೊಸ ಪೇಟೆಯಲ್ಲಿ ಅವರದು ಒಂದು ಬಟ್ಟೆಯಂಗಡಿ ಇದೆ. ಬಹಳ ಕಾಲದಿಂದ ನಡೆದು ಬಂದುದೆಂದು ಅಂಗಡಿಯನ್ನುಳಿಸಿಕೊಂಡಿದ್ದಾರೆ. ಅವರಿಗೆ ಸಾವಿರಾರು ಎಕರೆ ಗದ್ದೆ, ಲೇವಾದೇವಿ, ಷೇರುಗಳೂ ಇವೆ. ಅವರಿಗೆ ಇರುವವಳೆಲ್ಲಾ ಒಬ್ಬಳೇ ಮಗಳು ಗಿರಿಜಾ. ಚನ್ನಬಸಪ್ಪನವರ ಆಸ್ತಿ ಯೆಲ್ಲಾ ಅವರ ತೆರುವಾಯ ಮಗಳಿಗೂ ಮಗಳ ಗಂಡನಿಗೂ ಸೇರುತ್ತದೆ. ಈ ಸಂಬಂಧ ಬಿಡಬಾರದೆಂದು ನಮ್ಮ ತಂದೆ ಹೆದ್ನ ಹಾಕುತ್ತಿದ್ದಾರೆ."

"ನ್ಯಾಯವಾಗಿಯೇ ಇದೆಯಲ್ಲ. ಒಪ್ಪಿಕೊಳ್ಳುವುದಕ್ಕೆ ನೀನೇಕೆ ಮೀನಮೇಷ ಎಣಿಸುತ್ತಿದ್ದೀ?"

"ಅವರದು ಒಂದು ಕರಾರು: ಮದುವೆಯಾದ ಮೇಲೆ ಅಳಿಯ ಇಲ್ಲೇ ಬಂದು, ನಮ್ಮ ಮನೆಯಲ್ಲಿಯೇ ಇರಬೇಕು. ಅದಕ್ಕೂ ನಮ್ಮ ತಂದೆ ಬೇಡವೆನ್ನಲಿಲ್ಲ."

"ಸರಿ ಹಾಗಾದರೆ............"

"ಇನ್ನೊಂದು ವಿಷಯವಿದೆ. ಹುಡುಗಿ ಕುರೂಪದ ಮುದ್ದೆ. ಕುಳ್ಳಿ, ಕಪ್ಪು—ಮುಖದ ಮೇಲೆ ಸಿಡಿಬಿನ ಕಲೆ—ಒಂದು ಕಣ್ಣಲ್ಲಿ ಹೂವು. ಅದರ ಜತೆ ಹೇಗಪ್ಪಾ ಸಂಸಾರ ಮಾಡುವುದು ಎಂದು ಹೆದರಿಕೆಯಾಗುತ್ತದೆ."

"ಕಜ್ಜಾಯ ತಿನ್ನಲು ಬೇಕು, ಖರ್ಚು ಆಗಬಾರದು ಅಂದರೆ ಹೇಗಯ್ಯ ಆಗುತ್ತದೆ. ದುಡ್ಡು ಬೇಕಾದರೆ ಸಾಧಾರಣವಾಗಿರುವ ಹುಡುಗಿ ಕಟ್ಟಿಕೊಳ್ಳಲೇ ಬೇಕು."

"ನನ್ನದಿರಲಿ—ನಿನ್ನ ವಿಷಯ ಹೇಳು. ರಿಸಲ್ಟ್ ಬಂದ ಮೇಲೆ ಮೈಸೂರಿಗೆ ಹೋಗುತ್ತೀಯೇನು?"

"ಹೋಗಬೇಕೆಂದಿದ್ದೇನೆ. ಅಣ್ಣ ಏನು ಹೇಳುವನೋ?"

"ಹೇಳುವುದೇನು! ಬಾಯಿ ಮುಚ್ಚಿಕೊಂಡು ಒಪ್ಪಿಕೊಳ್ಳುತ್ತಾನೆ."

"ಅಣ್ಣ ಮೊದಲಿನ ಹಾಗಿಲ್ಲ ಶಾಂತರುದ್ರೂ. ಈಚಿಗೆ ಒಂದು ತೆರಹ ಆಗಿಹೋಗಿದ್ದಾನೆ. ಮನೆಯಲ್ಲಿ ಒಂದು ಗಳಿಗೆ ಅವನ ಕಾಲು ನಿಲ್ಲಲ್ಲ. ಯಾವಾಗ ನೋಡಿದರೂ 'ಕೆಲಸ—ಕೆಲಸ' ಎನ್ನುತ್ತಿರುತ್ತಾನೆ. ಅತ್ತಿಗೆ ಮಾತಾಡಿಸಿದರೆ ಸಿಡಿದು ಬೀಳುತ್ತಾನೆ. ಅಮ್ಮ, ಅತ್ತಿಗೆ ಕಣ್ಣೀರು ಹಾಕುತ್ತಾರೆ."

ಶಾಂತರುದ್ರಪ್ಪ ಉಗುಳು ನುಂಗಿಕೊಂಡ. ಎಚ್ಚರ ತಪ್ಪಿ ಎಲ್ಲಿ—ಯಾವ ಮಾತು ಹೊರಬಿದ್ದು ಬಿಡುತ್ತದೆಯೋ ಎಂದು ಹೆದರಿದ. ಶಂಕರನಿಗೆ ಏನಾದರೂ ಹೇಳಲೇ ಬೇಕಾಗಿತ್ತು. ಸಾವಕಾಶವಾಗಿ ಯೋಚಿಸಿಕೊಂಡು,

"ಅವನ ತಾಪತ್ರಯ ಏನಿದೆಯೋ? ದೊಡ್ಡ ವ್ಯವಹಾರ ಮಾಡುವ ಮನುಷ್ಯನಿಗೆ ಯೋಚನೆಗಳಿಲ್ಲದಿರುತ್ತವೇನಯ್ಯಾ?"

"ಅತ್ತಿಗೆ ಕಣ್ಣಲ್ಲಿ ನೀರು ಹಾಕುವುದನ್ನು ಕಂಡರೆ ನನಗೆ ತುಂಬ ಸಂಕಟವಾಗುತ್ತದೆ ಶಾಂತರುದ್ರೂ. ಆಕೆ ಈಗ ಒಂದು ಜೀವವಲ್ಲ—ಎರಡು ಜೀವ."

"ನನ್ನ ಏನು ಮಾಡೂಂತೀಯಪ್ಪಾ."

"ಅಣ್ಣ ಸ್ವಲ್ಪ ಮನೆಗೆ ಬೇಗ ಬಂದು, ಮನೆಯಲ್ಲಿ ನಗುನಗುತ್ತಾ ಇದ್ದರೆ ಸಾಕು."

"ಒಂಭತ್ತು ಗಂಟೆಗೆಲ್ಲಾ ಮನೆಗೆ ಹೋಗುತ್ತಿದ್ದಾನಲ್ಲಯ್ಯಾ."

"ಎಲ್ಲಿ ಬಂತು ಶಾಂತರುದ್ರೂ. ನಮ್ಮ ಮನೆ ಗುಟ್ಟು ನಾನೇ ರಟ್ಟು ಮಾಡುವುದು ನ್ಯಾಯವಲ್ಲ. ಆದರೆ ನೀನು ನಮ್ಮ ಮನೆಯ

ವನೇ ಆಗಿದ್ದಿ. ನಿನ್ನ ಹತ್ತಿರ ಹೇಳುವುದಕ್ಕೆ ನಾನು ಹಿಂಜರಿಯಬೇಕಾಗಿಲ್ಲ. ಅವನು ರಾತ್ರಿ ಒಂದು ಗಂಟೆ, ಎರಡು ಗಂಟೆಗೆ ಮುಂಚೆ ಬರುವುದೇ ಇಲ್ಲ. ಅತ್ತಿಗೆ ರೂಮಿನಲ್ಲಿಯೇ ಅನ್ನ ಕಲಸಿ ಇಟ್ಟಿರುತ್ತಾರೆ. ತಿಂದ ದಿನ ತಿಂದ, ಬಿಟ್ಟ ದಿನ ಬಿಟ್ಟ. ಅಷ್ಟು ಹೊತ್ತೂ ಕ್ಲಬ್ಬಿನಲ್ಲಿ ಏನು ಮಾಡುತ್ತಿರುತ್ತಾನೆ ಶಾಂತರುದ್ರ ?"

"ನಾ ಕಾಣೆನಪ್ಪಾ."

"ಅವನ ಸ್ನೇಹಿತ ನೀನು ಒಂದು ಮಾತು ಹೇಳಿದರೆ ಕೇಳುತ್ತಾನೆ."

"ಯೋಚನೆ ಮಾಡುತ್ತೇನೆ. ಇದು ದುಡುಕುವ ವಿಷಯವಲ್ಲ. ಸಂಸಾರದ ಗುಟ್ಟು ಹೊರಬಿತ್ತೆಂದು ಗೊತ್ತಾದರೆ ಅವನು ಮತ್ತಷ್ಟು ಬಿರುಸಾಗುವ ಸಂಭವವಿದೆ."

ಎಂದು ಶಾಂತರುದ್ರಪ್ಪ ಮೆಲ್ಲನೆ ಜಾರಿಕೊಂಡ.

ಅತ್ತಿಗೆಯ ಸ್ಥಿತಿ ನೋಡಿ ನೋಡಿ ಶಂಕರನ ಹೃದಯ ಕರಗಿ ನೀರಾಗಿತ್ತು. ಬೆಳಿಗ್ಗೆ ಎದ್ದು ಬಂದೊಡನೆಯೇ ಅವಳ ಕಣ್ಣುಗಳು ಕೆಂಪಾಗಿರುತ್ತಿದ್ದುದನ್ನು ನಿತ್ಯ ನೋಡುತ್ತಿದ್ದ.

'ರಾತ್ರಿಯೆಲ್ಲಾ ಅತ್ತಿಗೆ ಅಳುತ್ತಿದ್ದಳೇ?'

'ಅಣ್ಣ ಬಯ್ದನೇ?'

'ರಾತ್ರಿ ಜಾಗರಣೆ ಮಾಡಿದಳೇ?'

ಎಂದು ಯೋಚಿಸುವನು. ಅತ್ತಿಗೆಯನ್ನೇ ಕೇಳಿ ನಿಜಸ್ಥಿತಿಯನ್ನರಿಯವುದು ಅಲೌಕಿಕವಾಗಿತ್ತು. ಅತ್ತಿಗೆಯ ಜೀವನ ಶುಷ್ಕವಾಗುತ್ತಿರುವುದನ್ನು ನೋಡುತ್ತಿದ್ದಂತೆ ಅವನ ಅಂತಃಕರಣ ತಳಮಳಕ್ಕೀಡಾಗುತ್ತಿತ್ತು.

ಬೆಳಕು ಕಾಣಲಿದ್ದ ತನ್ನ ಕಂದನಿಗೆ ಗೌರಿ ಪುಟ್ಟ ಪುಟ್ಟ ಬಟ್ಟೆಗಳನ್ನು ಹೊಲಿದಿಡುತ್ತಿದ್ದಳು. ಮಗುವಿಗೆ ಕುಲಾವಿ, ಸ್ವೆಟರ್, ಕಾಲು ಚೀಲ ತಾನೇ ನೇಯಬೇಕೆಂದು ಉಣ್ಣೆಯದಾರ ತರಿಸಿಕೊಂಡಿದ್ದಳು. ಅವಳ ಕೈಯಲ್ಲಿ ಸತತವೂ ಉಣ್ಣೆಯ ಬಣ್ಣಬಣ್ಣದ ದಾರಗಳು, ನೇಯ್ಗೆಗೆ ಉಪಯೋಗಿಸುವ ಕಡ್ಡಿಗಳು ಕುಣಿದಾಡುತ್ತಿದ್ದುವು.

ಆದರೆ ಅವಳ ಮನಸ್ಸು ಎಲ್ಲಿಯೋ ಹಾರಾಡುತ್ತಿತ್ತು!

ಅಮನಸ್ಕಳಾಗಿ ಗೌರಿ ತಪ್ಪುನೇಯ್ದು, ಅದನ್ನು ಬಿಚ್ಚಿ ಮತ್ತೆ ಮೊದಲಿನಿಂದ ಆರಂಭಿಸುವಳು.

ಕೈಯ ಸಂಚಾರಕ್ಕಿಂತಲೂ ವೇಗವಾಗಿ ಅವಳ ಚಿತ್ತ ಸಂಚರಿಸುತ್ತಿತ್ತು.

ಅತ್ತಿಗೆ ನೇಯ್ದಿದ್ದ ಕುಲಾವಿ ಹಾಕಿಕೊಂಡು ಶಂಕರ ಅವಳನ್ನು ನಗಿಸಲೆತ್ನಿಸುತ್ತಿದ್ದ. ಗೌರಿ ನಗುತ್ತಿದ್ದಳು. ಆದರಾ ನಗೆ ಮಳೆಗಾಲದ ಎಳೆಬಿಸಿಲಾಗುತ್ತಿತ್ತು. ಮಕ್ಕಳು ಸ್ಲೇಟಿನ ಬರೆಹ ಅಳಿಸುವಂತೆ ಯಾವುದೋ ಚಿಂತೆ ಅವಳ ನಗೆಯನ್ನಳಿಸುತ್ತಿತ್ತು.

"ಒಳ್ಳೆಯ ಕಥೆ ಪುಸ್ತಕ ಇದೆ. ಕೊಡಲೇ ಅತ್ತಿಗೆ—ಓದುತ್ತೀಯಾ ?"

"ಕೊಡಪ್ಪಾ."

ಶಂಕರ ಕೊಟ್ಟ ಪುಸ್ತಕ ಕೈಗೆ ತೆಗೆದುಕೊಂಡು ಹಾಳೆ ಮಗುಚಿ, ಹಾಗೆಯೇ ನೆಲದ ಮೇಲಿಡುವಳು.

"ಓದಲ್ವೇ ಅತ್ತಿಗೆ?"

"ಓದುತ್ತೀನಿ ಶಂಕರ."

"ಕಥೆ ತುಂಬ ಚೆನ್ನಾಗಿದೆ ಅತ್ತಿಗೆ. ತುಂಬಿದ ಸಂಸಾರದ ಚಿತ್ರವನ್ನು ಕಥೆಗಾರ ಹೃದಯಂಗಮವಾಗಿ ವರ್ಣಿಸಿದ್ದಾನೆ."

ಒಮ್ಮೆ ಗೌರಿ ಕತ್ತೆತ್ತಿ ನೋಡುತ್ತಿದ್ದಳು. ಅಶ್ರುಪೂರಿತವಾದ ಅವಳ ನಯನದ್ವಯಗಳು ನೂರಾರು ಪ್ರಶ್ನೆಗಳನ್ನು ಕೇಳುತ್ತಿದ್ದುವು.

'ತುಂಬಿದ ಸಂಸಾರವೇ ?!

'ಅದರಲ್ಲಿ ಸುಖವಿದೆಯೇ ?

'ಶಾಂತಿಯಿದೆಯೇ ?

'ಒಮ್ಮತಿ ಸಮ್ಮತಿ ಇದೆಯೇ ?

'ಅನುಕಂಪವಿದೆಯೋ ?

'ಸುಹೃದಯತೆ ಇದೆಯೇ ?'

ಶಂಕರ ಆ ಪ್ರಖರ ಕಣ್ಣುಗಳ ನೋಟ ತಾಳಲಾರದೆ ಕತ್ತು ತಗ್ಗಿಸುತ್ತಿದ್ದ.

ಒಮ್ಮೆ ಅತ್ತಿಗೆಯ ಮನಸ್ಸು ಉಲ್ಲಾಸಗೊಳಿಸಲೆತ್ನಿಸಿ,

"ನಾನು ಮೈಸೂರಿಗೆ ಹೋಗಿ ಕಾಲೇಜು ಸೇರುತ್ತೀನಿ ಅತ್ತಿಗೆ" ಎಂದ.

"ಸೇರಪ್ಪಾ. ಚೆನ್ನಾಗಿ ಓದು. ತರಗತಿಯಲ್ಲಿ ಮೊದಲನೆಯವ ನಾಗು."

"ನಾನು ಡಿಗ್ರಿ ತೆಗೆದುಕೊಂಡ ಮೇಲೆ ಏನು ಮಾಡುತ್ತೇನೆ ಗೊತ್ತೇ ಅತ್ತಿಗೆ?"

"ಒಳ್ಳೆಯ ಕೆಲಸಕ್ಕೆ ಸೇರುತ್ತೀ."

"ಇಲ್ಲ. ಊರಿಗೇ ಹಿಂದಿರುಗುತ್ತೇನೆ."

"ಏಕೆ?"

"ಆ ವೇಳೆಗೆ ಅಣ್ಣನ ಮಗ ವಯಸ್ಸಿಗೆ ಬಂದಿರುತ್ತಾನೆ. ಅವನಿಗೆ ನಾನೇ ಪಾಠ ಹೇಳಿಕೊಡುತ್ತೇನೆ."

"ಮಗನಾದರೆ ಸರಿ—ಮಗಳಾದರೆ!"

"ಅವಳಿಗೂ ಹೇಳಿಕೊಡುತ್ತೇನೆ. ಶಿಕ್ಷಣ ಎಂದರೆ ಬರೀ ಓದಲ್ಲ—ಬರೀ ಪುಸ್ತಕ ಜ್ಞಾನವಲ್ಲ—ಅದು ಮಾನವತೆಯ ವಿಕಾಸ ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ."

"ಆಗಲಿ ನೋಡೋಣ—ಆ ಕಾಲ ಬರಲಿ."

"ಏಕತ್ತಿಗೆ ಯಾವಾಗಲೂ ಬೇಸರದಲ್ಲಿಯೇ ಇರುತ್ತೀ. ಸ್ವಲ್ಪ ಹೊರಗಾದರೂ ಹೋಗಿ ಬರಬಾರದೇ. ಜೋಯಿಸರ ಮನೆಗೂ ನೀನು ಈಚೆಗೆ ಹೋಗಿಲ್ಲ."

"ಮನೆಬಿಟ್ಟು ಎಲ್ಲಿಗೂ ಹೋಗಲು ಇಚ್ಛೆಯಿಲ್ಲ ಶಂಕ್ರು."

"ಏಕೆ—ನೀನು ಮಾಡಿರುವ ಅಪರಾಧವೇನು ?"

"ನನ್ನ ಮುಖ ಕಂಡಕೂಡಲೆ ಜೋಯಿಸರ ಮನೆಗೆ ಬರುವ ಹೆಂಗಸರೆಲ್ಲಾ ಏನೋ ಒಂದು ತೆರಹ ಆಡುತ್ತಾರೆ ಶಂಕರ. ಮಾತು ನಿಲ್ಲಿಸಿ ನನ್ನ ಮುಖವನ್ನೇ ದಿಟ್ಟಿಸಿ ನೋಡುತ್ತಾರೆ. ಜೋಯಿಸರ ಹೆಂಡತಿ ಕೂಡ, ತಾಯಿ ಸತ್ತ ಮಗುವನ್ನು ನೋಡುವಂತೆ ನನ್ನನ್ನು ನೋಡಿ ನನ್ನ ತಲೆ ನೇವರಿಸುತ್ತಾ 'ಅಯ್ಯೋ—ನನ್ನಪ್ಪಾ' ಎನ್ನುತ್ತಾರೆ. ಅವರೆಲ್ಲರ

ಮಾತುಗಳಲ್ಲಿ ವ್ಯಂಗ್ಯ, ಕುಹಕ ತುಂಬಿರುತ್ತದೆ. ನಾನು ಅವರಿಗೆ ಯಾವ ಅನ್ಯಾಯಮಾಡಿರುವೆನೋ ತಿಳಿಯಲಿಲ್ಲ."

"ನಿನ್ನ ಹೆಸರು ಹೇಳಿದವರೂ ಅನ್ಯಾಯ ಮಾಡಲಾರರು. ತಿಳಿಗೇಡಿ ಹೆಂಗಸರ ಮಾತಿಗೇಕೆ ಬೆಲೆಕೊಡುವೆ ಅತ್ತಿಗೆ. ಹಳ್ಳಿಗಳ ಜನಗಳ ಸ್ವಭಾವವೇ ಅಂಥದ್ದು."

ಎಂದು ನುಡಿದ. ಶಂಕರನ ಸಹಾನುಭೂತಿ ಗೌರಿಯ ಜೀವನಕ್ಕೆ ಸ್ವಲ್ಪ ತಂಪೆಸೆದಿತ್ತು.

ಸೊಸೆ ಗರ್ಭಿಣಿಯಾಗಿದ್ದುದು ಪಾರ್ವತಮ್ಮನವರ ಜೀವನದಲ್ಲಿ 'ಕತ್ತಲೆ ಮನೆಯಲ್ಲಿ ಮಣಿದೀಪ' ವಿಟ್ಟಂತೆ ಆಗಿತ್ತು. ವಂಶಲತೆ ಮುರುಟಿಕೊಳ್ಳದೆ ಬೆಳೆಯುತ್ತದೆಂಬ ವಿಷಯ ಅವರ ಮನಸ್ಸಿಗೆ ಅವರ್ಣನೀಯ ಆನಂದವನ್ನುಂಟುಮಾಡಿತ್ತು. ಸೊಸೆಗೆ ಸ್ವಲ್ಪವೂ ಆಯಾಸವಾಗದಂತೆ ಅವಳನ್ನು ನೋಡಿಕೊಳ್ಳುತ್ತಿದ್ದರು. ಗೌರಿ ಉಪಕರಣೆ ತೊಳೆಯುವುದಕ್ಕೂ ಬಿಡುತ್ತಿರಲಿಲ್ಲ. ಅವಳ ಬಯಕೆಗಳನ್ನು ತಾವೇ ಯೋಚಿಸಿಕೊಂಡು ಪೂರೈಸುತ್ತಿದ್ದರು. ಮೊದಲಿನ ಹಾಗೆ ಈಗ ಕಾಸುಕಾಸಿಗೆ ಯೋಚಿಸಬೇಕಾಗಿರಲಿಲ್ಲ—ಕಾಸುಕಾಸಿಗೆ ಲೆಕ್ಕ ಒಪ್ಪಿಸಬೇಕಾಗಿರಲಿಲ್ಲ. ಮನೆ ಖರ್ಚಿಗಾಗಿ ತಾಯಿ ಎಷ್ಟು ಹಣ ಕೇಳಿದರೂ ಸುಬ್ರಹ್ಮಣ್ಯ ಗೊಣಗಾಡದೆ ಕೊಡುತ್ತಿದ್ದ.

ಆದರೆ ಗೌರಿಯ ಮನಸ್ಸು ಯಾವ ಶಾಂತಿ–ಯಾವ ತಾದಾತ್ಮ್ಯ ನಿರೀಕ್ಷಿಸುತ್ತಿತ್ತೋ ಅದನ್ನು ಪೂರೈಸಲು ಪಾರ್ವತಮ್ಮ ಅಸಮರ್ಥರಾಗಿದ್ದರು. ಪತಿವಿಯೋಗ ಅವರ ದೇಹವನ್ನು ಜರ್ಝರಿತಗೊಳಿಸಿದ್ದುದಲ್ಲದೆ, ಮನಸ್ಸಿನ ದಾರ್ಢ್ಯದ ಮೇಲೂ ಧಾಳಿ ಮಾಡಿತ್ತು. ಗೌರಿ ದಾರ ಸೂಜಿ ಹಿಡಿದು ಒಂದೆಡೆ ಕುಳಿತರೆ, ಪಾರ್ವತಮ್ಮ ತುಳಸೀಕಟ್ಟೆ ಸೇರಿಬಿಡುತ್ತಿದ್ದರು. ಅತ್ತೆ ಸೊಸೆಯ ಮಧ್ಯೆ ಯಾವುದೋ ತೆರೆ ಬಿದ್ದಿತ್ತು. ಅದೇನೆಂಬುದನ್ನು ಇಬ್ಬರೂ ಅರಿಯರು; ಅದನ್ನು ನಿವಾರಿಸಲು ಇಬ್ಬರೂ ಯತ್ನಿಸರು.

ಶಂಕರ ಮನೆಯ ವಾತಾವರಣವನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದ. ಸಂಜೆಯಾಗಸದಲ್ಲಿ ದಟ್ಟನೋಡ ಕವಿದು, ಚಂದ್ರ ಕಳೆ

ಯನ್ನು ದೂರ ನಿಲ್ಲಿಸಿದಂತಾಗಿತ್ತು. ಸಂಪತ್ತಿದ್ದರೇನು–ಗೆಲುವಿಲ್ಲ, ಚೆಲುವಿಲ್ಲ, ನಗೆಯಿಲ್ಲ. ಎಲ್ಲರ ಮುಖವೂ ಅವ್ಯಕ್ತದುಃಖದ ರನ್ನಗನ್ನಡಿ ಯಾಗಿತ್ತು.

ಒಂದು ಸಂಜೆ ಪಾರ್ವತಮ್ಮನವರೊಬ್ಬರೇ ತುಳಸೀ ಕಟ್ಟೆಯ ಬಳಿ ಕುಳಿತಿದ್ದರು. ಮನೆಬಿಟ್ಟು ಹೊರಗೆ ಹೋಗುವ ಅಭ್ಯಾಸವಿಲ್ಲದ ನಿಂಗವ್ವ ಅಂದು ಮನೆಯಲ್ಲಿರಲಿಲ್ಲ. ಗೌರಿ ತನ್ನ ಕೋಣೆಯಲ್ಲಿ ಕ್ರೋಷಾ ಹಾಕುತ್ತಿದ್ದಳು.

ತಮಗೆ ಕಾಣಿಸಿಕೊಂಡ ಮಗನನ್ನು ನೋಡಿ ಪಾರ್ವತಮ್ಮನವರು, "ಹೊರಗೆ ಹೋಗಲಿಲ್ಲವೇ ಶಂಕ್ರೂ?" ಎಂದು ಕೇಳಿದರು.

"ಇಲ್ಲಮ್ಮ ಹೋಗಲಿಲ್ಲ.—ಅಣ್ಣನಿಗೆ ಹೇಳಿದೆಯೇನಮ್ಮ?"

"ಯಾವ ವಿಷಯ."

"ನಾನು ಕಾಲೇಜ್ ಸೇರುವ ವಿಷಯ."

"ಹೇಳಿದೆ. ಅಗತ್ಯವಾಗಿ ಆಗಲಿ ಎಂದು ಹೇಳಿದ. ನಿನ್ನ ಫಲಿತಾಂಶ ಯಾವಾಗ ಬರುತ್ತದೆ?"

"ಈ ವಾರ ಬರಬೇಕು."

"ನೀನು ದೊಡ್ಡ ಪ್ಯಾಸು ಮಾಡಿ, ದೊಡ್ಡ ನೌಕರಿ ಮಾಡಬೇಕೆನ್ನುವುದು ನಿನ್ನ ತಂದೆಯವರ ಆಕಾಂಕ್ಷೆಯಾಗಿತ್ತು."

"ದೊಡ್ಡ ಪ್ಯಾಸು ಮಾಡಬೇಕೆಂದು ನನಗೂ ಆಸೆಯಿದೆಯಮ್ಮ— ಆದರೆ ನೌಕರಿ ಮಾಡುತ್ತೇನೆಯೋ ಇಲ್ಲವೋ?"

"ಪ್ಯಾಸಾಗಲಿ—ಮುಂದಿನ ವಿಷಯ ಆಮೇಲೆ ಯೋಚಿಸಿದರಾಯಿತು."

"ಅಮ್ಮ............"

"ಏನು ಶಂಕ್ರೂ."

"ಅತ್ತಿಗೆ ಯಾಕಮ್ಮ ಯಾವಾಗಲೂ ಒಂದು ತರಹ ಇರುತ್ತಾಳೆ."

"ನೀನಿನ್ನೂ ಹುಡುಗ ಶಂಕ್ರೂ. ಹೆಣ್ಣು ಜೀವದ ಕಷ್ಟಸುಖ ನಿನಗೆ ಹೇಗೆ ಅರ್ಥವಾಗಬೇಕು."

"ಸ್ವಲ್ಪ ಅರ್ಥ ಮಾಡಿಕೊಂಡಿದ್ದೇನಮ್ಮ. ಅತ್ತಿಗೆಯ ಮನಸ್ಸು

ಅವಳ ಈಗಿನ ಸ್ಥಿತಿಯಲ್ಲಿ ನೆಮ್ಮದಿಯಾಗಿರುವುದು ಅಗತ್ಯವಲ್ಲವೇ?"

"ಅಲ್ಲವೆಂದು ಯಾರು ಹೇಳಿದರು."

"ಊರಿನ ಜನ ಬಾಯಿಗೆ ಬಂದಂತೆ ಮಾತನಾಡಿಕೊಳ್ಳುತ್ತಿದ್ದಾರೆ."

"ಪೊಳ್ಳು ಮಾತಾಡುವವರ ಬಾಯಿಗೆ ಬುಟ್ಟಿ ಕಟ್ಟಲಾಗುವುದೇ?"

"ಆಗುವುದಿಲ್ಲ—ಆದರೆ ಆ ಬಗೆಯ ಮಾತುಗಳಿಗೆ ಅವಕಾಶ ಕೊಡದಿರಲು ಸಾಧ್ಯ."

"ಅವಕಾಶ ಯಾರು ಕೊಡಬೇಕು—ನಾಯಿಗೆ ಬೊಗಳುವ ಅವಕಾಶ ಕಲ್ಪಿಸಿಕೊಡಬೇಕೇ?"

"ಊರಿನವರಿಗೂ ನಮ್ಮ ಮನೆಗೂ ಯಾವಾಗಲೂ ಅಷ್ಟಕ್ಕಷ್ಟೇ. ನಾವು ಕೆಳಗೆ ಬಿದ್ದರೆ ಸಾಕು, ನಗಬಹುದು ಎಂದವರು ಕಾದಿದ್ದಾರೆ."

"ನಿಜ. ಅದಕ್ಕೆ ನಾನೇನು ಮಾಡಲು ಸಾಧ್ಯ ಶಂಕ್ರು."

"ಅಣ್ಣನಿಗೆ ಒಂದು ಬುದ್ಧಿಯ ಮಾತು ನೀನು ಹೇಳಬಹುದು. ಪ್ರತಿದಿನ ಅವನು ರಾತ್ರಿ ೧೨-೧ ಗಂಟೆಗೆ ಮನೆಗೆ ಬರುವುದು ಸರಿಯಲ್ಲ—ಇದು ಸಣ್ಣ ಊರು. ಪ್ರತಿಯೊಬ್ಬರ ಚಲನವಲನವೂ ಊರ ಸುದ್ದಿಯಾಗಿರುತ್ತದೆ."

"ಅಷ್ಟು ಹೊತ್ತು ಎಲ್ಲಿಗೆ ಹೋಗುತ್ತಾನೋ ಅವನು?"

"ಪರಮಾನಂದಯ್ಯನ ಇಸ್ಪೇಟ್ ಕ್ಲಬ್ಬಿನಲ್ಲಿ ಕಾಲಹಾಕುತ್ತಾನೆ ಎಂದು ಊರಿನಲ್ಲಿ ಗುಲ್ಲು."

"ಸಹವಾಸ ದೋಷ. ಆಗಲಪ್ಪಾ ಹೇಳಿ ನೋಡುತ್ತೇನೆ. ನಾನೇನಾದರೂ ಹೇಳಿದರೆ ಸುಬ್ಬು ಗೌರಿಯ ಮೇಲೆಲ್ಲಿ ಸಿಟ್ಟಾಗುತ್ತಾನೋ ಎಂದು ಬಾಯಿ ಮುಚ್ಚಿಕೊಂಡಿದ್ದೀನಿ."

ನಿಂಗವ್ವ ಮನೆಗೆ ಬರಲು, ಮಾತು ನಿಂತುಹೋಯಿತು. ನಿಂಗವ್ವ ಯಾರನ್ನೂ ಮಾತಾಡಿಸದೆ ತನ್ನ ವಸತಿಯ ಕಡೆ ನಡೆದಳು.

# ೧೨

ಶಾಂತರುದ್ರಪ್ಪ ಕ್ಲಬ್ಬಿನಲ್ಲಿ ಹೇಳಿದ ಸುದ್ದಿ ಕೇಳಿ ಯಾರಿಗೂ ಆಶ್ಚರ್ಯವಾಗಲಿಲ್ಲ. ಒಳ್ಳೆಯ ಸ್ನೇಹಿತ ಹೊರಟು ಹೋಗುತ್ತಾನಲ್ಲಾ ಎಂದು ಸುಬ್ರಹ್ಮಣ್ಯನಿಗೆ ವಿಷಾದವಾಯಿತು. ಕ್ಲಬ್ಬಿನ ಕೋರಂ ಕಡಿಮೆಯಾಗುತ್ತದಲ್ಲಾ ಎಂದು ಭೀಮಾಚಾರಿ ಗೊಣಗುಟ್ಟಿದ.

"ಪ್ರಯಾಣ ಯಾವಾಗ ಶಾಂತರುದ್ರೂ?" ಎಂದು ಸುಬ್ರಹ್ಮಣ್ಯ ಕೇಳಿದ.

"ಮುಂದಿನ ವಾರ ಹೊರಡಬೇಕಪ್ಪಾ."

"ಮದುವೆ ಮುಗಿಸಿಕೊಂಡು ನೀನು ಇಲ್ಲಿಗೆ ಬರುವುದಿಲ್ಲವೇನು ?"

"ಸ್ವಲ್ಪ ದಿನ ಹೊಸಪೇಟೆಯಲ್ಲಿದ್ದು ಆಮೇಲೆ ಬೇಕಾದರೆ ಹೋಗಿ ಬರಲಿ ಎಂದು ಮಾವನವರ ಆಜ್ಞೆಯಾಗಿದೆ."

"ಕೊನೆಗೂ ನಿಮ್ಮಪ್ಪನ ಹಟವೇ ಗೆದ್ದಿತು" ಎಂದು ಭೀಮಾಚಾರಿ ಸೂಚಿಸಿದ.

"ಹಿರಿಯರ ಮಾತು ಕೇಳದಿದ್ದರೆ ಪೂರೈಸುವುದು ಹೇಗೆ ಆಚಾರಿ."

ಪರಮಾನಂದಯ್ಯ ನಸುನಗುತ್ತಾ,

'ಹಣವೇ ನಿನ್ನಯ ಗುಣ, ಎಷ್ಟೆಂದು ವರ್ಣಿಸಲಿ'

ಎಂದು ಹಾಡಲಾರಂಭಿಸಿದ. ಶಾಂತರುದ್ರಪ್ಪ ಸಿಟ್ಟಿಗೆದ್ದು,

"ಸಾಕು ಮುಚ್ಕೋ ಬಾಯಿ. ನನಗೊಬ್ಬನಿಗೇ ಹಣದಾಸೆ, ಇವನು ಮಹಾ ವೈರಾಗ್ಯಶಾಲಿ, ಕಲಿಯುಗದ ಅಲ್ಲಮಪ್ರಭು."

"ಸಿಟ್ಟು ಮಾಡ್ಕೋಬ್ಯಾಡ ಧಣಿ–ತಮಾಸಿಗಂದೆ."

"ನಮಗೇನು ಮದುವೆ ಊಟಾ ಹಾಕುವುದಿಲ್ಲವೇನಯ್ಯ?"

ಎಂದು ಭೀಮಾಚಾರಿ ಕೇಳಿದ.

"ಮದುವೆಗೆ ನೀವೆಲ್ಲಾ ಬರುತ್ತೀರಲ್ಲಾ."

"ನೋಡೋಣಪ್ಪ—ಪುರಸತ್ತು ಆಗಬೇಕಲ್ಲ."

"ಮದುವೆಗೆ ನೀವು ಬರದಿದ್ದರೆ ನಾನು ಪುನಃ ಈ ಊರಿಗೇ ಕಾಲಿಡುವುದಿಲ್ಲ."

"ನಾನು, ಭೀಮಾಚಾರಿ, ಖಂಡಿತ ಬರುತ್ತೀವಿ ಶಾಂತರುದ್ರಾ—ನಮಗೆ ಒಳ್ಳೆ ಉಡುಗೊರೆ ಕೊಡಿಸಬೇಕು ನೋಡು."

"ಸುಬ್ರಹ್ಮಣ್ಯ............"

"ನಾನೆಲ್ಲಿ ಬರೋದಿಕ್ಕಾಗತ್ತಪ್ಪಾ........ಮನೆ ಸ್ಥಿತಿ ನಿನಗೆ ಗೊತ್ತೇ ಇದೆ."

"ಹೋಗಲಿ. ಶಂಕರನ್ನಾದರೂ ಕಳಿಸಿಕೊಡು."

"ಮಹಾರಾಯನ ಹಾಗೆ ಕರೆದುಕೊಂಡು ಹೋಗು. ಬೇಡವೆಂದವರು ಯಾರು? ಅವನು ಕಾಲೇಜ್ ಸೇರೋ ಗಲಾಟೇಲಿ ಇದ್ದಾನೆ. ಬರುತ್ತಾನೋ ಇಲ್ಲವೊ?"

"ಹೊಸಪೇಟೆಗೆ ಹೋಗಿ ದೊಡ್ಡ ಸಾವಕಾರರ ಅಳಿಯನಾದ ಮೇಲೆ ನಮ್ಮನ್ನು ಮರೆತುಬಿಡುತ್ತೀಯಾ ಶಾಂತರುದ್ರಾ."

ಎಂದು ಪರಮಾನಂದಯ್ಯ ಕೇಳಿದ.

"ಯಾಕಯ್ಯ ಮರೀಬೇಕು."

"ನಾಳೆ ನಿನ್ನ ನಂಬ್ಕೊಂಡು ನಾವು ಹೊಸಪೇಟೆಗೆ ಕಂಪೆನಿ ತೆಗೆದುಕೊಂಡು ಬಂದಾಗ 'ನೀವು ಯಾರೋ ಗುರುತಿಲ್ಲ' ಎಂದು ನೀನು ಹೇಳಿಬಿಟ್ಟರೆ ಗತಿಯೇನು ಎಂದು ಯೋಚಿಸುತ್ತಾ ಇದ್ದೆ."

"ಶಾಂತರುದ್ರಾ ಅಂಥಾವನಲ್ಲಾ ಕಣೋ ದಾಸರೀ"

ಎಂದು ಭೀಮಾಚಾರಿ ಗೌರವ ವಕೀಲಿ ಮಾಡಿದ.

ಶಾಂತರುದ್ರ ಹೊಸಪೇಟೆಗೆ ಹೊರಡುವ ಮುನ್ನ ಕ್ಲಬ್ಬಿನ ಮಿತ್ರರಿಗೆಲ್ಲಾ ಔತಣ ಮಾಡಿಸಬೇಕೆಂದು ನಿರ್ಣಯವಾಯಿತು.

ಮಾರನೆಯ ದಿನ ಶಂಕರನನ್ನು ಹುಡುಕಿಕೊಂಡು ಬಂದು ತಾನು ಹೊಸಪೇಟೆಗೆ ಹೋಗುವ ವಿಷಯ ತಿಳಿಸಿ,

"ಸುಬ್ಬಣ್ಣ ಈ ವಿಷಯ ನಿನಗೆ ಹೇಳಲೇ ಇಲ್ಲವೇ?" ಎಂದು ಕೇಳಿದ.

"ಬೆಳಿಗ್ಗೆಯಿಂದ ಅಣ್ಣನ ಭೆಟ್ಟಿಯಾಗಿಲ್ಲ. ಆಗಿದ್ದರೆ ತಿಳಿಸು

ತ್ತಿದ್ದ. ನಾನೂ ಮೈಸೂರಿಗೆ ಹೊರಟಿದ್ದೀನಿ ಶಾಂತರುದ್ರೂ."

"ನೀನು ನನ್ನ ಮದುವೆಗೆ ಬರುವ ಹಾಗಿಲ್ಲ."

"ಹೇಗೆ ಬರಲಿ ಹೇಳು. ಕಾಲೇಜು ಹಾಸ್ಟಲು, ಎಲ್ಲಾ ಹೊಸದು. ಅವುಗಳಿಗೆ ಹೊಂದಿಕೊಳ್ಳುವುದಕ್ಕೇ ನನಗೆ ಸ್ವಲ್ಪ ಕಾಲ ಹಿಡಿಯುತ್ತದೆ."

"ನವರಾತ್ರಿ ರಜಕ್ಕಾದರೂ ಹೊಸಪೇಟೆಗೆ ಬಾ. ಹಂಪೆ, ತುಂಗ ಭದ್ರಾ ಪ್ರಾಜೆಕ್ಟ್ ಎಲ್ಲಾ ನೋಡಿದಂತಾಗುತ್ತದೆ."

"ನೀನು ಕರೆಯದಿದ್ದರೂ ನಾನೇ ಬರುತ್ತಿದ್ದೆ. ಹಂಪೆ ನೋಡ ಬೇಕೆಂದು ಬಹಳ ದಿವಸಗಳಿಂದ ಆಸೆಪಡುತ್ತಿದ್ದೇನೆ."

"ನಾನು ಎಲ್ಲಾ ವ್ಯವಸ್ಥೆಮಾಡಿ ಹಂಪೆ ತೋರಿಸುತ್ತೇನೆ ಶಂಕ್ರೂ. ಮನೆಯಲ್ಲಿ ಹೇಗೂ ಮಾವನವರದು ಎರಡು ಕಾರಿದೆ........ಮೈಸೂರಿ ನಿಂದ ಕಾಗದ ಬರೆಯುತ್ತಿರು."

"ಅಗತ್ಯವಾಗಿ. ನೀನು ಉತ್ತರ ಬರೆಯಬೇಕಲ್ಲ."

"ಬರೆದೇ ಬರೆಯುತ್ತೇನೆ....ನಿಜವಾಗಿ ನಿಮ್ಮೆಲ್ಲರನ್ನು ಬಿಟ್ಟು ಹೊಸಪೇಟೆಗೆ ಹೋಗುವುದಕ್ಕೆ ನನಗೆ ಸ್ವಲ್ಪವೂ ಇಷ್ಟವಿಲ್ಲ ಶಂಕ್ರೂ.... ತಂದೆಯವರ ಬಲವಂತಕ್ಕೆ ಈ ಕಾಡುಕಪಿ ಕಟ್ಟಿಕೊಳ್ಳಬೇಕಾಗಿದೆ."

"ಹಾಗನ್ನಬಾರದು ಶಾಂತರುದ್ರೂ. ರೂಪ ಬಿಸಿಲುಗುದುರೆಯಂತೆ ಅಸ್ಥಿರ. ಈಗ ಹೊಳೆದು ಸುಳಿದು ಮರುಕ್ಷಣವೇ ಮಾಯವಾಗುತ್ತದೆ. ಗುಣದಲ್ಲಿ ರೂಪವನ್ನು ಹುಡುಕಬೇಕು. ನಿನ್ನ ಕೈ ಹಿಡಿಯುವಾಕೆಯನ್ನು ನೀನೇ ತೆಗಳುವುದು ನ್ಯಾಯವೇ ?"

"ದೂರ ನಿಂತು ನೋಡುವವರಿಗೆ ಅದರ ಸಂಕಟ ಹೇಗಯ್ಯ ಗೊತ್ತಾ ಗತ್ತೆ. ಬೆಳಗಾಗೆದ್ದು ರಾತ್ರಿಯ ವರೆಗೆ ಶೂರ್ಪನಖಿ ಮುಖ ನೋಡಿ ಕೊಂಡು ಕಾಲ ಹಾಕಬೇಕಲ್ಲ–ನನ್ನ ಅವಸ್ಥೆ ಯೋಚಿಸು."

"ನೀನು ರೂಪ ಎಂದುಕೊಂಡಿರುವುದೂ ಕಣ್ಣಿನ ಭ್ರಾಂತಿ ಶಾಂತ ರುದ್ರೂ. ನೀಗ್ರೋ ಹೆಂಗಸರು ನಮ್ಮ ಕಣ್ಣಿಗೆ ರೂಪವತಿಯರಲ್ಲ ವಷ್ಟೇ–ಆದರೆ ನೀಗ್ರೋಗಳ ಕಣ್ಣಿಗೆ ಅವರೇ ರಂಭೆಯರು. ಇಂಗ್ಲಿಷಿ ನವರ ಸುಣ್ಣದ ಮೈ ನೋಡಿ ನಾವು ಅಸಹ್ಯಪಡುತ್ತೇವೆ. ಅವರ ರೂಪ ವರ್ಣಿಸಿ ಷೆಲ್ಲಿ, ಕೀಟ್ಸ್ ಬರೆದಿರುವ ಪದ್ಯಗಳನ್ನು ಓದಿದರೆ ಅಂಥ

ರೂಪವತಿಯರು ಜಗತ್ತಿನಲ್ಲೇ ಇಲ್ಲವೆಂದೆನಿಸುತ್ತದೆ.—ಅತೃಪ್ತಿಯನ್ನೇ ಜೀವನದ ಆರಾಧ್ಯದೈವ ಮಾಡಿಕೊಂಡಿರುವ ನಾವು ತೃಪ್ತಿ ಪಟ್ಟುಕೊಳ್ಳು ವುದೊಂದು ಮಹಾಪರಾಧ ಎಂದು ಭಾವಿಸಿಕೊಂಡಿದ್ದೇವೆ."

ಶಂಕರನ ವಿವರಣೆ ಶಾಂತರುದ್ರನನ್ನು ಆಶ್ಚರ್ಯಚಕಿತನನ್ನಾಗಿ ಮಾಡಿತು. 'ವಯಸ್ಸುಮೀರಿದ ಅನುಭವ ಇವನಿಗೆಲ್ಲಿಂದ ಬಂತು' ಎಂದು ಶಾಂತ್ರರುದ್ರ ಕುತೂಹಲಗ್ರಸ್ತನಾದ.

"ನೀನು ಕಾಲೇಜ್ ವ್ಯಾಸಂಗ ಮುಗಿಸಿದ ಮೇಲೆ ಏನು ಮಾಡ ಬೇಕೆಂದು ನಿಶ್ಚಯಿಸಿರುವೆ ಶಂಕರೂ" ಎಂದು ಶಾಂತರುದ್ರ ಕೇಳಿದ.

"ಅದು ನಾಲ್ಕು ವರ್ಷದ ತರುವಾಯದ ಮಾತು."

"ನಾಲ್ಕು ವರ್ಷ ಕಳೆದ ಮೇಲೆ ಏನುಮಾಡುವುದೆಂದು ಈಗಲೇ ಯೋಚಿಸುವುದು ಒಳ್ಳೆಯದಲ್ಲವೇ ?"

"ಒಳ್ಳೆಯದು. ನಾನು ಯೋಚಿಸಿಯೂ ಇದ್ದೇನೆ. ಹೊಸ ಮಾದರಿಯಲ್ಲಿ ಒಂದು ಶಾಲೆ ತೆಗೆಯ ಬೇಕೆಂಬ ಮನಸ್ಸಿದೆ. ಅಣ್ಣನ ಮಗನಿಗೆ ನಾನೇ ವಿದ್ಯಾಭ್ಯಾಸ ಮಾಡಿಸುತ್ತೇನೆಂದು ಮೊನ್ನೆ ಅತ್ತಿಗೆಗೂ ಹೇಳಿದೆ."

"ಸ್ಕೂಲ್ ತೆಗೆದರೆ ಸಂಪಾದನೆಯಾಗುತ್ತದೇನಯ್ಯಾ?"

"ಸಂಪಾದನೆಗಾಗಿ ಸ್ಕೂಲ್ ತೆಗೆಯುತ್ತಿಲ್ಲ ಶಾಂತರುದ್ರಾ. ನಮ್ಮ ಸ್ಕೂಲುಗಳಿಂದು ಮನಸ್ಸಿನ ಸೆರೆಮನೆಗಳಾಗುತ್ತಿವೆ. ಇದಕ್ಕೊಂದು ಪರಿ ಹಾರ ಕಂಡುಹಿಡಿಯಬೇಕಾದುದಾವಶ್ಯಕ ಎಂದು ನನ್ನ ಮನಸ್ಸಿಗೆ ನಂಬಿ ಕೆಯುಂಟಾಗಿದೆ."

"ಒಳ್ಳೆಯದಪ್ಪಾ. ದೇವರು ನಿನಗೆ ಹೇಗೆ ಬುದ್ಧಿ ಕೊಡುತ್ತಾನೋ ಹಾಗೆ ಮಾಡು."

ಶಂಕರ ಯಾವುದೋ ಚಿಂತೆಯಲ್ಲಿ ಮುಗ್ನನಾಗಿದ್ದ. ಶಾಂತರುದ್ರ ನನ್ನು ಕೇಳಲು ತುಟಿಯ ವರೆಗೆ ಬಂದ ಮಾತು ಅಲ್ಲಿಯೇ ನಿಲ್ಲುತ್ತಿತ್ತು.

"ಏನೋ ಹೇಳಬೇಕೆಂದು ಹವಣಿಸುತ್ತಿರುವೆಯಲ್ಲಾ ಶಂಕರೂ?"

"ಹೇಳಬೇಕೆಂದಲ್ಲ—ಕೇಳಬೇಕೆಂದು."

"ಅಗತ್ಯವಾಗಿ ಕೇಳು."

"ಸತ್ಯ ನುಡಿಯುವಿಯಷ್ಟೆ?"

"ಕೋರ್ಟಿನಲ್ಲಿ ಕೇಳುವ ಹಾಗೆ ಕೇಳುತ್ತಿರುವೆಯಲ್ಲಪ್ಪ."

"ದಯವಿಟ್ಟು ಹಾಸ್ಯ ಮಾಡಬೇಡ ಶಾಂತರುದ್ರಾ—ಇದು ಬಹಳ ಮುಖ್ಯವಾದ ವಿಷಯ."

"ಗಂಭೀರವಾಗಿರುತ್ತೀನಿ ಹೇಳಪ್ಪಾ."

"ಅಣ್ಣನ ಹಿಂದೆ ಅವನನ್ನು ಚರ್ಚಿಸುವುದು ನ್ಯಾಯವಲ್ಲ—ಅದೂ ಅವನ ಪರಮಸ್ನೇಹಿತನೊಡನೆ—ಇದು ಉದಾಸೀನ ಮಾಡುವ ವಿಷಯ ವಲ್ಲವಾದ್ದರಿಂದ ಕೇಳಬೇಕಾಗಿದೆ."

"ಏನಾಗಿದೆ?"

"ಅಣ್ಣನ ನಡತೆಯಲ್ಲಿ ಅದ್ಭುತ ಮಾರ್ಪಾಟಾಗಿದೆ. ಸ್ವಂತ ಮನೆ ಈಗವನಿಗೆ ಶತ್ರುಗೃಹವಾಗಿದೆ. ಮನೆಯಲ್ಲಿ ಒಂದು ಗಂಟೆ ನಿಲ್ಲಲೂ ಅವನಿಗೆ ಮನಸ್ಸಿಲ್ಲ."

"ದೊಡ್ಡ ಜವಾಬ್ದಾರಿ ಹೊತ್ತಿರುವ ಮನುಷ್ಯ ಹಾಗಿರುವುದರಲ್ಲಿ ಏನು ಆಶ್ಚರ್ಯ."

"ಅತ್ತಿಗೆ ಈಗ ತುಂಬಿದ ಜೀವ—ನಿತ್ಯ ಆಕೆ ಕಣ್ಣೀರಿನಲ್ಲಿ ಕೈತೊಳೆಯುತ್ತಿದ್ದಾಳೆ."

"ಅವರನ್ನು ದಂಡಿಸುತ್ತಾನೆಯೇ?"

"ಇಲ್ಲ. ಅದಾದರೂ ಮಾಡಿದ್ದರೆ ಚೆನ್ನಾಗಿತ್ತು. ದಂಡಿಸುವಷ್ಟಾದರೂ ಆಸಕ್ತಿ ಈ ಮನುಷ್ಯನಿಗೆ ತನ್ನ ವಿಷಯದಲ್ಲಿದೆ ಎಂದವರು ಭಾವಿಸಬಹುದಾಗಿತ್ತು. ಅವನಿಗಿಂದು ಯಾರೂ ಬೇಕಾಗಿಲ್ಲ—ತಾಯಿಯನ್ನು ದಿವಸಗಟ್ಟಳೆ ಮಾತನಾಡಿಸುವುದಿಲ್ಲ. ಇದರ ಕಾರಣವೇನು ಬಲ್ಲೆಯಾ ?"

"ನನಗೇನೂ ಗೊತ್ತಿಲ್ಲಪ್ಪ. ಮನೆ ವಿಷಯ ಸಾಮಾನ್ಯವಾಗಿ ಅವನು ಯಾರಲ್ಲಿಯೂ ಬಾಯಿಬಿಡುವುದಿಲ್ಲ."

"ಅವನ ಬಗ್ಗೆ ಹುಟ್ಟಿರುವ ವದಂತಿ ನಿನ್ನ ಕಿವಿಗೂ ಬಿದ್ದಿರಬಹುದು."

"ಏನದು?"

"ಪರಮಾನಂದಯ್ಯನ ಮಗಳು ಮಂಗಳೆಗೂ ಅವನಿಗೂ ಸಂಬಂಧ ವಾಗಿದೆಯೆಂದು."

"ನಿಜವಾಗಿ ಆ ವಿಷಯ ನನಗೇನೂ ಗೊತ್ತಿಲ್ಲ ಶಂಕರ."

"ನೀನೂ ನಿತ್ಯ ಪರಮಾನಂದಯ್ಯನ ಮನೆಗೆ ಹೋಗಿ ಬರುತ್ತೀ?"

"ಹೌದು—ಸಂಜೆ ಒಂದೆರಡು ಗಂಟೆ–ಇಸ್ಪೇಟ್ ಆಡುವುದಕ್ಕೆ."

"ಮಂಗಳೆ ಮೈ ತುಂಬ ಒಡವೆಗಳಾಗಿರುವುದು ನೀನೂ ಗಮನಿಸಿರ ಬಹುದು."

"ಗಮನಿಸಿದ್ದೇನೆ."

"ಪರಮಾನಂದಯ್ಯನಿಗೆ ಯಾವುದಾದರೂ ಗುಪ್ತಧನ ಸಿಕ್ಕಿತೇನು ?"

"ಸಿಕ್ಕಿದರೆ ತಾನೆ ಅವನು ಬಾಯಿಬಿಡುತ್ತಾನೇನಯ್ಯಾ?"

"ಅವನು ಬಾಯಿಬಿಡಬೇಕಾಗಿಯೇ ಇಲ್ಲ. ಅವನ ಹೆಂಡತಿ, ಮಗಳು ಊರಿನಲ್ಲಿ ಸಾರಿಕೊಂಡು ಬರುತ್ತಿದ್ದಾರೆ."

"ಈ ವಿಷಯ ನಿನ್ನ ಅತ್ತಿಗೆಯ ಕಿವಿ ಮುಟ್ಟಿದೆಯೆ?"

"ಮುಟ್ಟಿದೆಯೋ ಇಲ್ಲವೋ ನಾನು ಖಂಡಿತವಾಗಿ ಹೇಳಲಾರೆ. ಜನ ಆಡಿಕೊಳ್ಳುತ್ತಿರುವುದು ನಿಜವೇ? "

"ಜನದ ಬಾಯಿಗೆ ಅಡ್ಡಿಯೇನಿದೆ ಶಂಕರಾ."

"ದಯವಿಟ್ಟು ಸತ್ಯಸಂಗತಿ ಹೇಳು ಶಾಂತರುದ್ರಾ. ಸ್ನೇಹಿತರಾದ ನೀವೇ ಅವನನ್ನು ಸನ್ಮಾರ್ಗಕ್ಕೆ ತಿರುಗಿಸದಿದ್ದರೆ ಮತ್ತೆ ಯಾರು ಮಾಡಲು ಶಕ್ಯ. ಸ್ನೇಹಧರ್ಮ ಕೆಲವು ಕರ್ತವ್ಯಗಳನ್ನೂ ಹೆಗಲ ಮೇಲೆ ಹೊರೆಸುತ್ತದೆ. ಸ್ನೇಹಿತ ಮಿತ್ರನಷ್ಟೇ ಅಲ್ಲ—ಗುರುವೂ ಆಗ ಬೇಕಾಗುತ್ತದೆ."

"ನನಗೇ ಖಚಿತವಿಲ್ಲದ ವಿಷಯದಲ್ಲಿ ನಾನು ಹೇಗೆ ಬಾಯಿ ಹಾಕಲಿ ಶಂಕರಾ. ಒಂದು ವೇಳೆ ಜನರಾಡಿಕೊಳ್ಳುವುದು ನಿಜ ವಾಗಿದ್ದರೆ ಸುಬ್ರಹ್ಮಣ್ಯ ನಮ್ಮ ಮಾತು ಕೇಳಿ ಸರಿಯಾದ ದಾರಿಗೆ ಬರುತ್ತಾನೆಂದು ನಿರೀಕ್ಷಿಸುವುದಾದರೂ ಹೇಗೆ?"

"ಪ್ರಯತ್ನ ಮಾಡಬಹುದಲ್ಲ!"

"ಪ್ರಯತ್ನ ಮಾಡುವುದಕ್ಕೆ ನಾನು ಸಿದ್ಧನಾಗಿದ್ದೇನೆ. ಆದರೆ ಅವಸರಪಟ್ಟು ಸುಬ್ರಹ್ಮಣ್ಯನ ವೈಷಮ್ಯ ಬೆಳಸಿಕೊಳ್ಳಲು ಇಷ್ಟಪಡುವುದಿಲ್ಲ."

ಶಂಕರ ನಿರಾಸೆಗೊಂಡ. ಶಾಂತರುದ್ರ ಮೇಲೆ ತೋರಿಸಿಕೊಳ್ಳುತ್ತಿದ್ದುದಕ್ಕಿಂತಲೂ ಹೆಚ್ಚಾಗಿ ಅವನಿಗೆ ನಿಜ ಸಂಗತಿ ತಿಳಿದಿದೆಯೆನ್ನುವುದಂತೂ ಸ್ವತಃಸ್ಸಿದ್ಧವಾಗಿತ್ತು. ಸುಬ್ರಹ್ಮಣ್ಯನನ್ನು ಅವನು ಬಿಟ್ಟುಕೊಡದೆ ಮಾತನಾಡುತ್ತಿದ್ದ. ಇನ್ನು ಹೆಚ್ಚು ಕೆಣಕಿ ಪ್ರಯೋಜನವಿಲ್ಲವೆಂದು ಶಂಕರ ಸುಮ್ಮನಾದ.

# ೧೩

ಶಂಕರ ಪ್ರಯಾಣ ಸನ್ನಾಹ ಮಾಡತೊಡಗಿದ. ಮಗ ಸ್ವಲ್ಪ ದಿನವಾದರೂ ಹತ್ತಿರವಿಟ್ಟುಕೊಂಡು ತಿನ್ನಲನುಕೂಲವಾಗುವಂತೆ ದೊಡ್ಡ ಪ್ರಮಾಣದಲ್ಲಿಯೇ ಪಾರ್ವತಮ್ಮ ತಿಂಡಿಗಳನ್ನು ಮಾಡತೊಡಗಿದರು. ಚಕ್ಕುಲಿ, ಕೋಡಬಳೆ, ರವೇಉಂಡೆ, ಪುಳ್ಳಂಗಾಯಿ ಉಂಡೆ, ಹುರಿಗಾಳು, ಹುಳಿಯವಲಕ್ಕಿ, ಕಾಯಿ ಹುರಿಟ್ಟು ಮೊದಲಾದ ಹಳ್ಳಿಯ ಖಾದ್ಯ ಪದಾರ್ಥಗಳ ತಯಾರಿ ಭರದಿಂದ ಸಾಗಿತು.

ಶ್ರಮವಾಗದ, ಸಣ್ಣಪುಟ್ಟ ಕೆಲಸಗಳನ್ನು ಪಾರ್ವತಮ್ಮನವರು ಗೌರಿಗೆ ಒಪ್ಪಿಸುತ್ತಿದ್ದರು. ಕೊಬ್ಬರಿ ಹೆಚ್ಚುವುದು, ಕಡಲೆಕಾಯಿ ಆರಿಸಿಕೊಡುವುದು, ಅವಲಕ್ಕಿ ಶುದ್ಧಿ ಮಾಡಿಕೊಡುವುದು ಮೊದಲಾದ ಕೆಲಸಗಳಲ್ಲಿ ಗೌರಿ ಉತ್ಸಾಹ ತೋರಿಸುತ್ತಿದ್ದಳು. ಅವಳು ಕೆಲಸ ಮಾಡುವುದನ್ನು ನೋಡಿ ಶಂಕರ,

"ಅತ್ತಿಗೆ ಕೈಯಲ್ಲೇಕೆ ಕೆಲಸಮಾಡಿಸುತ್ತೀಯಮ್ಮ" ಎನ್ನುತ್ತಿದ್ದ.

ಗೌರಿ ನಕ್ಕು,

"ಇಷ್ಟು ಕೆಲಸ ಮಾಡಿದರೇನೂ ಆಯಾಸವಾಗುವುದಿಲ್ಲ ಶಂಕರಾ" ಎನ್ನುತ್ತಿದ್ದಳು. ಶಂಕರ ಹೊರಗೆ ಹೋದ ಮೇಲೆ ಅತ್ತೆಯ ಕಡೆ ತಿರುಗಿ,

"ಶಂಕರ, ನನ್ನ ಮೈದುನನೋ ಮಗನೋ ಎಂದು ಅನುಮಾನ ಬರುತ್ತದೆ ಅತ್ತೆ. ನನಗಾಗಿ ಎಷ್ಟು ಕನಿಕರ ತೋರಿಸುತ್ತಾನೆ."

"ನೀನು ಹೇಳುವುದು ನಿಜ ಗೌರಿ. ಶಂಕರ ಎಲ್ಲಾ ಹುಡುಗರ ಹಾಗಲ್ಲ. ಅವನದು ತುಂಬ ಹೆಂಗರುಳು."

"ಶಂಕರ ಬಸ್ಸಿಗೆ ಹೋಗುವ ಹೊತ್ತಿಗಾದರೂ ಇವರು ಮನೆಗೆ ಬರುತ್ತಾರೋ ಬರುವುದೇ ಇಲ್ಲವೋ!"

"ಬರಬಹುದು. ತಮ್ಮನ್ನ ಸುಬ್ಬು ಪ್ರೀತಿಸ್ತಾನೆ [illegible]ಣೇ."

"ಹೌದತ್ತೇ—ಅವರ ಮನಸ್ಸು ಒಳ್ಳೆಯದು—ನನ್ನ ಗ್ರಹಬಲ ಒಳ್ಳೆಯದಲ್ಲ ಅಷ್ಟೇ."

"ನಿನ್ನ ಗ್ರಹಬಲವೇನಾಗಿದೆ ?"

"ಏನಾಗಿದೆಯೆಂದು ನಿಮಗೆ ನಾನು ಹೊಸದಾಗಿ ಹೇಳಬೇಕೇ ?"

"ಈ ತಿರುಗುಗಾಲು ತಿಪ್ಪನ್ನ, ನಾಳೆ ಹುಟ್ಟೋ ಮಗ ಬೇಡಿ ಹಾಕಿ ಎಳೆದುಕೊಂಡು ಬರುತ್ತಾನೆ ಸುಮ್ಮನಿರು."

ಅತ್ತೆಯ ಹಾರೈಕೆ ನಿಜವಾಗಲೆಂದು ಗೌರಿ ಮನಃಪೂರ್ವಕವಾಗಿ ಹಾರೈಸಿದಳು.

ಶಂಕರ ಹೊರಟು ಹೋಗುವುದು ನಿಂಗವ್ವನಿಗೆ ಅಪಾರ ವ್ಯಥೆಯನ್ನುಂಟುಮಾಡಿತ್ತು. ತಾನು ಕಣ್ಣಲ್ಲಿ ನೀರು ಹಾಕುವುದನ್ನು ಕಂಡರೆ ಅಮ್ಮಾವರು ಎಲ್ಲಿ ನೊಂದುಕೊಳ್ಳುವರೋ ಎಂದು ದುಃಖ ನುಂಗಿಕೊಳ್ಳುವಳು. ಶಂಕರನನ್ನು ಹತ್ತಿರ ಕರೆದು ಕೂಡಿಸಿಕೊಂಡು ಅವನ ತಲೆ ನೇವರಿಸಿ ಮೈದಡವಿ, ಕೆನ್ನೆ ಮುಟ್ಟಿ ಮೂಕ ಪಶುವಿನಂತೆ ತನ್ನ ಮಮತೆಯನ್ನೆರೆಯುವಳು.

"ಮೈಸೂರಾಗೆ ಊಟಕ್ಕೇನು ಮಾಡ್ತೀ ಅಪ್ಪಣ್ಣೌ."

"ಅಲ್ಲಿ ಊಟಕ್ಕೇನೂ ಕೊರತೆಯಿಲ್ಲ ನಿಂಗವ್ವ! ದೊಡ್ಡ ಹಾಸ್ಟಲಿದೆ. ಸೊಗಸಾದ ಊಟ ಹಾಕುತ್ತಾರೆ."

"ಮೈಸೂರು ನಮ್ಮೂರಿಗಿಂತ ಹೊಡ್ಡದಾ!"

"ನಮ್ಮೂರು ಒಂದು ಹಳ್ಳಿ—ಮೈಸೂರು ದೊಡ್ಡ ನಗರ."

"ಹಾದಿ ತುಂಬ ಮೋಟಾರಂತಲ್ಲಾ \ಶಂಕರಪ್ಪ."

"ದೊಡ್ಡ ಊರು ಅಂದ ಮೇಲೆ ಮೋಟಾರುಗಳಿಲ್ಲದಿರುತ್ತವೆಯೇ!"

"ಹಾದಿ ಬದೀಲೇ ಓಗು ಅಪ್ಪಣ್ಣೌ. ಮೋಟಾರು ಬಿಡೋರು ಭೋ ಕೆಟ್ಟ............ಮಕ್ಕಳು. ಆವರ ದಿಮಾಕೇ ದಿಮಾಕು. ಹಾದಿಯೆಲ್ಲಾ ಆವರಪ್ಪನ ಜಾಗೀರಿ ಅಂತಾ ತಿಳ್ಕೊಂಡವ್ರೆ."

"ದೊಡ್ಡ ಊರುಗಳಲ್ಲಿ ಅವರ ದಿಮಾಕು ನಡೆಯವುದಿಲ್ಲ ನಿಂಗವ್ವ. ಮೋಟಾರಿನವರಿಗೆ ಪೋಲೀಸಿನೋರ ಹೆದರಿಕೆ ಬಹಳ."

"ಮತ್ತೆ ಯಾವಾಗ ಬತ್ತೀ?"

"ನವರಾತ್ರಿ ರಜಕ್ಕೆ ಬರುತ್ತೇನೆ."

"ಮಧ್ಯ ಬರಾಕೆ ಆಯಾಕಿಲ್ವಾ?"

"ಶನಿವಾರ, ಭಾನುವಾರ ರಜಾ ಇರತ್ತೆ—ಬಂದು ಹೋಗ ಬಹುದು."

"ನವರಾತ್ರಿ ತನ್ಕ ಅಲ್ಲಿರಬೇಡ ಅಪ್ಪಣ್ಣಿ—ಮಧ್ಯ ಬಂದು ಓಗು. ಅಮ್ಮಾವರು ಭೋ ನೆನಸ್ತಾರೆ."

"ನೀನು ನೆನಸಲ್ಲವೇ ನಿಂಗವ್ವ."

"ನಂದೇನು ಬುಡು—ಅಮಾವ್ರ ಕಣ್ಣಾಗೆ ನೀರು ಬಂದ್ರೆ ನಂಗೆ ತಡೆಯೋಕೆ ಆಯಾಕಿಲ್ಲಪ್ಪ."

"ನೀನು ಇಲ್ಲಿರೋದೇ ನನಗೆ ಧೈರ್ಯ ನಿಂಗವ್ವ—ನೀನಿಲ್ಲದಿದ್ದರೆ ಅಮ್ಮನನ್ನು ಬಿಟ್ಟು ನಾನು ಮೈಸೂರಿಗೆ ಹೋಗುತ್ತಲೇ ಇರಲಿಲ್ಲ."

"ಆ ತಾಯಿಗೆ ನಾನೇನು ಮಾಡಿವ್ನಿ ಸಂಕ್ರಪ್ಪ......ನನ್ನಂತೆ ಮುಕ್ಕನ್ನೂ ಮಗಳೂಂತ ಬಾನಿಸ್ತಾರೆ. ಅಮ್ಮಾವ್ರು ಭೋ ಕಷ್ಟ ಕಂಡವ್ರೆ—ದುಕ್ಕ ಉಂಡವ್ರೆ. ನೀನೂ ಸುಬ್ಬಪ್ಪ ಚಂದಾಕಿದ್ರೆ ಅದೇ ಸುಕ ಅವರಿಗೆ. 'ಸುಬ್ಬಪ್ಪನ ಪುಣ್ಯ ಚೆನ್ನಾಗಿತ್ತು ಕಣೇ ನಿಂಗಿ—ಒಳ್ಳೇ ಹೆಡ್ತಿ ಅವನಿಗೆ ಚಿಕ್ಕಿದಳು—ಅಂಗೇ, ನಾನು ಕಣ್ಮುಚ್ಕೋದ್ರಾಗ ಸಂಕ್ರೂಗೂ ಒಳ್ಳೇ ಉಡುಗಿ ನೋಡಿ ಲಗ್ಣ ಮಾಡ್ಬುಡ್ಬೇಕು' ಅಂತಾರೆ. 'ಬುಡ್ರವ್ವಾ—ಈಕಲೇ ಏನವಸರ. ಸಂಕ್ರಪ್ಪ ಚಂದಾಕಿ ಓದಿ ದೊಡ್ಡ ಚಾಕರೀಗೆ ಬರ್ಲಿ' ಎಂತಾ ನಾನಂದರೆ 'ನನ್ನ ಜೀವ ಸಾಸ್ವತವಾ ನಿಂಗವ್ವ. ಕೈಕಾಲು ಕಣ್ಣು ಗಟ್ಟಿ ಇರೋವಾಗ್ಲೆ ಸಂಕ್ರೂ ಲಗ್ಣ ಮಾಡಿದ್ರೆ ಮನ್ಸು ನಿರಾಳ ಆಗ್ತೈತೆ' ಅಂತಾರೆ.—ಸುಬ್ಬಪ್ಪಗಂತೂ ಈಗ ಯಾವ್ದೂ ಬೇಕಾ ಗಿಲ್ಲ. ಗೌರವ್ವ ಪಾಪ ಒಂದೇ ಸಮನೆ ಕೊರಗ್ತೈತೆ. ಆಯಪ್ಪಂಗೆ ಯಾವ ದೆವ್ವ ಬಂದು ಬಡ್ಕೊಂಡೈತೋ ಕಾಣನಪ್ಪಾ."

"ಅಣ್ಣನ ವಿಷಯ ನಾನು ಶಾಂತರುದ್ರೂ ಹತ್ತಿರ ಮಾತಾಡಿದೆ ನಿಂಗವ್ವ—ಅಂಥಾದ್ದೇನೂ ಇಲ್ಲವೆಂದು ಅವನು ಹೇಳಿದ."

"ಕಳ್ಳ—ಐನಾತಿ ಕಳ್ಳ—ಅವರೆಲ್ಲಾ ಕಳ್ರು ಸಂಕ್ರಪ್ಪ—ಸುಬ್ಬಪ್ಪನ ತಾವ ಕಾಸು ಕೀಳಾಕೆ ಎಲ್ಲಾರೂ ಷಾಮೀಲಾಗವ್ರೆ. ಘರಮಾನಂದ ಯ್ಯನ್ನ ಬೀದಿಗೆಳ್ಕೊಂಡು ಬಂದು ಪರಕೆ ತಕ್ಕೊಂಡು ಗಾಸಾರ ಬಿಡಿಸ್ಬೇ ಕೆಂದಿದ್ದೆ—ಅಮ್ಮಾವ್ರ ಮರ್ವಾದೆಗೋಸ್ಕ್ರ ಅಲ್ಮುಡಿ ಕಚ್ಕೊಳ್ಳ ಬೇಕಾಯ್ತು."

"ಇದು ನಿಜವೆಂದು ನಂಬುವೆಯಾ ನಿಂಗವ್ವ."

"ಯಾರಿಗೂ ಕಾಣಬಾರದೊಂತೆ ಬೆಕ್ಕು ಕಣ್ಮುಚ್ಕೊಂಡು ಆಲು ಕುಡೀತ್ತೈತಂತೆ. ಪರಮಾನಂದಯ್ಯನ ಮನೆ ತಾವ ಗುಡ್ಲು ಆಕ್ಕೊಂಡವ್ಳೆ ನೋಡು ಗಂಗಿ ಅವಳಿಲ್ಲಾ ಕಂಡವ್ಳೆ. ಸುಬ್ಬಪ್ಪ ಯಾವಾಗಲೂ ಅಲ್ಲೇ ಸಾಯ್ತಾನಂತೆ."

ಯಾವುದನ್ನು ನಂಬದಿರಲು ಶಂಕರ ಸರ್ವಸಾಹಸ ಮಾಡು ತ್ತಿದ್ದನೋ ಆ ಸತ್ಯ-ಅಪ್ರಿಯ ಸತ್ಯ—ಅವನ ಹೃದಯದಲ್ಲಿ ಶೂಲದಂತೆ ನಾಟಿತು.

"ಅಮ್ಮನಿಗೆ ಈ ವಿಷಯ ಗೊತ್ತಿಪೆಯೇ ನಿಂಗವ್ವ."

"ಅವರ ಕಿವಿಗೂ ಬಿದ್ದೈತೆ—ಆದ್ರೆ ಅವರು ನಂಬಾಕಿಲ್ಲ."

"ಇದಕ್ಕೇನು ಮಾಡುವುದು ನಿಂಗವ್ವ."

"ಏನು ಮಾಡೋಕಾಗ್ತೈತಪ್ಪ—ಸುಬ್ಬಪ್ಪ ಸಣ್ಣ ಮಗಾನ, ಉಯ್ಸು ಬಯ್ಸು ಬುದ್ಧಿ ಏಳಾಕೆ. ದೊಡ್ಡ ಗಂಡಸು—ಮನೆ ಯಜ ಮಾನ—ನಾನು ಅಂಗೇ ಮಾಡೋದು, ನೀವ್ಯಾರು ಕೇಳಾಕೆ ಅಂದು ಬಿಟ್ರೆ ಎಲ್ಲಾ ಮುಗ್ದೇ ಹೋಗ್ತೈತಲ್ಲಾ!"

"ಹೌದು ಅದೇ ಧರ್ಮ ಸಂಕಟ."

"ದೇವ್ರ ಮ್ಯಾಕೆ ಬಾರ ಆಕಿ ಸದ್ಯಕ್ಕೆ ಸುಮ್ಕಿರೋದು ಒಳ್ಳೇದು ಸಂಕ್ರಪ್ಪ. ಅಮ್ಮಾವ್ರ ಕಂಡರೆ ಅವನ್ಗೂ ತುಂಬ ಪಿರೀತಿ ಐತೆ-ಒಂದಲ್ಲ ಒಂದಿನ ಅವನೇ ದಾರೀಗೆ ಬತ್ತಾನೆ."

ನಿಂಗವ್ವನ ಧೈರ್ಯ ಶಂಕರನಿಗಿರಲಿಲ್ಲ.

ಸುಬ್ರಹ್ಮಣ್ಯ ತಮ್ಮನನ್ನು ಬೀಳ್ಕೊಡುವುದಕ್ಕೆ ಮನೆಗೆ ಬಂದಿದ್ದ. ಮನೆಗೆ ಬರುವ ಮುನ್ನ ಬಸ್ಸಿನವರಿಗೆ, ಮನೆ ಬಳಿ ಬರಲು ಹೇಳಿಯೂ ಬಂದಿದ್ದ. ಸಾಮಾನು ಹೊತ್ತುಕೊಂಡು ಬಸ್‌ಸ್ಟ್ಯಾಂಡ್ ಬಳಿ ಹೋಗುವ ಕಷ್ಟವಿರಲಿಲ್ಲ.

ಸುಬ್ರಹ್ಮಣ್ಯ ತಮ್ಮನನ್ನೂ ಕರೆದು ಅವನ ಕೈಗೆ ದುಡ್ಡು ಕೊಡುತ್ತಾ,

"ಯಾವುದಕ್ಕೂ ಕೊರತೆ ಮಾಡಿಕೊಳ್ಳಬೇಡ ಶಂಕರೂ. ದುಡ್ಡು

ಬೇಕಾದರೆ ಬರಿ ಕಳಿಸುತ್ತೇನೆ. ರಾತ್ರಿ ತಪ್ಪದೆ ಹಾಲು ಕುಡಿದು ಬೇಗ ಮಲಗಿಕೋ. ಹೆಚ್ಚು ರಾತ್ರಿ ಹೊತ್ತು ಓದಬೇಡ. ಆರೋಗ್ಯ ಚೆನ್ನಾಗಿ ನೋಡಿಕೊಳ್ಳಪ್ಪ. ವಾರಕ್ಕೆ ಎರಡು ಮೂರು ಬಾರಿಯಾದರೂ ತಪ್ಪದೆ ಕಾಗದ ಬರೆಯುತ್ತಿರು."

"ಹಾಗೇ ಆಗಲಣ್ಣ. ನೀನು ಮೈಸೂರಿಗೆ ಯಾವಾಗ ಬರುತ್ತಿ?"

"ಆಗಲಿ ಬರುತ್ತೇನೆ. ಸದ್ಯ ಮನೆ ಬಿಡುವಹಾಗಿಲ್ಲ."

"ಮನೆಯಲ್ಲಿ ಎಲ್ಲರ ಆರೋಗ್ಯದ ವಿಷಯ ನೀನು ವಿವರವಾಗಿ ಬರೆದು ತಿಳಿಸಬೇಕು."

"ತಿಳಿಸುತ್ತೇನೆ."

ದೇವಸ್ಥಾನದ ಬೀದಿಯಲ್ಲಿ ಮೋಟಾರಿನ ಹಾರ್ನ್ ಶಬ್ದವಾಯಿತು.

"ಬಸ್ ಬಂದಿತು." ಎಂದು ಸುಬ್ರಹ್ಮಣ್ಯ ಎಚ್ಚರಿಸಿದ.

ಶಂಕರನ ಸಾಮಾನುಗಳನ್ನೆಲ್ಲಾ ನಿಂಗವ್ವ ಹೊರಗೆ ತಂದಿಟ್ಟಳು. ಪಾರ್ವತಮ್ಮನವರು ತಿಂಡಿಯ ಬುಟ್ಟಿಯನ್ನು ತಂದಿಟ್ಟರು. ಶಂಕರ ಮೊದಲು ತಾಯಿಗೆ ನಮಸ್ಕರಿಸಿದ. ಪಾರ್ವತಮ್ಮನವರು ಅವನ ತಲೆ ನೇವರಿಸಿ "ದೇವರು ಕಾಪಾಡಲಿ" ಎಂದರು.

ಶಂಕರ ಅಣ್ಣನಿಗೆ ನಮಸ್ಕಾರ ಮಾಡಿದಾಗ ಸುಬ್ರಹ್ಮಣ್ಯನ ಕಣ್ಣಲ್ಲಿ ಕೋಡಿ ಹರಿಯಿತು. ತಮ್ಮನನ್ನಪ್ಪಿಕೊಂಡ. ಆ ದೃಶ್ಯ ನೋಡಿದ ಪಾರ್ವತಮ್ಮನವರು, ನಿಂಗವ್ವ ಅವರ ಕಣ್ಣುಗಳಲ್ಲಿ ಆನಂದ ಬಾಷ್ಪಗಳುದುರಿದುವು.

ಗೌರಿ ಒಲ್ಲೆ ಒಲ್ಲೆಯೆನ್ನುತ್ತಿದ್ದರೂ ಶಂಕರ ಅತ್ತಿಗೆಗೆ ನಮಸ್ಕಾರ ಮಾಡಿದ.

ಬಸ್ ಬಂದು ಮನೆಯ ಮುಂದೆ ನಿಂತಿತು. ಕಂಡಕ್ಟರ್ ಸಾಮಾನುಗಳನ್ನೆತ್ತಿ ಟಾಪಿನ ಮೇಲೆ ಹಾಕಿದ. ಡ್ರೈವರ್ ಹಾರ್ನ್ ಮಾಡಿದ. ಬಾಗಿಲ ಬಳಿ ನಿಂತಿದ್ದ ನಿಂಗವ್ವನ ಸಮೀಪಕ್ಕೆ ಶಂಕರ ಬಂದು,

"ಹೋಗಿ ಬರಲೇ ನಿಂಗವ್ವ" ಎಂದ.

ಅಶ್ರು ತುಂಬಿದ ಕಣ್ಣುಗಳನ್ನೆತ್ತಿ ನಿಂಗವ್ವ ಶಂಕರನನ್ನೊಮ್ಮೆ ನೋಡಿದಳು. ಶಂಕರ ಯಾವುದೋ ಮಂತ್ರ ಶಕ್ತಿಗೆ ಸಿಕ್ಕಿದವನಂತೆ

ಬಾಗಿ, ನಿಂಗವ್ವನ ಪಾದಗಳನ್ನು ಮುಟ್ಟಿ ನಮಸ್ಕರಿಸಿದ. ನಿಂಗವ್ವನ ಬಾಯಲ್ಲಿ ಉಸಿರೇ ಹೊರಡಲಿಲ್ಲ. ಸಾಲಭಂಜಿಕೆಯಂತೆ ನಿಂತುಬಿಟ್ಟಳು.

ಡ್ರೈವರ್ ಹಾರ್ನ್ ಕಾಟ ಹೆಚ್ಚಾಯಿತು. ಶಂಕರ ಒಮ್ಮೆ ಎಲ್ಲರನ್ನೂ ನೋಡಿ ಬಸ್ಸಿನಲ್ಲಿ ಹೋಗಿ ಕುಳಿತ. ಪಾರ್ವತಮ್ಮ, ಸುಬ್ರಹ್ಮಣ್ಯ ರಸ್ತೆಗೆ ಬಂದು ನಿಂತು ಬಸ್ಸಿನ ನಿರ್ಗಮನವನ್ನೀಕ್ಷಿಸಿದರು.

ಗೌರಿ, ನಿಂಗವ್ವ ನಿಂತಲ್ಲಿಯೇ ನಿಂತಿದ್ದರು.

ಸ್ವಲ್ಪ ಹೊತ್ತಾಯಿತು. ಬಸ್ಸು ಕಣ್ಮರೆಯಾಗಿತ್ತು. "ಒಳಗಡೆ ನಡೆಯಮ್ಮ—ಬಸ್ ಹೋಯಿತು."

ಎಂದು ಸುಬ್ರಹ್ಮಣ್ಯ ತಾಯಿಯನ್ನೆಚ್ಚರಿಸಿದ.

ಪಾರ್ವತಮ್ಮನವರು ಒಳಕ್ಕೆ ಬಂದು ನೇರವಾಗಿ ತುಳಸೀಕಟ್ಟೆಯ ಬಳಿ ನಡೆದರು. ನಿಂಗವ್ವ ಅವರನ್ನು ಹಿಂಬಾಲಿಸಿದಳು.

ಗೌರಿ ರೂಮಿಗೆ ಹೋದುದನ್ನು ನೋಡಿದ ಸುಬ್ರಹ್ಮಣ್ಯ ಅಲ್ಲಿ ನಿಲ್ಲದೆ ಹೊರಟು ಹೋದ.

ಸ್ವಲ್ಪ ಹೊತ್ತು ಗಂಡನನ್ನು ನಿರೀಕ್ಷಿಸಿದ ಗೌರಿ, ಒಮ್ಮೆ ಹೊರಬಾಗಿಲ ವರೆಗೆ ಬಂದು ನೋಡಿದಳು. ಸುಬ್ರಹ್ಮಣ್ಯ ಇರಲಿಲ್ಲ.

ಕತ್ತು ತಗ್ಗಿಸಿಕೊಂಡು ಮತ್ತೆ ತನ್ನ ರೂಮು ಸೇರಿ ಕುಳಿತಳು. ಕಣ್ಣಿನಿಂದ ಒಂದೊಂದೇ ಹನಿ ತೊಟ್ಟಿಡಲಾರಂಭಿಸಿತು.

# ೧೪

ಕಾಲೇಜ್ ಹಾಸ್ಟೆಲಿನಲ್ಲಿ ಶಂಕರ, ನಾರಾಯಣಸ್ವಾಮಿ, ಶ್ರೀಧರ ಮೂವರೂ ಒಂದು ರೂಮಿನಲ್ಲಿರಬೇಕಾಗಿತ್ತು. ನಾರಾಯಣಸ್ವಾಮಿ, ಶ್ರೀಧರ ಇಬ್ಬರೂ ಸೀನಿಯರ್ ಕ್ಲಾಸಿನಲ್ಲಿದ್ದರು.

ಶಂಕರನನ್ನು ಕಂಡೊಡನೆಯೇ ನಾರಾಯಣಸ್ವಾಮಿ ಹುಬ್ಬು ಗಂಟು ಹಾಕಿಕೊಂಡು ಶ್ರೀಧರನ ಮುಂದೆ,

"ಯಾವುದೋ ಹಳ್ಳಿ ಗ್ರಹ ಗಂಟು ಬಿತ್ತಲ್ಲಯ್ಯಾ" ಎಂದ.

"ಹಳ್ಳಿಯವನು ದಿಳ್ಳಿಯವನಾಗುವುದು ಎಷ್ಟರಲ್ಲಿದೆ ನಾರಾಯಣ ಸ್ವಾಮಿ."

"ಇವನನ್ನು ಪಳಗಿಸೋ ಕೆಲಸಾ ಬೇರೆ ನಾವು ಕೈಗೊಳ್ಳ ಬೇಕೇನೋ?"

"ಎಲ್ಲರನ್ನೂ ತಿರಸ್ಕಾರವಾಗಿ ಕಾಣಬಾರದು ನಾರಾಯಣಸ್ವಾಮಿ. ಯಾರು ಯಾರಲ್ಲಿ ಯಾವ ಯಾವ ಶಕ್ತಿ ಅಡಕವಾಗಿದೆಯೋ ಬಲ್ಲವ ರಾರು?"

"ನೀನು ಬಿಡಪ್ಪ ಹೊರಗಿನವರ ಜತೆ ಸೇರಿಕೊಳ್ಳುವುದರಲ್ಲಿ ನಿಸ್ಸೀಮ"

ಎಂದು ಅಣಕವಾಡಿದ. ನಾರಾಯಣಸ್ವಾಮಿ ಜತೆ ವಾದ ಮಾಡಿ ಸುಖವಿಲ್ಲವೆಂದು ಶ್ರೀಧರ ಮೌನವ್ರತ ತಾಳಿದ.

ನಾರಾಯಣಸ್ವಾಮಿಯ ವೇಷ, ಠೀವಿ, ಹಾವಭಾವ ಕಂಡು ಶಂಕರ ನಿಗೆ ದಿಗಿಲಾಯಿತು. ಕಾಲೇಜಿನಲ್ಲಿ ಓದುವ ವಿದ್ಯಾರ್ಥಿಗಳೆಲ್ಲಾ ಅವನಂ ತೆಯೇ ಇರುತ್ತಾರೆಂದು ಕಲ್ಪಿಸಿಕೊಂಡು ಭೀತನಾದ. ನಾರಾಯಣ ಸ್ವಾಮಿ ಪಾಂಡ್ ಸ್ನೋ, ಈವಿನಿಂಗ್ ಇನ್ ಪ್ಯಾರಿಸ್ ಪೌಡರ್, ಮಿಸ್ ಚೀಫ್ ಸೆಂಟು, ಬ್ರೈಲ್ ಕ್ರೀಮ್-ಅವನ ಸರ್ಜು, ಟ್ವೀಡ್ ಸೂಟು ಗಳು-ಅವನ ಬಣ್ಣಬಣ್ಣದ ಸಿಲ್ಕ್ ಕರವಸ್ತ್ರಗಳು ಶಂಕರನ ಕುತೂ ಹಲವನ್ನು ಕೆರಳಿಸಿದ್ದುವು.

ನಾರಾಯಣಸ್ವಾಮಿಗೂ ಶ್ರೀಧರನಿಗೂ ಸ್ವಲ್ಪವೂ ಹೋಲಿಕೆ ಇರಲಿಲ್ಲ. ಶ್ರೀಧರನೂ ಕಾಲೇಜಿನಲ್ಲಿ—ಸೀನಿಯರ್ ಕ್ಲಾಸಿನಲ್ಲಿಯೇ ಓದುತ್ತಿದ್ದ. ಅವನ ತಲೆ ಬ್ರೈಲ್ ಕ್ರೀಮ್ ಕಾಣುವುದಂತಿರಲಿ–ಎಣ್ಣೆ ಕಾಣುವುದೂ ಕಷ್ಟವಾಗಿತ್ತು. ಅವನ ವಾರ್ಡ್ ರೋಬ್‌ನಲ್ಲಿದ್ದುದೆಲ್ಲಾ ಕುಡತೆ, ನಾಲ್ಕು ಪಾಯಿಜಾಮ, ನಾಲ್ಕು ತುಂಡು ದಟ್ಟಿಗಳು—ಎಲ್ಲವೂ ಖಾದಿಯವು.

ಕಾಲೇಜು, ಕಾಲೇಜ್ ಹಾಸ್ಟಲ್ ಬಿಟ್ಟು ಹೊರಗೆ ಕಾಲಿಡಲು ಶಂಕರನಿಗೆ ಧೈರ್ಯವಾಗಲಿಲ್ಲ. ಕಾಲೇಜ್ ಮುಗಿದೊಡನೆಯೇ ಹಾಸ್ಟಲಿಗೆ ಬಂದು ಕೂಡುತ್ತಿದ್ದ. ವಾಚನಾಲಯದಲ್ಲಿ ಪತ್ರಿಕೆಗಳನ್ನು ಮಗುಚಿಹಾಕಿ, ರೂಮಿಗೆ ಬಂದು ಯಾವುದಾದರೊಂದು ಪುಸ್ತಕ ಹಿಡಿದು ಕುಳಿತುಬಿಡುತ್ತಿದ್ದ.

ತಾಯಿ ಕೊಟ್ಟಿದ್ದ ತಿಂಡಿಯ ಬುಟ್ಟಿಯನ್ನು ತೆಗೆದು ನೋಡುವುದಕ್ಕೂ ಶಂಕರನಿಗೆ ಧೈರ್ಯವಾಗಿರಲಿಲ್ಲ.

ಒಂದು ದಿನ ಕಾಲೇಜ್ ಬೇಗ ಮುಗಿಯಿತು. ಶಂಕರ ಮಧ್ಯಾಹ್ನದ ಉಪಾಹಾರಕ್ಕೆ ಹಾಸ್ಟೆಲಿಗೆ ಬಂದವನು ಪುನಃ ಕಾಲೇಜಿಗೆ ಹೋಗಬೇಕಾಗಿರಲಿಲ್ಲ. ರೂಮಿನಲ್ಲಿಯೇ ಹಾರ್ಡಿಯ 'ಟೆಸ್' ಓದುತ್ತಾ ಕುಳಿತಿದ್ದ. ನಾಲ್ಕು ಗಂಟೆಯ ಸುಮಾರಿಗೆ ಶ್ರೀಧರ ಬಂದವನು ಶಂಕರನನ್ನು ನೋಡಿ

"ಕ್ಲಾಸು ಮುಗಿಯಿತೇನ್ರೀ ಮೇಟ್" ಎಂದ.

"ವಿರಾಮಕಾಲ ಮುಗಿದ ಮೇಲೆ ಕ್ಲಾಸು ಇರಲಿಲ್ಲ. ಎಕನಾಮಿಕ್ಸ್ ಲೆಕ್ಚರರು ರಜಾ ತೆಗೆದುಕೊಂಡಿದ್ದಾರೆ. ನಿಮ್ಮ ಕ್ಲಾಸು ಮುಗಿಯಿತೇ ?"

"ನನಗೂ ಕೊನೆ ಗಂಟೆ ಪಾಠವಿರಲಿಲ್ಲ."

"ನಾರಾಯಣಸ್ವಾಮಿಗಳೆಲ್ಲಿ ?"

"ಟೆನಿಸ್ ಕೋರ್ಟಿಗೆ ಹೋದರು."

ಶಂಕರ ಅಂಜುತ್ತ ಅಂಜುತ್ತ,

"ಊರಿನಿಂದ ನಾನು ಬರುವಾಗ ನಮ್ಮ ತಾಯಿ ತಿಂಡಿ ಕಟ್ಟಿಕೊಟ್ಟಿದ್ದಾರೆ. ಅನ್ಯಾಯವಾಗಿ ಕೆಟ್ಟುಹೋಗುತ್ತದೆ. ಕೊಡಲೇ ಮಿ. ಶ್ರೀಧರ್."

"ಅವಶ್ಯವಾಗಿ ಕೊಡಿ. ಅದಕ್ಕೇಕೆ ಅನುಮಾನಿಸುತ್ತಿರುವಿರಿ."

"ಹಳ್ಳಿಯ ತಿಂಡಿ . . ."

ಶ್ರೀಧರನೇ ಬುಟ್ಟಿಯನ್ನೆಳೆದುಕೊಂಡ. ಇಬ್ಬರೂ ಕಂಠಪೂರ್ತಿ ಸೇವಿಸಿದ ಮೇಲೆ,

"ನಾರಾಯಣಸ್ವಾಮಿಗಳಿಗೂ ಕೊಡಬೇಕೆಂದು ಆಸೆ. ಆದರೆ ಅವರನ್ನು ನೋಡಿದರೆ ಭಯವಾಗುತ್ತದೆ."

ಶ್ರೀಧರ ನಕ್ಕು,

"ರೂಮಲ್ಲೇ ನೀವು ಇರಬೇಕೇನು ?"

"ಏಕೆ?"

"ಓದುತ್ತೀರೇನೋ ?"

"ನಾವೆಲ್ ಓದುತ್ತಿದ್ದೆ."

"ಬನ್ನಿ ಯೂನಿಯನ್ ರೆಸ್ಟುರಾಗೆ ಹೋಗಿ, ಒಂದೊಂದು ಕಪ್ ಬಿಸಿ ಕಾಫಿ ಕುಡಿದು ತಿರುಗಾಡಿಕೊಂಡು ಬರೋಣ."

ಶಂಕರ ಉತ್ಸಾಹಗೊಂಡು ಶ್ರೀಧರನ ಜತೆ ಹೊರಟುನಿಂತ.

ಇಬ್ಬರೂ ರೆಸ್ಟುರಾದಲ್ಲಿ ಕಾಫಿ ಕುಡಿದು, ಕ್ರಿಕೆಟ್ ಪೆವಿಲಿಯನ್ ದಾಟಿಕೊಂಡು ಕುಕ್ಕನಹಳ್ಳಿ ಕೆರೆಯ ದಂಡೆಯ ಕಡೆ ಹೋದರು. ಕೆರೆಯ ರಮಣೀಯ ದೃಶ್ಯ, ದಂಡೆಯ ಮೇಲೆ ಅಲ್ಲಲ್ಲಿ ಕಟ್ಟಲ್ಪಟ್ಟಿದ್ದ ವಿಶ್ರಾಮಧಾಮುಗಳು, ದಂಡೆಯ ಮೇಲಿಂದ ಕಾಣುತ್ತಿದ್ದ ಮೈಸೂರಿನ ದೀಪಸಾಲು ಶಂಕರನನ್ನು ಪುಳಕಿತನನ್ನಾಗಿ ಮಾಡಿತು.

"ಮೈಸೂರು ಇಷ್ಟು ಸುಂದರವಾಗಿದೆಯೆಂದು ನಾನು ಕನಸಿನಲ್ಲಿಯೂ ಎಣಿಸಿರಲಿಲ್ಲ ಮಿ. ಶ್ರೀಧರ್."

"ನೀವು ಮೈಸೂರಿಗೆ ಈವರೆಗೆ ಬಂದೇ ಇಲ್ಲವೇನು ?"

"ಇಲ್ಲ. ಊರು ಬಿಟ್ಟು ನಾನು ಹೊರಗೇ ಕಾಲಿಟ್ಟಿಲ್ಲ........ ನನಗೊಮ್ಮೆ ಚಾಮುಂಡಿಬೆಟ್ಟ, ಲಲಿತಾದ್ರಿ, ಶ್ರೀರಂಗಪಟ್ಟಣ ಎಲ್ಲಾ ತೋರಿಸುವಿರಾ ?"

"ಅಗತ್ಯವಾಗಿ ಆಗಲಿ........ ನಿಮ್ಮ ತಂದೆ ಏನು ಮಾಡುತ್ತಿದ್ದಾರೆ ಶಂಕರ್."

"ತಂದೆ ತೀರಿಕೊಂಡರು. ಅಣ್ಣಂದಿರೇ ಮನೆಯ ಯಜಮಾನರು."

"ತಾಯಿ ಇದ್ದಾರೆಯೇ ?"

"ಇದ್ದಾರೆ....ನಾನು ನಿಮ್ಮ ರೂಮಿಗೆ ಬಂದುದು ನಾರಾಯಣಸ್ವಾಮಿಗಳಿಗೆ ಬೇಸರವಾಗಿದೆಯೆಂದು ಕಾಣುತ್ತದೆ. ವಾರ್ಡನ್ ಅವರಿಗೆ ತಿಳಿಸಿ ನಾನು ಬೇರೆ ರೂಮಿಗೆ ಹೋಗಲು ಸಿದ್ಧನಾಗಿದ್ದೇನೆ."

"ಅವನನ್ನು ಲೆಕ್ಕಕ್ಕೇ ತೆಗೆದುಕೊಳ್ಳಬೇಡಿ ಶಂಕರ್. ಅದೊಂದು ಜಂಬದ ಕೋಳಿ. ತಂದೆ ಮಂಡ್ಯದಲ್ಲಿ ದೊಡ್ಡ ಲಾಯರು—ಕೈತುಂಬ ಸಂಪಾದಿಸುತ್ತಾರೆ. ಮಗ ಕೇಳಿದಷ್ಟು ಹಣ ಕಳಿಸಿಕೊಡುತ್ತಾರೆ. ನಮ್ಮ ರೂಮಿನಲ್ಲಿರುವುದು ಬೇಡವಾದರೆ ನಾರಾಯಣಸ್ವಾಮಿಯೇ ಬೇರೆ ರೂಮಿಗೆ ಹೋಗಲಿ."

"ನಿಮ್ಮ ವಿಷಯವೇನೂ ಹೇಳಲಿಲ್ಲವಲ್ಲಾ ಮಿ. ಶ್ರೀಧರ್."

"ದಯವಿಟ್ಟು ಈ ಮಿಸ್ಟರ್ ಬಿಟ್ಟುಬಿಡಿ. 'ಶ್ರೀಧರ' ಎಂದು ಏಕವಚನದಲ್ಲಿಯೇ ಕರೆಯಿರಿ. ಒಂದು ಮನೆಯವರ ಹಾಗೆ ಜತೆಯಲ್ಲಿರುವ ನಾವು ಶುಷ್ಕಮರ್ಯಾದೆ ತೋರಿಸಬೇಕಾದ ಅಗತ್ಯವಿಲ್ಲ."

"ಹಾಗೇ ಆಗಲಿ ಶ್ರೀಧರ್."

"ಕಾಲೇಜಿಗೆ ನಾವು ಬರುವುದೇಕೆಂದು ಹಲವು ಬಾರಿ ಯೋಚಿಸುತ್ತೇನೆ ಶಂಕರ್. ನಮ್ಮನ್ನು ಇಲ್ಲಿಗೆ ಕಳಿಸಬೇಕಾದರೆ ನಮ್ಮ ತಾಯಿ ತಂದೆ ಪಡುವ ಕಷ್ಟ ಭಗವಂತನಿಗೆ ಪ್ರೀತಿಯಾಗಬೇಕು. ಹೊಟ್ಟೆಕಟ್ಟಿ ಬಟ್ಟೆಕಟ್ಟಿ 'ಮಗ ಮುಂದಕ್ಕೆ ಬರಲಿ' ಎಂದು ಜಪಮಾಡುತ್ತಾ ಇಲ್ಲಿಗೆ ಕಳಿಸಿಕೊಡುತ್ತಾರೆ. ರಕ್ತ ಸುರಿಸಿ ಅವರು ಸಂಪಾದಿಸಿದ ಹಣವನ್ನು ನಾವು ಸಿನೀಮಾ, ಪೌಡರು, ಸೂಟುಗಳಿಗೆ ನಿರರ್ಥಕವಾಗಿ ಹಾಳು ಮಾಡುತ್ತೇವೆ."

ಶ್ರೀಧರನ ತಿಳಿಮಾತು ಶಂಕರನ ಅಂತಃಕರಣ ಕಲಕಿತು. ಜನ್ಮ ಜನ್ಮಾಂತರದ ಬಾಂಧವ್ಯ ಪುನರವತರಿಸಿದಂತಾಯಿತು. ಕರುಳುಗಳನ್ನು ಬೇಧಿಸಿಕೊಂಡು ಬಂದ ಅವನ ಮಾತು ನೇರವಾಗಿ ಕರುಳು ಮುಟ್ಟಿತ್ತು. "ಇದೂ ದುಃಖ ಕಂಡ ಜೀವ—ಕಷ್ಟ ಅನುಭವಿಸಿದ ಜೀವ" ಎಂದು ಶಂಕರನಿಗೆ ಮನವರಿಕೆಯಾಯಿತು.

"ನಿಮ್ಮ ತಂದೆ ಏನು ಮಾಡುತ್ತಿದ್ದಾರೆ ಶ್ರೀಧರ್ ?"

"ಕೃಷ್ಣರಾಜನಗರದ ತಾಲ್ಲೂಕು ಕಛೇರಿ ಹೆಡ್‌ಗುಮಾಸ್ತರು. ನಾನೇ ದೊಡ್ಡ ಮಗು. ನನಗೆ ಇಬ್ಬರು ತಂಗಿಯರಿದ್ದಾರೆ. ದೊಡ್ಡ ವಳು ಕುಮುದನಿಗೆ ಮದುವೆಯ ವಯಸ್ಸು. ತಾಲ್ಲೂಕು ಕಛೇರಿ ಹೆಡ್ ಗುಮಾಸ್ತರುಗಳು ಸಾಮಾನ್ಯವಾಗಿ ಅನುಕೂಲಸ್ಥರಾಗಿರುತ್ತಾರೆ. ಲಂಚ ರುಷವತ್ತುಗಳ ಮಾತೃಸ್ಥಾನ ತಾಲ್ಲೂಕು ಕಛೇರಿಯೆಂದು ನಿನಗೆ ಗೊತ್ತಿ ರಬಹುದು. ಆದರೆ ನನ್ನ ತಂದೆ ಈ ನಿಯಮಕ್ಕೆ ಪ್ರತಿಷೇಧ. ಪಿತ್ರಾ ರ್ಜಿತವಾಗಿ ಬಂದಿರುವ ಮೂರು ಎಕರೆ ಗದ್ದೆ ಕೃಷ್ಣರಾಜನಗರದ ಮನೆ ಬಿಟ್ಟು ನಮಗೆ ಬೇರೆ ಆಸ್ತಿಯಿಲ್ಲ. ತಂದೆ ಆಸ್ತಿ ಬೆಳಸುವುದಕ್ಕೆ ಹೋಗ ಲಿಲ್ಲ. ಭಗವದ್ಗೀತೆಯಲ್ಲಿ ಅವರಿಗೆ ತುಂಬ ಪ್ರೇಮ, ಗೌರವ. ಗೀತೋಪ ದೇಶವನ್ನು—ಅನಾಸಕ್ತಿಯೋಗವನ್ನು ಜೀವನದಲ್ಲಿ ಅನುಷ್ಠಾನಕ್ಕೆ ತಂದಿರುವ ಪುಣ್ಯಪುರುಷರವರು ಎಂದು ಹೇಳಲು ನಾನು ಸಂಕೋಚ ಪಡಬೇಕಾಗಿಲ್ಲ. ಅವರಲ್ಲಿ ಕಿತ್ತಾನಾರಿನ ಹಳೆಯ ಗೀತಾಪ್ರತಿ ಒಂದಿದೆ. ಅದನ್ನು ಹಲವು ಬಾರಿ ನನಗೆ ತೋರಿಸಿ 'ಶ್ರೀಧರ, ನಿನಗೆ ನಾನು ಬಿಟ್ಟು ಹೋಗುವ ಆಸ್ತಿ ಇದೊಂದೇ. ಈ ಆಸ್ತಿಯನ್ನು ನೀನು ರೂಢಿಸಿಕೊಂಡರೆ ದೊಡ್ಡ ಶ್ರೀಮಂತನಾಗುವೆ' ಎಂದು ಹೇಳು ತ್ತಾರೆ.

"ನಿನಗೆ ಗೀತೆಯ ಪಾಠವಾಗಿದೆಯೇ?"

"ಹದಿನೆಂಟು ಅಧ್ಯಾಯವೂ ಬಾಯಿಗೆ ಬರುತ್ತದೆ. ನಾನು ಸಣ್ಣ ಮಗುವಾಗಿದ್ದಾಗ ನನ್ನ ತಾಯಿಗೆ ತುಂಬ ಕಾಹಿಲೆ. ಹುಯ್ಯ ಹಾಲಿ ನಲ್ಲೇ ನಾನು ಬೆಳೆದನಂತೆ. ತಂದೆಯವರು ನನ್ನ ಸಣ್ಣ ವಯಸ್ಸಿನಲ್ಲೇ ಗೀತಾ ಪಾಠ ಆರಂಭಿಸಿದರು. ನಾನು ಹೈಸ್ಕೂಲಿಗೆ ಬಂದ ಮೇಲೆ ಶ್ಲೋಕಗಳ ಅರ್ಥ ವಿವರಿಸಿ, ಅವುಗಳ ಆಧಾರವಾದ ಉಪನಿಷತ್ತುಗಳ ಪರಿಚಯ ಮಾಡಿಕೊಟ್ಟರು—ನಾನು ಹೈಸ್ಕೂಲು ಮುಗಿಸಿದ ಮೇಲೆ ಮನೆಯಲ್ಲಿ ದೊಡ್ಡ ಜಿಜ್ಞಾಸೆಯೆದ್ದಿತು. ಕಾಲೇಜಿಗೆ ನನ್ನ ಕಳುಹಿಸು ವುದೇ ಬಿಡುವುದೇ ಎಂಬ ಪ್ರಶ್ನೆ ಹುಟ್ಟಿಕೊಂಡಿತು. ಕುಮುದನಿಗೆ ಮದುವೆಯಾಗಬೇಕು, ಶ್ರೀಧರನ ಓದು ಸಾಕು ಎಂದು ತಾಯಿ ಹೇಳಿ ದರು.

'ಶ್ರೀಧರ ಜಾಣ. ಇದುವರೆಗೆ ಯಾವ ಕ್ಲಾಸಿನಲ್ಲಿಯೂ ಫೇಲಾಗದೆ ಪ್ಯಾಸು ಮಾಡಿಕೊಂಡು ಬಂದಿದ್ದಾನೆ. ಮುಂದಕ್ಕೆ ಓದಬೇಕೆಂಬ ಆಸೆಯೂ ಅವನಿಗಿದೆ. ಅವನನ್ನು ನಿರಾಸೆಗೊಳಿಸುವುದು ನ್ಯಾಯವಲ್ಲ' ಎಂದು ತಂದೆ ಹೇಳಿದರು.

'ನೀವು ಹೇಳುವುದು ಸರಿ. ಕಾಲೇಜೂಂದ್ರೆ ನಾಲ್ಕು ವರ್ಷ. ವರ್ಷಕ್ಕೆ ಸಾವಿರ ರೂಪಾಯಿ. ಅವನ ಓದಿಗೆ ನಾಲ್ಕು ಸಾವಿರ, ಕುಮುದನ ಮದುವೆಗೆ ನಾಲ್ಕು ಸಾವಿರ ಸಾಲ ಮಾಡಿ ನಾವು ಪೂರೈಸುವುದು ಹೇಗೆ' ಎಂದು ತಾಯಿ ಕೋಟಿ ಹಾಕಿದರು.

ಅದಕ್ಕೆ ತಂದೆಯವರು 'ನೋಡು ನಾವು ಮಾಡಬೇಕಾದ ಕರ್ತವ್ಯವೆಲ್ಲವನ್ನೂ ಮಾಡಿ ತೀರಲೇ ಬೇಕು. ಕುಮುದಸಿಗೆ ಮದುವೆಯಾಗಬೇಕೆಂದು ಶ್ರೀಧರನ ಭವಿಷ್ಯ ಹಾಳು ಮಾಡುವುದು ನ್ಯಾಯವಲ್ಲ. ಶ್ರೀಧರ ಓದಿ ಡಿಗ್ರಿ ಪಡೆದುಕೊಂಡು ಬಂದರೆ ಅವನೇ ತನ್ನ ತಂಗಿಯ ಮದುವೆ ಮಾಡುತ್ತಾನೆ.'

'ಅಂದರೆ ಇನ್ನು ನಾಲ್ಕು ವರ್ಷ ಕಾಯಬೇಕೇ?'

'ಇಲ್ಲ. ಮದುವೆಗಾಗಿರುವ ನಾಲ ತೀರಿಸುತ್ತಾನೆ.'

ಎಂದು ತಾಯಿಯನ್ನೊಪ್ಪಿಸಿ ನನ್ನನ್ನು ಮೈಸೂರಿಗೆ ಕಳಿಸಿ ಕೊಟ್ಟರು. ಯಾವುದಾದರೂ ಉಚಿತ ವಿದ್ಯಾರ್ಥಿ ಗೃಹ ಸೇರಿ ಖರ್ಚು ಕಡಿಮೆ ಮಾಡಿಕೊಳ್ಳಬೇಕೆಂದು ಪ್ರಯತ್ನಿಸಿದೆ. ಕಳೆದ ವರ್ಷ ಒಂದು ಟರ್ಮು ವಿದ್ಯಾರ್ಥಿ ಗೃಹದಲ್ಲಿಯೂ ಇದ್ದೆ. ಅಲ್ಲಿನ ಊಟೋಪಚಾರಗಳಿಂದ ಕಾಹಿಲೆ ಬಂತು. ವಿಧಿಯಿಲ್ಲದೆ ಕಾಲೇಜ್ ಹಾಸ್ಟೆಲ್ ಸೇರಿದೆ."

"ಶ್ರೀಧರ್, ಮನಸ್ಸಿಗೆ ಬೇಸರ ಮಾಡಿಕೊಳ್ಳದಿದ್ದರೆ ಒಂದು ಪ್ರಶ್ನೆ ಕೇಳಬಯಸುತ್ತೇನೆ."

"ಕೇಳು."

"ನಿಮ್ಮ ತಂದೆಯವರು ಪ್ರತಿ ತಿಂಗಳೂ ಎಷ್ಟು ಹಣ ಕಳುಹಿಸುತ್ತಾರೆ"?

"ಐವತ್ತು ರೂಪಾಯಿ ಕಳಿಸುತ್ತಿದ್ದಾರೆ."

"ಐವತ್ತು ರೂಪಾಯಿನಲ್ಲಿ ಹಾಸ್ಟಲ್ ಖರ್ಚು, ಫೀಸು ಎಲ್ಲಾ ಆಗುತ್ತದೆಯೇ?"

"ಇಲ್ಲ ಕಳೆದ ವರ್ಷವೇ ನನಗೆ ಹಾಫ್ ಫ್ರೀಷಿಪ್ ಸಿಕ್ಕಿತು. ಒಂದು ಪಾಠ ಇಟ್ಟುಕೊಂಡಿದ್ದೇನೆ. ಅದರಲ್ಲಿ ಇಪ್ಪತ್ತು ರೂಪಾಯಿ ಸಿಕ್ಕುತ್ತದೆ."

"ನೀನು ಸಾಹಸಜೀವಿ ಶ್ರೀಧರ್."

"ಆವಶ್ಯಕತೆ ಎಲ್ಲರನ್ನೂ ಸಾಹಸಜೀವಿಗಳನ್ನಾಗಿ ಮಾಡುತ್ತದೆ."

"ನಿನ್ನ ವಿಷಯ ಕೇಳಿದ ಮೇಲೆ ನನ್ನ ವಿಷಯ ಹೇಳಲೇಬೇಕು."

"ಹೇಳು ಶಂಕರ್."

ಶಂಕರ ತನ್ನ ಚರಿತ್ರೆ, ತನ್ನ ಮನೆಯ ಚರಿತ್ರೆಯನ್ನು ಕೂಲಂಕಷ ವಾಗಿ ವಿವರಿಸಿದ. ಆದರೆ ಮನೆಯಲ್ಲಿ ಈಚೆಗೆ ಹುಟ್ಟಿಕೊಂಡಿದ್ದ ಸಮ ಸ್ಯೆಯ ಬಗ್ಗೆ ಮಾತ್ರ ಬಾಯಿ ಬಿಡಲಿಲ್ಲ. ಪಾರ್ವತಮ್ಮನವರು, ಸಿಂಗವ್ವ ಇವರ ವಿಷಯ ಶಂಕರ ಹೇಳಿದ್ದು ಕೇಳಿ ಶ್ರೀಧರನ ಕಣ್ಣಲ್ಲಿ ನೀರೂರಿತು.

"ಪ್ರತಿ ಮನೆಯನ್ನೂ ಇಂಥ ತಾಯಂದಿರು ಬೆಳಗಿಸುತ್ತಾರೆ ಶಂಕರ್. ಅವರ ಯೋಗ್ಯತೆಯನ್ನರಿಯುವ ಶಕ್ತಿಯನ್ನು ನಾವು ನೀಗಿ ಕೊಂಡಿದ್ದೇವೆ. ನಮ್ಮ ನಾರಾಯಣಸ್ವಾಮಿ ಎಂಥ ಮಹಾತಾಯಿಯ ಮಗನೆಂದರಿತಿರುವೆ. ಅವನಂಥ ಭಾಗ್ಯಶಾಲಿ ನಿಜವಾಗಿಯೂ ಕಾಲೇಜಿಗೆ ಬರಬೇಕಾಗಿಲ್ಲ. ಮನೆಯಲ್ಲಿಯೇ ಇದ್ದುಕೊಂಡು ಆ ತಾಯಿಯ ಪಾದ ಸೇವೆ ಮಾಡಿದರೆ ಸಾಕು. ಎಲ್ಲ ವಿದ್ಯೆಯೂ ಕುಳಿತಲ್ಲಿಯೇ ಕರಗತವಾಗು ತ್ತದೆ. ಒಮ್ಮೆ ಇಬ್ಬರೂ ಮಂಡ್ಯಕ್ಕೆ ಹೋಗಿ ಅವರ ದರ್ಶನ ಪಡೆದು ಬರೋಣ—ನಾನು ಉತ್ಪ್ರೇಕ್ಷೆ ಮಾಡುತ್ತಿಲ್ಲವೆಂದು ನಿನಗೇ ಗೊತ್ತಾಗು ತ್ತದೆ. ರುಕ್ಮಿಣಿಯಮ್ಮನವರು ಕೇವಲ ನಾರಾಯಣಸ್ವಾಮಿಯ ತಾಯಿ ಯಾಗಿಲ್ಲ—ಇಡಿಯ ಊರಿನ ತಾಯಿಯಾಗಿದ್ದಾರೆ. ಇಡಿಯ ವಿಶ್ವದ ತಾಯಿಯಾಗಿದ್ದಾರೆಂದೂ ಹೇಳಬಹುದು.—ಬೇಸರವಾಗುತ್ತಿದೆಯೋ ?"

"ಇಲ್ಲ ಹೇಳು ಶಂಕರ. ಪುಣ್ಯವಂತರ ವಿಷಯ ಕೇಳುವುದಕ್ಕೂ ಪುಣ್ಯವಿರಬೇಕು."

"ನಿಜ ನಿಜ. ಅವರ ವಿಷಯ ಮಾತಾಡ ಹೊರಟರೆ ನನಗೆ ಮೈ ಮರೆತು ಹೋಗುತ್ತದೆ. ಒಂದೇ ದೃಷ್ಟಾಂತ ಹೇಳುತ್ತೇನೆ ಕೇಳು. ಒಮ್ಮೆ ನಾರಾಯಣಸ್ವಾಮಿ ನನ್ನನ್ನು ಮಂಡ್ಯಕ್ಕೆ ಕರೆದುಕೊಂಡು ಹೋದ.

ಅವರ ಮನೆ ಹೊಸಿಲೊಳಗೆ ನಾನು ಕಾಲಿಟ್ಟ ಹೊತ್ತಿನಿಂದ ರುಕ್ಮಿಣಮ್ಮ ನವರು ನನ್ನನ್ನೂ ಮಗನಂತೆ ಕಾಣಲಾರಂಭಿಸಿದರು. ಒಂದು ದಿನ ಮಾತಿಗೆ ಮಾತು ಬಂದು ನನಗೆ ಸ್ವಲ್ಪ ಗೀತೆಯ ಪರಿಚಯವಿದೆಯೆಂಬು ದನ್ನು ಅವರು ತಿಳಿದರು. ಅದೇ ಸಂಜೆ ನನಗೆ ಮಣೆ ಸಿದ್ಧವಾಯಿತು. ಮೂರು ದಿನ ನಾನು ಗೀತಾ ಪಾರಾಯಣ ಮಾಡಬೇಕಾಯಿತು. ರಜಾ ಮುಗಿಯುತ್ತ ಬಂದಿದ್ದುದರಿಂದ ನಾನೂ ನಾರಾಯಣಸ್ವಾಮಿ ಮೈಸೂರಿಗೆ ಕೂಡಲೇ ಹೊರಡಬೇಕಾಯಿತು. ನಾಲ್ಕನೆಯ ದಿನ ಆ ತಾಯಿ ನನ್ನನ್ನು ಕೂಡಿಸಿ ಫಲತಾಂಬೂಲ, ಹತ್ತು ರೂಪಾಯಿ ದಕ್ಷಿಣೆ, ಒಂದು ರೇಷ್ಮೆ ಅಂಚಿನ ಪಂಚೆ ಕೊಟ್ಟು ಸಾಷ್ಟಾಂಗ ಪ್ರಣಾಮಮಾಡಿದರು. —ನನ್ನ ಗತಿ ಏನಾಗಿರಬಹುದು ನೀನೇ ಯೋಚಿಸಬಹುದು. ಹೊರಟು ಬರುವಾಗ ನಾನು ಅವರ ಪಾದ ಮುಟ್ಟಿ ನಮಸ್ಕರಿಸಿ 'ಅಮ್ಮಾ, ನೀವು ದೊಡ್ಡವರು ನನಗೆ ನಮಸ್ಕರಿಸಿ ತುಂಬ ಅಪಚಾರ ಮಾಡಿದಿರಿ. ಹಿರಿಯ ರಿಂದ ನಮಸ್ಕಾರಮಾಡಿಸಿಕೊಳ್ಳುವುದು ಕಿರಿಯರಿಗೆ ಶ್ರೇಯಸ್ಸಲ್ಲ' ಅಂದೆ. ಅದಕ್ಕೆ ರುಕ್ಮಿಣಮ್ಮನವರು 'ನೋಡಪ್ಪಾ, ಈಗ ನಾನು ಹಿರಿಯಳು, ನೀನು ಕಿರಿಯ. ಬೇಕಾದರೆ ಇನ್ನೂ ಒಂದು ಸಲ ನಮಸ್ಕಾರಮಾಡು. ಸಂತೋಷವಾಗಿ ಆಶೀರ್ವಾದಮಾಡುತ್ತೇನೆ. ಆದರೆ ನೀನು ಗೀತಾ ಪಾರಾಯಣಮಾಡುವಾಗ ನೀನೇ ಹರಿಸ್ವರೂಪ. ಭಕ್ತ, ಭಾಗವತ, ಭಗವಂತ ಮೂವರೂ ಒಂದೇ—ಅದರಲ್ಲಿ ಭೇದವೆಣಿಸಬಾರದು. ವಿಶ್ವ ರೂಪ ದರ್ಶನಾಧ್ಯಾಯದಲ್ಲಿ ಪುರುಷೋತ್ತಮ ಏನು ಹೇಳಿದ್ದಾನೆ ಯೋಚನೆ ಮಾಡಿನೋಡು' ಎಂದರು. ಸ್ಪರ್ಶಮಣಿ ಸಂಪರ್ಕದಿಂದ ಅವಲೋಹ ಸ್ವರ್ಣವಾಗುವುದಂತೆ! ಈ ತಾಯಿ ನಾನು ಕಂಡ ಜೀವಂತ ಸ್ಪರ್ಶಮಣಿ."

"ತಾಯಿ ಮಗನಲ್ಲಿ ಇಷ್ಟು ವ್ಯತ್ಯಾಸ ಕಂಡುಬರಲೇನು ಕಾರಣ ಶ್ರೀಧರ್?"

"ವಿಜ್ಞಾನಿಗಳು ಇದಕ್ಕೇನು ಹೇಳುವರೋ ಕಾಣೆ. ನಾವು ಇದನ್ನು ಪ್ರಾರಬ್ಧಕರ್ಮ ಎನ್ನುತ್ತೇವೆ. ವಿಜ್ಞಾನ ವಿಶ್ವಪರ್ಯಟನ ಮಾಡಿ ಕೊಂಡು ಬಂದು ಕೊನೆಗೆ ನಮ್ಮ ದರ್ಶನಗಳಿಗೇ ಶರಣಾಗುತ್ತದೆ."

ರಾತ್ರಿ ಬೆಳೆಯುತ್ತ ಬಂದಿತ್ತು. ಕಗ್ಗತ್ತಲು ತನ್ನ ಬಲೆ ಬೀಸಲಾರಂಭಿಸಿತ್ತು. ನಿಸರ್ಗದಲ್ಲಿ ನೀರವತೆ—ಶಾಂತಿ ಮೂಡಿತ್ತು. ಶ್ರೀಧರನ ಮಾತುಗಳು ಶಂಕರನ ಸುಪ್ತಚೇತನವನ್ನು ಹೊಡೆದೆಬ್ಬಿಸಿದುದಲ್ಲದೆ, ಅವನ ಮನಸ್ಸನ್ನು ಕೊರೆಯುತ್ತಿದ್ದ ಹಲವಾರು ಸಮಸ್ಯೆಗಳಿಗೆ ಮಾರ್ಗದರ್ಶನ ಮಾಡಿತ್ತು. ಅವನ ಹೃದಯ ಕೃತಜ್ಞತೆಯಿಂದ ತುಂಬಿ ಹೋಯಿತು.

"ನಾನು ಕಾಲೇಜ್ ಸೇರಿದುದು ಸಾರ್ಥಕವಾಯಿತು ಶ್ರೀಧರ್."

"ಕಾಲೇಜ್ ಜೀವನ ಸಾರ್ಥಕಪಡಿಸಿಕೊಳ್ಳುವುದು ವಿದ್ಯಾರ್ಥಿಯ ಕೈಯಲ್ಲಿದೆ."

"ನನ್ನ ಜೀವನ ಸಾರ್ಥಕಪಡಿಸಿಕೊಳ್ಳಬಲ್ಲೆ."

"ಹೇಗೆ?"

"ನಿನ್ನ ಸ್ನೇಹದಿಂದ—ವಿಶ್ವಾಸದಿಂದ—ಉಪದೇಶದಿಂದ.'

"ಕುರುಡ ಕುರುಡನಿಗೆ ದಾರಿ ತೋರಿಸಿದಂತಾಗುತ್ತದೆ."

"ಜ್ಞಾನಕ್ಕೆ ವಿನಯ ಭೂಷಣ."

"ಇದು ವಿನಯವಲ್ಲ—ಆತ್ಮದರ್ಶನ."

"ಹಾಗೆನ್ನಬೇಡ ಶ್ರೀಧರ್. ನನ್ನ ನಂಬಿಕೆಯನ್ನು ನೀನು ಕಿತ್ತುಕೊಂಡರೆ, ನನಗೆ ಅಪಾರ ನಷ್ಟವಾಗುತ್ತದೆ."

"ಯೋಚನೆಮಾಡಬೇಡ. ದಕ್ಷರಾದವರನ್ನು ತೋರಿಸುವ ಜವಾಬ್ದಾರಿ ನನಗಿರಲಿ."

"ಯಾರವರು?"

"ನನ್ನ ಗುರುಗಳು, ಶಾಸ್ತ್ರಿಗಳು."

"ಕನ್ನಡ ಪಂಡಿತರೇ."

"ಅಲ್ಲ—ಇತಿಹಾಸದ ಪಂಡಿತರು. ಡಾ. ಚಂದ್ರಶೇಖರಶಾಸ್ತ್ರಿಗಳು. ನಿನ್ನ ಕ್ಲಾಸಿಗೆ ಬರುತ್ತಿಲ್ಲ. ಹೆಚ್ಚಾಗಿ ಹೊರಗೆ ಕಾಣಿಸಿಕೊಂಡು ಗಲಭೆ ಮಾಡುವ ಸ್ವಭಾವವೇ ಅಲ್ಲ ಅವರದು. ಆದರೆ ಅವರನ್ನು ಕಂಡರೆ, ವಿದ್ಯೆಯ ತಳ ಶೋಧಿಸುತ್ತಿರುವ ಒಬ್ಬ ಮುಮುಕ್ಷುವನ್ನು ಕಂಡಂತಾಗುತ್ತದೆ."

"ಅವರಲ್ಲಿ ಎಂದು ಹೋಗೋಣ?"

"ನಾಳೆಯೇ ಹೋಗೋಣ. ಶಾಸ್ತ್ರಿಗಳು ಮನೆ ಬಿಟ್ಟು ಎಲ್ಲಿಗೂ ಹೋಗುವುದಿಲ್ಲ."

ಎಂದು ಶ್ರೀಧರ ಮೇಲಕ್ಕೆದ್ದ. ಶಂಕರನೂ ಏಳಬೇಕಾಯಿತು.

ಹೊರಟು ಬರುವಾಗ ಶಂಕರ ಒಂದೆರಡು ಬಾರಿ ಹಿಂತಿರುಗಿ ನೋಡಿದ.

"ಏನು ನೋಡುತ್ತಿರುವೆ ಶಂಕರ—ಏನಾದರೂ ಮರೆತು ಬಂದಿರುವಿಯೇನು?"

"ಇಲ್ಲ ಇಲ್ಲ—ನನ್ನ ಕಣ್ಣು ತೆರೆಸಿದ ತಾಣ ನೋಡುತ್ತಿದ್ದೇನೆ."

"ಓಹೋ! ನಿನ್ನ ಬೋಧಿವೃಕ್ಷ. ಅಲ್ಲಿ ವೃಕ್ಷವಿಲ್ಲ—ಕಲ್ಲು ಚಪ್ಪಡಿ."

"ಸರಸ್ವತಿ ಕುಳಿತಿರುವುದು ಬಂಡೆಯ ಮೇಲಲ್ಲವೇ?"

ಶ್ರೀಧರ ನಕ್ಕು ಸುಮ್ಮಗಾದ.

# ೧೫

ನಿಂಗವ್ವನಿಗೆ ತದೇಕಧ್ಯಾನವಾಯಿತು. ಶಂಕರನ ವಿಷಯ ಎಷ್ಟು ಮಾತನಾಡಿದರೂ ತೃಪ್ತಿಯಿಲ್ಲ. ದಿನಕ್ಕೆ ನಾಲ್ಕಾರು ಬಾರಿ ಗೌರಿಯ ಬಳಿಗೆ ಬಂದು,

"ಚಿಕ್ಕವ್ವಾ, ಸಂಕ್ರಪ್ಪಾ ಕಾಗಜ ಬರೆದವ್ನಾ?" ಎಂದು ಕೇಳುವಳು.

ಗೌರಿ ನಕ್ಕು,

"ನಿನ್ನೆ ಬರೆದಿದ್ದನಲ್ಲೇ ನಿಂಗವ್ವ. ದಿನಾದಿನಾ ಬರೆಯುವುದಕ್ಕೆ ಏನಿರತ್ತೆ ಹೇಳು. ಆರೋಗ್ಯವಾಗಿದ್ದಾನೆ-ಕಾಲೇಜಿಗೆ ಸರಿಯಾಗಿ ಹೋಗುತ್ತಿದ್ದಾನೆ—ಪಾಠ ಸರಿಯಾಗಿ ಓದುತ್ತಿದ್ದಾನೆ."

"ಯಾವಾಗ ಬತ್ತಾನಂತೆ !"

"ನವರಾತ್ರಿ ರಜ ಬಂದಾಗ."

"ಒಸಿ ಮುಂಚೆ ಬರಕಾಗ್ದಾ."

"ಕಾಲೇಜು ಬಿಟ್ಟು ಹೇಗೆ ಬರುತ್ತಾನೆಯೇ ನಿಂಗವ್ವ."

ಆಶಾಭಂಗ ಹೊಂದಿದ ನಿಂಗವ್ವ ಮಾತನಾಡದೆ ಹೋಗುತ್ತಿದ್ದಳು. ಪಾರ್ವತಮ್ಮನವರ ಹತ್ತಿರಲೂ ಅವಳದು ಅದೇ ಪ್ರಶ್ನೆಮಾಲಿಕೆ. ಒಮ್ಮೊಮ್ಮೆ ಪಾರ್ವತಮ್ಮನವರು ಸಿಟ್ಟಾಗಿ ನಿಂಗವ್ವನನ್ನು ಗದರಿಸಿ ಕೊಳ್ಳುತ್ತಿದ್ದರು.

ಮನೆ ಬಿಟ್ಟು ಹೊರಗೆ ಹೋಗಲು ಹಿಂಜರಿಯುತ್ತಿದ್ದ ನಿಂಗವ್ವ ಒಂದೊಂದು ದಿನ ಮನೆಬಿಟ್ಟು ಹೊರಗೆ ಹೋಗುತ್ತಿದ್ದಳು. ಒಂದು ದಿನ ಪಾರ್ವತಮ್ಮನವರು "ಎಲ್ಲಿಗೆ ಹೋಗಿ ಬರುತ್ತೀಯೆ ನಿಂಗಿ" ಎಂದು ಕೇಳಿದರು. "ಇಂಗೇ ಕೆರೆಗಂಟಾ ಓಗಿ ಬತ್ತೀನವ್ವಾ–ನಂಗೂ ಬೇಸಾರೈತೈತೆ" ಎನ್ನುವಳು.

ಊರ ಹೊರಗಿದ್ದ ಕೆರೆಯ ಮೇಲೆ ಸದಾ ತಾವರೆಗಳು ಅರಳಿ ಶೋಭಿಸುತ್ತಿದ್ದುವು. ನಿಂಗವ್ವ ಒಂದೊಂದು ದಿನ ಕೆರೆಯ ಬಳಿ ಹೋಗಿ ತಾವರೆಯ ವಿಶಾಲವಾದ ಎಲೆಗಳನ್ನೂ, ಅರಳುತ್ತಿದ್ದ ಹೂಗಳನ್ನೂ

ನೋಡುತ್ತಾ ಕುಳಿತುಕೊಳ್ಳುವಳು. ಅವಳ ಮುಗ್ಧಮನಸ್ಸು ತಾವರೆಯ ಮೊಗ್ಗೆಯೊಂದಿಗೇ ಅರಳುತ್ತಿತ್ತು. ಅವ್ಯಕ್ತ ಆನಂದ ಅವಳ ಶುಷ್ಕ-ಜೀರ್ಣ ದೇಹವನ್ನು ವ್ಯಾಪಿಸಿಬಿಡುತ್ತಿತ್ತು. ರಸಾನುಭೂತಿ ನಿಂಗವ್ವನ ಮುಖಕ್ಕೆ ಅಪೂರ್ವಕಳೆಯನ್ನು ನೀಡುತ್ತಿತ್ತು.

ಆ ದಿನಗಳು ನಿಂಗವ್ವ ಕೆರೆಯೊಳಗಿಳಿದು ಕೈಗೆ ಎಟಕುತ್ತಿದ್ದ ತಾವರೆಯ ಹೂಗಳನ್ನಾಯ್ದುಕೊಳ್ಳುತ್ತಿದ್ದಳು. ದಾರಿಯಲ್ಲಿ ಸಿಕ್ಕುತ್ತಿದ್ದ ಹೂಗಳನ್ನು ಆಯ್ದು ಮಡಿಲು ತುಂಬಿಕೊಂಡು, ಕೆರೆಯ ಬದಿಗಿದ್ದ ಬೀರೇದೇವರ ಗುಡಿಗೆ ಹೋಗಿ, ದೇವರನ್ನು ಹೂಗಳಿಂದ ಅಲಂಕರಿಸಿ, ಕೈ ಜೋಡಿಸಿ ನಿಂತು,

"ನಮ್ಮಪ್ಪಾ—ನನ್ನ ಸ್ವಾಮಿ—ಸಂಕ್ರಪ್ಪನ್ನ ಚೆಂದಾಗಿ ಮಡಗು ಬೀರಪ್ಪ. ಅಮ್ಮವ್ರ ಮನಸ್ಗೆ ದುಕ್ಕ ಕೊಡ್ಬೇಡ—ಸುಬ್ಬಪ್ಪಂಗೆ ಒಳ್ಳೆ ಬುದ್ಧಿ ಕೊಡು—ಗೌರವ್ವಂಗೆ ಸುಕವಾಗಿ ಎರಿಗೆ ಮಾಡ್ಸು"

ಎಂದು ಬೇಡಿಕೊಳ್ಳುತ್ತಿದ್ದಳು. ದೇವರ ತಲೆಯ ಮೇಲಿದ್ದ ಹೂವು ಅಕಸ್ಮಾತ್ತಾಗಿ ಕೆಳಗೆ ಬಿದ್ದರೆ ನಿಂಗವ್ವನ ಸಂತೋಷಕ್ಕೆ ಪಾರವೇ ಇರುತ್ತಿರಲಿಲ್ಲ. ಹೂವನ್ನು ಭಕ್ತಿಯಿಂದ ಕೈಗೆತ್ತಿಕೊಂಡು ಕಣ್ಣಿಗೊತ್ತಿಕೊಂಡು, ಮನೆಗೆ ತಂದು, ಗೌರಿಯ ಕೈಯಲ್ಲಿಡುತ್ತಿದ್ದಳು.

ಶಂಕರ ಮೈಸೂರಿಗೆ ಹೊರಟುಹೋದುದು ಮನೆಯಲ್ಲಿ ಎಲ್ಲರ ಮನಸ್ಸಿಗೂ ಬೇಸರವನ್ನುಂಟುಮಾಡಿತ್ತು. ತಮ್ಮ ತಮ್ಮ ಚಿಂತೆಯಲ್ಲಿ ಲೀನರಾಗಿ ಏಕಾಂಗಿಗಳಾಗಿದ್ದ ಮನೆಯವರನ್ನು ಅವನ ನಗೆ, ಸರಸ ಕೂಡಿಸುತ್ತಿತ್ತು. ಮನೆಯ ಜೀವಕಳೆಯೇ ಅವನೊಂದಿಗೆ ಹೋದಂತಾಗಿತ್ತು.

ಶಂಕರನಿಂದ ಕಾಗದ ಬರುವುದು ನಾಲ್ಕು ದಿನ ತಡವಾದರೆ ಎಲ್ಲರಿಗೂ ತಳಮಳವಾಗುತ್ತಿತ್ತು. ಶಂಕರನ ಮೈಯಲ್ಲಿ ಹುಷಾರಿಲ್ಲವೇನೊ ಎಂದು ಎಲ್ಲರೂ ಚಿಂತಾಕ್ರಾಂತರಾಗುತ್ತಿದ್ದರು.

ತಮ್ಮನ ವಿಯೋಗ ಸುಬ್ರಹ್ಮಣ್ಯನ ಮನಸ್ಸಿನಲ್ಲಿಯೂ ಭಾವನಾತರಂಗಗಳನ್ನು ಹೊಡೆದೆಬ್ಬಿಸಿತ್ತು. ಅವನು ಚಿಂತಾ ಪರವಶನಾಗಿ ಕುಳಿತಾಗ ಗೌರಿ ಕೇಳುತ್ತಿದ್ದಳು.

"ಏನು ಯೋಚನೆಮಾಡುತ್ತಿದ್ದೀರೀಂದ್ರೆ?"

"ಇದ್ದೇ ಇರುತ್ತಲ್ಲ, ಮನುಷ್ಯನಾಗಿ ಹುಟ್ಟಿದ ಮೇಲೆ ಯೋಚನೆಗಳು ತಪ್ಪುವುದೇ?"

"ಅದೇನು ಹೇಳಬಾರದೆ? ಹೇಳಿಕೊಂಡರೆ ಮನಸ್ಸು ತುಸ ಹಗುರವಾಗುತ್ತದೆ."

"ಮೈಸೂರಿಗೆ ಹೋಗಿ ಶಂಕರನನ್ನು ನೋಡಿಕೊಂಡು ಬರಲೇ ಎಂದು ಯೋಚಿಸುತ್ತಿದ್ದೇನೆ."

"ಹೋಗಿ ಬನ್ನಿ—ಬೇಡವೆಂದವರು ಯಾರು ?"

"ನಿನ್ನನ್ನು ಈ ಸ್ಥಿತಿಯಲ್ಲಿ ಹೇಗೆ ಬಿಟ್ಟು ಹೋಗಲಿ."

"ಅತ್ತೆಯವರು ನೋಡಿಕೊಳ್ಳುತ್ತಾರೆ."

"ಅಮ್ಮನಿಗೆ ಈಗ ಪ್ರಪಂಚವೇ ಬೇಡವಾಗಿದೆ."

"ನನ್ನ ಯೋಗಕ್ಷೇಮದ ಬಗ್ಗೆ ಅವರು ತಾತ್ಸಾರ ಮಾಡಿಲ್ಲ."

"ಹೋಗಲಿ ಬಿಡು. ಈಗ ನಾನೇಕೆ ಹೋಗಲಿ. ನವರಾತ್ರಿ ರಜಾ ಹತ್ತಿರ ಬಂತು. ಅವನೇ ಬರುತ್ತಾನಲ್ಲಾ."

ಗೌರಿ ಅದಕ್ಕೂ ಹೂಗುಟ್ಟುತ್ತಿದ್ದಳು. ಗಂಡ ನಾಲ್ಕು ನಿಮಿಷವಾದರೂ ಪ್ರಸನ್ನವಾಗಿದ್ದರೆ ಸಾಕೆಂಬುದೇ ಅವಳ ಆಕಾಂಕ್ಷೆಯಾಗಿತ್ತು.

ಒಂದೊಂದು ದಿನ ಪೂರ್ಣಗರ್ಭಿಣಿಯಾಗಿದ್ದ ಹೆಂಡತಿಯನ್ನು ಸುಬ್ರಹ್ಮಣ್ಯ ಅಕ್ಕರೆಯಿಂದ ನೋಡುವನು. ಹೃದಯ ತಂತಿಯನ್ನು ಯಾವುದೋ ಭಾವನೆ ಮಿಡಿಯುತ್ತಿತ್ತು. ಹೆಂಡತಿಯ ತಲೆಯನ್ನು ನೇವರಿಸುತ್ತಾ,

"ಭಾಗ್ಯವಂತನ ಮಗನ ಕೈ ಹಿಡಿದರೂ ನಿನಗೆ ಏನೂ ಸುಖವಾಗಲಿಲ್ಲ ಗೌರಿ" ಎನ್ನುವನು.

"ಏಕೆ ಹಾಗನ್ನುವಿರಿ?"

"ನೀನು ನನಗಿಂತ ಯೋಗ್ಯನಾದವನ ಕೈಹಿಡಿಯಬೇಕಾಗಿತ್ತು ಎಂದು ಅನೇಕ ವೇಳೆ ನನಗನಿಸಿದೆ."

"ಅಂಥ ಮಾತಾಡಬೇಡಿ. ನೀವು ನನಗೆ ಯಾವುದಕ್ಕೆ ಕಡಿಮೆ ಮಾಡಿರುವಿರಿ!"

"ಊಟ, ಉಪಚಾರ, ಒಡವೆ, ವಸ್ತ್ರಗಳಿಗೆ ಕಡಿಮೆ ಮಾಡಿಲ್ಲ.

ಆದರೆ............"

"ಆದರೇನು?............"

ಎಂದು ಗೌರಿ ಜೀವ ಕೈಯಲ್ಲಿ ಹಿಡಿದುಕೊಂಡು ಕೇಳುವಳು. ಸುಬ್ರಹ್ಮಣ್ಯ 'ಹೋಗಲಿ ಬಿಡು' ಎಂದುಬಿಡುತ್ತಿದ್ದ.

ಸುಬ್ರಹ್ಮಣ್ಯನ ಹೃದಯದಲ್ಲಿಯೂ ಭಾವನಾತರಂಗಗಳೇಳುತ್ತವೆ.—ತನ್ನವರ ಕಷ್ಟ ಸುಖವನ್ನು ಅವನೂ ಸ್ಮರಿಸಿಕೊಳ್ಳುತ್ತಾನೆ ಎಂಬ ಅನುಭವವೇ ಗೌರಿಗೆ ಹೊಸದು. ಸಹೃದಯತೆಯ ಮಾತು ಅವನಾಡಿದ ದಿನ ಗೌರಿಯು ಆನಂದ ಗಗನಕ್ಕೇರುತ್ತಿತ್ತು. ಮುಂದೆ ಕಾದಿದ್ದ ಪ್ರಸವವೇದನೆಯನ್ನು ಸಹಿಸಬಲ್ಲೆ—ಸಂತೋಷವಾಗಿ ಸಹಿಸಬಲ್ಲೆ, ಎಂಬ ಧೈರ್ಯ ಅವಳಲ್ಲಿ ಅಂಕುರಿಸುತ್ತಿತ್ತು.

ಆದರೆ ಅಂಥ ದಿವ್ಯ ದಿನಗಳು ಗೌರಿಯ ಜೀವನದಲ್ಲಿ ಪದೇಪದೇ ಬರುತ್ತಿರಲಿಲ್ಲ. ನಿತ್ಯದ ಚಿಂತೆ ತನ್ನ ಚಿಂತೆಯಿಂದ ಅವಳನ್ನು ಮುಚ್ಚುತ್ತಿತ್ತು.

ಸುಬ್ರಹ್ಮಣ್ಯನ ದೈನಂದಿನ ಕಾರ್ಯಕ್ರಮ ವ್ಯತ್ಯಾಸವಾಗಲಿಲ್ಲ. ಅವನನ್ನು ಜೀವನಪಥದಿಂದ ವಿಮುಖನನ್ನಾಗಿಸಿದ್ದ ಮೋಹಾಕರ್ಷಣೆ ಬಲಿಯುತ್ತಿತ್ತು. ಆದರೆ ಅವನ ಜೀವ ಎರಡು ಆಕರ್ಷಣೆಗಳ ಮಧ್ಯೆ ಸಿಕ್ಕಿ ತುಯ್ಯಲಾಡುತ್ತಿತ್ತು.

# ೧೬

ಉದ್ದೇಶಪೂರ್ವಕವಾಗಿಯೇ ಶ್ರೀಧರ ಶಾಸ್ತ್ರಿಗಳ ಮನೆಗೆ ಹೋಗುವ ವಿಷಯವನ್ನು ಪುನಃ ಶಂಕರನಲ್ಲಿ ಪ್ರಸ್ತಾಪಿಸಲಿಲ್ಲ. ಶಂಕರನ ಮನಸ್ಸಿನಿಂದ ಆ ವಿಷಯ ಮಾಯವಾಗದಿದ್ದರೂ ಅವನೂ ಬಾಯಿಬಿಡಲು ಹಿಂದೆಗೆದ. ಇದಕ್ಕೆ ನಾರಾಯಣಸ್ವಾಮಿಯ ದುರ್ವರ್ತನೆಯೂ ಕಾರಣವಾಗಿತ್ತು

ಶಂಕರ ರೂಮಿಗೆ ಬಂದಂದಿನಿಂದ ನಾರಾಯಣಸ್ವಾಮಿಗೆ ಅಸಮಾಧಾನವಾಗಿತ್ತು. ಒಬ್ಬ ನಿರ್ಗತಿಕ ಶ್ರೀಧರನೊಂದಿಗಿರುವುದೇ ಅವನಿಗೆ ಸಾಕಾಗಿತ್ತು. ಅವನ ಜತೆಗೆ ಈ ಹಳ್ಳಿಯ ಗಮಾರ–ತಲೆಮಾಸಿದವನೂ ಬಂದಿದ್ದ. ನಾರಾಯಣಸ್ವಾಮಿಯ ಆತ್ಮಗೌರವಕ್ಕೆ—ಪ್ರತಿಷ್ಠೆಗೆ ತುಂಬ ಧಕ್ಕೆ ಒದಗಿತ್ತು. ಅವನು ಹಾಸ್ಟೆಲ್ ವಾರ್ಡನ್ ಅವರನ್ನು ಕಂಡು ಚಮತ್ಕಾರವಾಗಿ ತನ್ನ ದುಃಖ ನಿವೇದಿಸಿಕೊಂಡ.

"ಮೂರು ಜನ ಒಂದು ರೂಮಿನಲ್ಲಿ ಇರುವುದಕ್ಕಾಗುವುದಿಲ್ಲ ಸಾರ್."

"ಏಕಪ್ಪ. ಮಿಕ್ಕ ವಿದ್ಯಾರ್ಥಿಗಳಿಲ್ಲವೇ?"

"ಸೀನಿಯರ್ ಕ್ಲಾಸಿನವರ ಜತೆ ಜೂನಿಯರ್ ಕ್ಲಾಸಿನವನನ್ನು ಸೇರಿಸಿರುವಿರಲ್ಲಾ ಸಾರ್."

"ಅವನು ಗಲಾಟೆ ಮಾಡುತ್ತಾನೆಯೆ ?"

"ಇಲ್ಲ—ಗಲಾಟೆ ಮಾಡುವುದಿಲ್ಲ. ಆದರೆ ನಮ್ಮ ಓದು ಮುಂದುವರಿಯುವುದಿಲ್ಲ. ಈ ಸಾರೆ ನಾನು ಪರೀಕ್ಷೆಗೆ ಕೂಡಬೇಕು. ಫೇಲಾದರೆ ಮನೆಯಲ್ಲಿ ಆಕ್ಷೇಪಿಸುತ್ತಾರೆ ಸಾರ್.—ರಾಮಕೃಷ್ಣನ ರೂಮಿಗೆ ಹೋಗಲು ನನಗೆ ಅಪ್ಪಣೆಕೊಟ್ಟರೆ ಉಪಕಾರವಾಗುತ್ತದೆ."

"ಅಲ್ಲಿಯೂ ಮೂವರಾಗುತ್ತೀರಲ್ಲ."

"ಅದು ಪರವಾಗಿಲ್ಲ ಸಾರ್. ಮೂವರೂ ಒಂದೇ ಕ್ಲಾಸಿನವರಾಗುತ್ತೇವೆ."

ನಾರಾಯಣಸ್ವಾಮಿಯ ಕೋರಿಕೆಯನ್ನು ವಾರ್ಡನ್ ಸಾಹೇಬರು ಈಡೇರಿಸಿದರು. ನಾರಾಯಣಸ್ವಾಮಿಯ ಉದ್ದೇಶವನ್ನರಿತ ಶ್ರೀಧರ ಒಂದು ದಿನ,

"ಈಗ ಓದು ಚೆನ್ನಾಗಿ ಸಾಗಿದೆಯೇ ನಾರಾಯಣಸ್ವಾಮಿ"

ಎಂದು ಕೇಳಿದ.

"ಸೊಗಸಾಗಿ ಸಾಗಿದೆಯಯ್ಯ."

"ರಾಮಕೃಷ್ಣನೂ ಬಹಳ ಓದುತ್ತಿರಬಹುದು."

"ಅವನು ಓದುವುದು ಕಟ್ಟಿಕೊಂಡು ನನಗೇನಯ್ಯಾ ಆಗಬೇಕು. ಆ ಮೂದೇವಿ ಶಂಕರನ ಮುಖ ನೋಡುವುದು ತಪ್ಪಿತಲ್ಲಾ ಅಷ್ಟೇ ಸಾಕು."

"ಆ ಮೂದೇವಿ ಶಂಕರ—ನಿನ್ನ ರಾಮಕೃಷ್ಣನಂಥ ಹತ್ತು ಜನ ಗಳನ್ನು ಕೊಳ್ಳಬಲ್ಲ ನಾರಾಯಣಸ್ವಾಮಿ. ಅವರಣ್ಣ ಸಾವಿರಾರು ರೂಪಾಯಿ ಕಂಪಾಯ ಕೊಡುವ ಕುಳ. ಶಂಕರನಿಗೆ ಪ್ರತಿ ತಿಂಗಳೂ ಎಷ್ಟು ಮನಿಯಾರ್ಡರ್ ಬರುತ್ತಿದೆ ನೋಡಿರುವೆಯಾ?"

"ಇಲ್ಲ. ಎಷ್ಟು ಬರುತ್ತಿದೆ?"

"ಅವರಣ್ಣ ಇನ್ನೂರು ರೂಪಾಯಿ ಕಳಿಸುತ್ತಿದ್ದಾರೆ."

"ನಿಜವಾಗಿ!"

"ಪೋಸ್ಟ್‌ಮ್ಯಾನನ್ನೇ ಕೇಳಿನೋಡು."

ನಾರಾಯಣಸ್ವಾಮಿಯ ಮುಖ ಬಣ್ಣಗೆಟ್ಟಿತು. ತಾನು ಮಾಡಿದುದು ಅನುಚಿತವಾಯಿತೆಂದು ಅವನ ಮನಸ್ಸಿಗೆ ಖಚಿತವಾಯಿತು.

"ಈ ವಿಷಯ ಮೊದಲೇ ನೀನು ನನಗೇಕೆ ಹೇಳಲಿಲ್ಲ, ಶ್ರೀಧರ್?"

"ರುಕ್ಮಿಣಮ್ಮನವರ ಮಗ ಹಣಕ್ಕಲ್ಲದೆ ಬೇರೆ ಯಾವುದಕ್ಕೂ ಬೆಲೆ ಕೊಡುವುದಿಲ್ಲವೆನ್ನುವುದು ನನಗೆ ಗೊತ್ತಿರಲಿಲ್ಲ ನಾರಾಯಣಸ್ವಾಮಿ"

ಎಂದು ಶ್ರೀಧರ ಕಟುವಾಗಿ ನುಡಿದು ಅವನ ರೂಮಿನಿಂದ ಹೊರಗೆ ಬಂದ.

ಶಂಕರನ ಮನಸ್ಸಿಗೆ ನಾರಾಯಣಸ್ವಾಮಿಯ ವರ್ತನೆ ತುಂಬ ನೋವನ್ನುಂಟುಮಾಡಿತ್ತು. 'ಲೋಕದಲ್ಲಿ ಮನುಷ್ಯನಿಗೆ ಬೆಲೆಯೇ ಇಲ್ಲವೇ?' ಎಂದು ಶಂಕರ ಯೋಚಿಸಿದ.

ಉದ್ವಿಗ್ನನಾಗಿದ್ದ ಶಂಕರನಿಗೆ ತುಸು ಸಮಾಧಾನವಾಗಲೆಂದು ಶ್ರೀಧರ ಒಂದು ದಿನ

"ಶಾಸ್ತ್ರಿಗಳ ಮನೆಗೆ ಬರುವುದಿಲ್ಲವೇ ಶಂಕರ್" ಎಂದು ಕೇಳಿದ.

"ನನ್ನನ್ನು ಕರೆದುಕೊಂಡು ಹೋಗುವವರು ಯಾರು?"

"ನಾನು."

"ನಾಲ್ಕೈದು ದಿನವಾದರೂ ನೀನು ಆ ವಿಷಯವನ್ನೇ ಎತ್ತಲಿಲ್ಲ."

"ನೀನೇ ಕೇಳಲಿ ಎಂದು ಸುಮ್ಮನಿದ್ದೆ."

"ಕೇಳಲು ನನಗೆ ಬಾಯೇ ಇಲ್ಲ ಶ್ರೀಧರ್. ನಾರಾಯಣಸ್ವಾಮಿ ನನಗೆ ದೊಡ್ಡ ಪಾಠ ಕಲಿಸಿಕೊಟ್ಟಿದ್ದಾನೆ. ಹಳ್ಳಿಯವನಾದ ನಾನು ನಿಮ್ಮನ್ನು ಮಾತನಾಡಿಸುವುದಕ್ಕೇ ಭಯವಾಗುತ್ತದೆ."

"ಎಲ್ಲರೂ ನಾರಾಯಣಸ್ವಾಮಿಯ ಹಾಗೇ ಇರುತ್ತಾರೇನಯ್ಯ?"

"ಇರಲಾರರು ಎಂದುಕೊಂಡಿದ್ದೇನೆ."

"ನನ್ನದೇ ತಪ್ಪಾಯಿತು. ಕ್ಷಮಿಸು ಶಂಕರ್."

"ನನಗಾಗಿ ನೀನು ನಾರಾಯಣಸ್ವಾಮಿ ಜತೆ ವ್ಯಾಜ್ಯ ಕಟ್ಟಿಕೊಳ್ಳ ಬೇಡ ಶ್ರೀಧರ್."

"ಸ್ನೇಹದ ಕುಣಿಕೆಯನ್ನು ಕಟಿಂಗ್‌ಪ್ಲೈಯರ್‌ನಿಂದ ಕೂಡಿಸುವುದ ಕ್ಕಾಗುವುದಿಲ್ಲ ಶಂಕರ್."

"ಈಗ ಹೋದರೆ ಶಾಸ್ತ್ರಿಗಳು ಸಿಕ್ಕುತ್ತಾರೆಯೇ?"

"ಅವರು ಮನೆ ಬಿಟ್ಟು ಎಲ್ಲಿಗೂ ಹೋಗುವುದಿಲ್ಲ. ನಡೆ, ಅವ ರನ್ನು ನೋಡಿಕೊಂಡು ಬರೋಣ."

ಶಂಕರನ ಮನಸ್ಸು ಹಗುರವಾಯಿತು. ಶ್ರೀಧರನ ಜತೆ ಸಂತೋಷ ವಾಗಿ ಹೊರಟ.

ಅಗ್ರಹಾರದಲ್ಲಿದ್ದ ಶಾಸ್ತ್ರಿಗಳ ಮನೆಯ ಹೊರಬಾಗಿಲು ಹಾಕಿತ್ತು. ಶಂಕರ ಸಂಶಯಗೊಂಡು

"ಶಾಸ್ತ್ರಿಗಳು ಮನೆಯಲ್ಲಿದ್ದಾರೆಯೋ ಇಲ್ಲವೋ" ಎಂದ.

ಶ್ರೀಧರ ಹೊರಗಡೆ ನಿಂತುಕೊಂಡು ಕೂಗಿದ. ಒಳಗಿನಿಂದ ಎಂಟು ವರ್ಷದ ಹುಡುಗಿ ಬಂದು ಬಾಗಿಲು ತೆಗೆದು ಶ್ರೀಧರನನ್ನು ಗುರುತಿಸಿದಳು.

"ಶಾಸ್ತ್ರಿಗಳು ಇದ್ದಾರೆಯೇ?" ಎಂದು ಕೇಳಿದ.

"ಇದ್ದಾರೆ—ಬನ್ನಿ" ಎಂದು ಹುಡುಗಿ ಹೇಳಿದಳು.

ತೊಟ್ಟಿಯಲ್ಲಿ ದೀಪ ಉರಿಯುತ್ತಿತ್ತು. ಶಾಸ್ತ್ರಿಗಳು ಕೈಯಲ್ಲಿ ಒಂದು ತಾಳೇಗರಿ ಗ್ರಂಥ ಹಿಡಿದು, ದಪ್ಪ ಕನ್ನಡಕ ಧರಿಸಿ, ಅದನ್ನೋದಲು ಪ್ರಯತ್ನಿಸುತ್ತಿದ್ದರು.

ಶ್ರೀಧರ ಶಂಕರನೊಂದಿಗೆ ಒಳಕ್ಕೆ ಬರಲು ಶಾಸ್ತ್ರಿಗಳು ಹಸ್ತಪ್ರತಿ ಮೇಜಿನ ಮೇಲಿಟ್ಟು, ಕನ್ನಡಕ ತೆಗೆದು,

"ಬನ್ನಿ—ಬನ್ನಿ ಶ್ರೀಧರ್"

ಎಂದು ವಿಶ್ವಾಸಪೂರ್ವಕವಾಗಿ ಸ್ವಾಗತ ಬಯಸುತ್ತಾ,

"ಇವರು ಯಾರು?" ಎಂದು ಕೇಳಿದರು.

"ನನ್ನ ಸ್ನೇಹಿತರು—ಹಾಸ್ಟೆಲಿನಲ್ಲಿ ರೂಮ್‌ಮೇಟ್—ತಮ್ಮ ಪರಿಚಯ ಮಾಡಿಕೊಡಲು ಕರೆದುಕೊಂಡು ಬಂದೆ."

"ಬಹಳ ಸಂತೋಷ. ಕುಳಿತುಕೊಳ್ಳಿಯಪ್ಪ."

ಗೆಳೆಯರು ಶಾಸ್ತ್ರಿಗಳ ಸಮೀಪದಲ್ಲಿ ಕಬ್ಬಿಣದ ಮಂಚದ ಮರದ ಹಲಗೆಗಳ ಮೇಲಿದ್ದ ಪುಸ್ತಕಗಳನ್ನು ಒತ್ತರಿಸಿ ಸ್ಥಳ ಮಾಡಿಕೊಂಡು ಕುಳಿತರು.

"ಇವರು ಈ ವರ್ಷ ಕಾಲೇಜಿಗೆ ಬಂದಿದ್ದಾರೆಯೇ?"

"ಹೌದು ಸಾರ್."

"ನೀವು ಇತಿಹಾಸದ ವಿದ್ಯಾರ್ಥಿಗಳೇ?"

"ಹೌದು ಸಾರ್."

ಶಾಸ್ತ್ರಿಗಳು ಶ್ರೀಧರನ ಕಡೆ ತಿರುಗಿ

"ನೀವು ನಮ್ಮ ಮನೆಗೆ ಬಂದು ಬಹಳ ದಿವಸವಾಯಿತು ಶ್ರೀಧರ್. ತುಂಬಾ ಓದುತ್ತಿರುವಿರೋ ?"

"ಇಲ್ಲ ಸಾರ್. ವಿನಾ ಕಾರಣ ನಿಮ್ಮ ಹೊತ್ತೇಕೆ ಕಳೆಯಬೇಕೆಂದು ಬರಲಿಲ್ಲ."

"ಹಾಗೆ ತಿಳಿಯಬೇಡೀಪ್ಪ, ಬರುತ್ತಿರಿ. | ವಿದ್ಯಾಕಾಂಕ್ಷಿಗಳಾದ ವಿದ್ಯಾರ್ಥಿಗಳೇ ಅಧ್ಯಾಪಕನ ಆಸ್ತಿ."|

ಎಂದು ಶಾಸ್ತ್ರಿಗಳು ಶಂಕರನ ಕಡೆ ತಿರುಗಿ ಕೂಲಂಕಷವಾಗಿ ಅವನ ಯೋಗಕ್ಷೇಮ ವಿಚಾರಿಸಿಕೊಂಡರು. ಶಾಸ್ತ್ರಿಗಳ ಎಂಟು ವರ್ಷದ ಮಗಳು

ಒಂದು ತಟ್ಟೆಯಲ್ಲಿ ಮೂರು ಲೋಟಾ ಕಾಫಿಯಿಟ್ಟು ತಂದು, ಮೇಜಿನ ಮೇಲಿಟ್ಟಳು.

"ಈಗೇಕೆ ಸಾರ್ ಕಾಫಿ."

"ಅಪರೂಪಕ್ಕೆ ನೀವೂ ನಿಮ್ಮ ಸ್ನೇಹಿತರೂ ಬಂದಿದ್ದೀರಿ. ಸ್ವಲ್ಪ ಕಾಫಿಯಾದರೂ ಕೊಡಬೇಡವೇ ?"

ಶಂಕರ ಕಾಫಿ ಕೈಗೆತ್ತಿಕೊಂಡು ಶಾಸ್ತ್ರಿಗಳ ಮನೆಯನ್ನೆಲ್ಲಾ ಒಮ್ಮೆ ಅವಲೋಕಿಸಿದ. ಎರಡು ಕಂಬದ ಆ ತೊಟ್ಟಿಯೇ ಶಾಸ್ತ್ರಿಗಳ ಅಧ್ಯಯನ ಮಂದಿರವಾಗಿತ್ತು. ಮೇಜಿನ ಮೇಲೆ, ಮಂಚದ ಮೇಲೆ, ಪಕ್ಕದಲ್ಲಿದ್ದ ಸ್ಟೂಲಿನ ಮೇಲೆ ಪುಸ್ತಕದ ರಾಶಿಗಳು.

ಕಾಫಿ ಕುಡಿದು ಮುಗಿಸಿ, ಶ್ರೀಧರ ಲೋಟಗಳನ್ನು ಸಂಗ್ರಹಿಸಿ ತಟ್ಟೆಯಲ್ಲಿಟ್ಟು,

"ನನ್ನ ಬಗ್ಗೆ ತಾವು ತೋರುತ್ತಿರುವ ವಿಶ್ವಾಸವನ್ನೇ ನನ್ನ ಸ್ನೇಹಿತನ ಬಗ್ಗೆಯೂ ತೋರಬೇಕು ಸಾರ್. ತಮ್ಮ ಶಿಷ್ಯವೃತ್ತಿಯನ್ನು ಅವನಿಗೂ ಅನುಗ್ರಹಿಸಬೇಕು."

"ಎಷ್ಟು ದೊಡ್ಡ ಮಾತಾಡುವಿರಿ ಶ್ರೀಧರ್. ನಾನೂ ನಿಮ್ಮ ಹಾಗೇ ಒಬ್ಬ ವಿದ್ಯಾರ್ಥಿ. ಕಸ ಕೆದಕುವ ಬಡ ಉಪಾಧ್ಯಾಯ."

"ಕಸದಲ್ಲಿ ಕಸವರ ಹುಡುಕುವ ತಾವು ಬಡವರಲ್ಲ ಸಾರ್—ಘನ ಶ್ರೀಮಂತರು."

"ಇವರ ಮಾತು ನಂಬಬೇಡಿ ಶಂಕರ್."

"ತಮ್ಮ ಪುಸ್ತಕ ಎಲ್ಲಿಯ ವರೆಗೆ ಬಂತು ಸಾರ್?"

"ಯಾವುದು?"

"ಕರ್ನಾಟಕ ಸಂಸ್ಕೃತಿಯ ಮೇಲೆ ತಾವು ಬರೆಯುತ್ತಿದ್ದುದು."

"ಬರೆದು ಮುಗಿಸಿ, ಮಿಕ್ಕವುಗಳ ಜತೆಯಲ್ಲಿ ಭದ್ರವಾಗಿಟ್ಟಿದ್ದೇನೆ."

"ವಿಶ್ವವಿದ್ಯಾನಿಲಯ ಅದನ್ನು ಪ್ರಕಟಿಸುವ ವಿಷಯ ಏನಾಯಿತು ಸಾರ್."

"ನಮ್ಮ ಕೆಲಸ ಯಾರಿಗೆ ಬೇಕು ಶ್ರೀಧರ್. ಇದರಿಂದ ಯಾರಿಗೇನು ಪ್ರಯೋಜನ?"

"ರಾಷ್ಟ್ರದ ಬುನಾದಿ ಭದ್ರವಾಗಬೇಡವೇ?"

"ಆಗಬೇಕು. ಆದರೆ ನಮಗೆ ರಾಷ್ಟ್ರಾಭಿಮಾನವಿದೆಯೇ?"

"ಹೀಗಾದರೆ ಮುಂದೇನು ಗತಿ ಸಾರ್."

"ಕಾಲಾಯ ತಸ್ಮೈ ನಮಃ–ನಾನು ನಿರಾಶಾವಾದಿಯಲ್ಲ ಶ್ರೀಧರ್. ಇದು ಸಂಧಿಕಾಲ. ವ್ಯಕ್ತಿ ಜೀವನ ಹಾಗೂ ರಾಷ್ಟ್ರ ಜೀವನ ತಲೆಕೆಳಗಾಗುತ್ತಿದೆ. ಯಾವುದನ್ನು ನಾವು ಇದುವರೆಗೆ ದೊಡ್ಡದು ಎಂದು ಭಾವಿಸಿದ್ದೆವೋ ಅದಕ್ಕೆ ಬೆಲೆಯಿಲ್ಲ. ಅದರ ಸ್ಥಾನದಲ್ಲಿ ಇಂದು ಹೊಸ ಲಕ್ಷ್ಯಗಳು ಹುಟ್ಟಿಕೊಳ್ಳುತ್ತಿವೆ. ಇವುಗಳೂ ಬರಬೇಕು. ಕಾಲ ಚಕ್ರದಡಿಯ ಕೆಳಗೆ ಸಿಕ್ಕಿ ಯಾವುದು ಉಳಿಯುತ್ತದೆಯೋ ಅದೇ ಶಾಶ್ವತವಾಗಿ ನಿಲ್ಲುವುದು."

"ಈ ಮಂಥನದಲ್ಲಿ ಎಲ್ಲವೂ ಹಾಳಾಗುತ್ತಿದೆಯಲ್ಲ ಸಾರ್."

"ನೀವು ಗೀತಾಭಕ್ತರು ಶ್ರೀಧರ್. ಗೀತೆ ಹಾಳಾಗಿದೆಯೇ?"

"ಇಲ್ಲ."

"ಉಪನಿಷತ್ತು ನಾಶವಾಗಿದೆಯೇ?"

"ಇಲ್ಲ."

"ರಾಮಾಯಣ, ಭಾರತ, ಭಾಗವತಗಳ ಬಗ್ಗೆ ನಮ್ಮ ಜನರ ಆಸಕ್ತಿ ಕಡಿಮೆಯಾಗಿದೆಯೇ?"

"ಇಲ್ಲ."

"ಏಕಾಗಿಲ್ಲ ವಿಚಾರ ಮಾಡಿರುವಿರಾ? ಗೀತೆಯ ಕಾಲ ಸುಮಾರು ಕ್ರಿ. ಪೂ. ಐದನೆಯ ಶತಮಾನ ಎಂದು ಇಟ್ಟುಕೊಳ್ಳೋಣ. ಅಲ್ಲಿಂದ ಈವರೆಗೆ—ಅಂದರೆ ಈ ೨೫೦೦ ವರ್ಷಗಳಲ್ಲಿ ಇಸ್ಲಾಂ, ಜಾರತುಷ್ಟ್ರ ಧರ್ಮ, ಕ್ರೈಸ್ತ ಧರ್ಮಗಳಲ್ಲದೆ ಸಾಮ್ರಾಜ್ಯವಾದ, ಬಂಡವಾಳ ವಾದ, ಮಾರ್ಕ್ಸ್ ವಾದ, ಕಮ್ಯೂನಿಸಂ, ಹೈತುಕ ವಾದ, ಚಾರ್ವಾಕ ವಾದ ಫಾಸಿಸಂಗಳೆಲ್ಲಾ ಬಂದು ಹೋದುವು. ಇವುಗಳು ಕೆಲಕೆಲಕಾಲದಲ್ಲಿ ನಮ್ಮ ಜೀವನದ ಆದ್ಯತತ್ತ್ವಗಳನ್ನು ಪ್ರತಿಭಟಿಸಿ, ಅವುಗಳನ್ನು ನಾಶ ಪಡಿಸಲೆತ್ನಿಸಿದುವು. ಆದರೆ ನಾವೂ ಬದುಕಿದ್ದೇವೆ—ನಮ್ಮ ರಾಷ್ಟ್ರವೂ ಬದುಕಿದೆ—ನಮ್ಮ ಧರ್ಮವೂ ಬದುಕಿದೆ. ಇಷ್ಟೊಂದು ವಿಚಾರ ಪಂಥ

ಗಳನ್ನು ಜೀರ್ಣಿಸಿಕೊಳ್ಳಲು ಸಮರ್ಥವಾಗಿರುವ ಭಾರತದ ಮೂಲಭೂತ ಶಕ್ತಿ ಯಾವುದೆಂದು ತಿಳಿಯಲು ನಾವು ಯತ್ನಿಸಿದರೆ ನಮ್ಮ ನಿರ್ವಿಣ್ಣತೆ ಮಾಯವಾಗುತ್ತದೆ."

"ಭಾರತದ ಮೂಲಭೂತ ಶಕ್ತಿ ಯಾವುದು?"

"ವಿಷಯ ವಿಸ್ತಾರವಾದುದು. ನಾಲ್ಕು ಮಾತಿನಲ್ಲಿ ಅದನ್ನು ಅಡಗಿಸಿ ಹೇಳುವುದು ಕಷ್ಟ. ಪ್ರಯತ್ನ ಮಾಡಿ ನೋಡುತ್ತೇನೆ. ವಿಶ್ವ ಸಂಸ್ಕೃತಿಯನ್ನು ಇಬ್ಭಾಗವಾಗಿ ಮಾಡಬಹುದು—ಪಾಶ್ಚಾತ್ಯ ಮತ್ತು ಪ್ರಾಚ್ಯ. ಪಾಶ್ಚಾತ್ಯ ಸಂಸ್ಕೃತಿ ನಾಗರಿಕವಾದುದು. ಪ್ರಾಚ್ಯ ಸಂಸ್ಕೃತಿ ಆರಣ್ಯಕವಾದುದು. ನಾಗರಿಕ ಜೀವನದ ಕಡೆಗೇ ಪಾಶ್ಚಾತ್ಯ ಸಂಸ್ಕೃತಿ ಹೆಚ್ಚು ಲಕ್ಷ್ಯ ಕೊಟ್ಟುದರಿಂದ ಅದನ್ನು ಪ್ರಾಪಂಚಿಕ ಸಂಸ್ಕೃತಿಯೆಂದು ಕರೆಯ ಬಹುದು. ಪ್ರಾಚ್ಯರು ಮಾನವನ ಆತ್ಮವಿಕಾಸಕ್ಕೆ ಹೆಚ್ಚು ಲಕ್ಷ್ಯ ಕೊಟ್ಟುದರಿಂದ ಅವರ ಸಂಸ್ಕೃತಿಯನ್ನು ಅಧ್ಯಾತ್ಮ ಸಂಸ್ಕೃತಿಯೆಂದು ಕರೆಯ ಬಹುದು. ಪಾಶ್ಚಾತ್ಯರು ಅಧ್ಯಾತ್ಮದ ಕಡೆಗೆ ಗಮನ ಕೊಡಲಿಲ್ಲವೆಂದೂ ಪ್ರಾಚ್ಯರು ನಾಗರಿಕ ಜೀವನವನ್ನು ಸಂಪೂರ್ಣವಾಗಿ ಅಲ್ಲಗಳೆದರೆಂದೂ ಭಾವಿಸಬೇಡಿ. ಒಂದರಲ್ಲಿ ನಾಗರಿಕ ಜೀವನ, ಇನ್ನೊಂದರಲ್ಲಿ ಅಧ್ಯಾತ್ಮ ಸ್ಫುಟವಾಗಿ ಅರಳಿರುವುದರಿಂದ ಈ ರೀತಿ ವಿಂಗಡಿಸಬೇಕಾಗಿದೆ.

"ಪಾಶ್ಚಾತ್ಯರಿಗೆ ಇಹಜೀವನ ಒಂದೇ ಶಾಶ್ವತ. ಇಲ್ಲಿ ಇರುವ ವರೆಗೆ ಸುಖಪಡಬೇಕು. ಸುಖಪಡುವುದಕ್ಕೆ ಬೇಕಾಗುವ ಎಲ್ಲ ಸಾಧನಗಳನ್ನೂ ನಿರ್ಮಿಸಿಕೊಳ್ಳಬೇಕು, ಎಂದವರು ಹೊರಟರು.

"ಪ್ರಾಚ್ಯರಿಗೆ ಇಹಜೀವನ ಆತ್ಮನ ಅನಂತ ಯಾತ್ರೆಯ ಒಂದು ಘಟ್ಟ ಮಾತ್ರ. ಈ ಜೀವನಕ್ಕೆ ಬರುವ ಮುನ್ನ ಮಾನವ ಅನೇಕ ಅವಸ್ಥೆಗಳನ್ನನುಭವಿಸಿದ್ದಾನೆ. ಅನೇಕ ಅವತಾರಗಳನ್ನೆತ್ತಿದ್ದಾನೆ. ಇನ್ನು ಮುಂದೆಯೂ ಅವನ ಯಾತ್ರೆ ಸಾಗುತ್ತದೆ. ಹುಟ್ಟು, ಸಾವುಗಳ ಈ ಸತತ ಚಕ್ರ ವಿಭ್ರಮಣಕ್ಕೆ ನಿಲುಗಡೆ ಎಲ್ಲಿದೆ?' 'ಈ ತಿರುಗಣಿ ಮಡುವಿನಿಂದ ಮನುಷ್ಯ ಪಾರಾಗುವುದು ಹೇಗೆ? ಎಂದು ದಿದೃಕ್ಷೆಗೆ ಪ್ರಾಚ್ಯರು ವಿಶೇಷ ಗಮನವಿತ್ತರು.

"ಪ್ರಾಚ್ಯರ ಆಧ್ಯಾತ್ಮಿಕ ಪ್ರಯೋಗ ಶಾಲೆಯಿಂದ ಹೊರಬಿದ್ದಿರುವ ಕೆಲವು ಸಿದ್ಧಾಂತಗಳನ್ನು ಗಮನಿಸಬಹುದು.—

೧) ಆತ್ಮ ಅಮರವಾದುದು. ಅದು ಅವಿನಾಶಿ. ಪಂಚಭೂತಗಳು ಅದರ ಮೇಲೆ ಯಾವ ಪ್ರಭಾವವನ್ನೂ ಬೀರಲು ಸಾಧ್ಯವಿಲ್ಲ.

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।
ನ ಚೈನಂ ಕ್ಲೇದಯಂತ್ಯಾಪೋ ನಶೋಷಯತಿ ಮಾರುತಃ ॥

ಅವನು ಒಂದೇ ರೀತಿಯಲ್ಲಿರುವವನು, ಎಲ್ಲೆಲ್ಲಿಯೂ ಹರಡಿಕೊಂಡಿರುವವನು, ಸ್ಥಿರನಾದವನು, ಅವ್ಯಕ್ತನು, ಅಚಿಂತ್ಯನು, ಅವಿಕಾರನು.

೨) ಆತ್ಮನು ಸರ್ವ ಭೂತಸ್ಥನಾಗಿದ್ದಾನೆ. ಅವನಿಲ್ಲದಿರುವ ಠಾವೇ ಇಲ್ಲ.

ಸರ್ವಭೂತಸ್ಥಮಾತ್ಮಾನಾಂ ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಮುಕ್ತಾತ್ಮಾ ಸರ್ವತ್ರ ಸಮದರ್ಶನಃ ॥

೩) ಸರ್ವಭೂತಸ್ಥನಾದ ಆತ್ಮನನ್ನು ಯಾವ ಮಾರ್ಗದಿಂದ ಹೋದರೂ ಕಾಣಬಹುದು. ಎಲ್ಲ ಮಾರ್ಗಗಳೂ ಗ್ರಾಹ್ಯವೇ. ಆತ್ಮನನ್ನು ಅರಸುವವನು ನಿಸ್ಪೃಹನೂ ನಿಷ್ಕಾಮನೂ ಆಗಿರಬೇಕು.

ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾನ್ಶ್ಚರತಿ ನಿಸ್ಪೃಹಃ।
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥

೪) ಸತ್ತ್ವ, ಶಕ್ತಿ, ಸೌಂದರ್ಯ ಎಲ್ಲೆಲ್ಲಿದೆಯೋ ಅಲ್ಲೆಲ್ಲಾ ಆತ್ಮ ವಿರಾಜಿಸುತ್ತಾನೆ.

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ
ತತ್ತದೇವಾವಗಚ್ಛ ತ್ವಂ ಮಮ ತೇಜೊಂಶ ಸಂಭವಮ್ ॥

"ಭಗವದ್ಗೀತೆಯ ಈ ನಾಲ್ಕು ಮಾತುಗಳು ಭಾರತ ಸಂಸ್ಕೃತಿಯ ಹೆಚ್ಚಳವನ್ನು ಸಾರುತ್ತಿವೆ. ಭಾರತದ ಮೂಲಭೂತ ಶಕ್ತಿ ಅಡಗಿರುವುದು ಈ ಆತ್ಮತತ್ತ್ವದಲ್ಲಿಯೇ."

"ಇಂಥ ಸರ್ವೋತ್ತಮವೂ, ಮಹೋನ್ನತವೂ, ವಿಶ್ವವ್ಯಾಪಿಯೂ ಆದ ತತ್ತ್ವದ ಮೇಲೆ ಭಾರತ ಸಂಸ್ಕೃತಿ ಬೆಳೆದಿದ್ದರೂ ಅದೇಕೆ ಚಿರಂತನ ದಾಸ್ಯ, ದಾರಿದ್ರ್ಯ, ದೌರ್ಬಲ್ಯಗಳಿಗೀಡಾಗಬೇಕಾಯಿತು."

"ಆತ್ಮತತ್ತ್ವ ಪುಸ್ತಕದ ಬದನೇಕಾಯಿಯಲ್ಲ. ತತ್ತ್ವ, ಆಚರಣೆ; ಜ್ಞಾನ, ಕರ್ಮ ಎರಡಕ್ಕೂ ಮೇಳವಿರಬೇಕು ಎನ್ನುವ ಮಾತನ್ನು ಈಶಾವಾಸ್ಯ ಸಮರ್ಥಿಸುತ್ತದೆ. ಗೀತೆಯ ಉದ್ದಕ್ಕೂ ಭಗವಂತ ಜ್ಞಾನ ಕರ್ಮಗಳ ಸಮನ್ವಯವನ್ನೇ ಸಾರುತ್ತ ಹೋಗಿದ್ದಾನೆ. ಜ್ಞಾನ, ಕರ್ಮಗಳಿಗಿದ್ದ ಸೇತುವೆಯನ್ನು ನಾವು ಕಡಿದು ಹಾಕಿದುದೇ ನಮ್ಮೆಲ್ಲ ಕಷ್ಟಗಳಿಗೂ ಕಾರಣವಾಯಿತು. ಇಂದು ನಾವು ಮಾಡಬೇಕಾಗಿರುವ ಕೆಲಸ ಈ ಸೇತುವೆಯ ಪುನರ್ನಿರ್ಮಾಣ."

"ನಾವು ಮಾಡಬಲ್ಲೆವೇ?"

"ಪ್ರಯತ್ನವಿಲ್ಲದೆಯೇ ಫಲ ಸಿಕ್ಕುತ್ತದೆಯೇ? ವಿಚಾರ ಮಾಡಿ. ವಿಚಾರ ಒಪ್ಪಿಕೊಂಡುದನ್ನು ಆಚರಣೆಯಲ್ಲಿ ತರಲು ಪ್ರಯತ್ನಿಸಿ."

ಶಾಸ್ತ್ರಿಗಳ ಮನೆಯ ಹಜಾರದ ಗಡಿಯಾರ ಒಂಭತ್ತು ಗಂಟೆ ಬಾರಿಸಿತು. ಶ್ರೀಧರ ಎದ್ದು ನಿಂತು ಕೈಮುಗಿದು

"ತಮ್ಮ ಕೆಲಸಕ್ಕೆ ಅಡ್ಡಿ ಬಂದೆವು."

"ಅಮರರಾದ ನಾವು ಕಾಲಕ್ಕೇಕೆ ಅಧೀನರಾಗಬೇಕು."

ಎಂದು ಶಾಸ್ತ್ರಿಗಳು ನಸುನಗುತ್ತ ನುಡಿದರು. ಶಂಕರನೂ ನಮಸ್ಕರಿಸಿ ಹೊರಟಾಗ

"ಆಗಾಗ್ಗೆ ಬರುತ್ತಿರಿಯಪ್ಪ."

ಎಂದು ಶಾಸ್ತ್ರಿಗಳು ವಿಶ್ವಾಸಪೂರ್ವಕವಾಗಿ ಆಮಂತ್ರಣವಿತ್ತರು.

ಗೆಳೆಯರು ಶಾಸ್ತ್ರಿಗಳ ದಿವ್ಯವಾಣಿಯ ಗುಂಗಿನಲ್ಲೇ ಹೊರಬಿದ್ದರು. ಸ್ವಲ್ಪ ದೂರ ಬಂದ ಮೇಲೆ ಶಂಕರ ಚೇತರಿಸಿಕೊಂಡು

"ಶಾಸ್ತ್ರಿಗಳ ವಿಷಯ ನೀನು ಸರಿಯಾಗಿ ನನಗೆ ಹೇಳಲೇ ಇಲ್ಲ ಶ್ರೀಧರ್" ಎಂದ.

"ಕನ್ನಡಿಯನ್ನು ವರ್ಣಿಸುವುದಕ್ಕಿಂತ ಅದನ್ನೇ ಮುಂದಿಡುವುದು ಲೇಸು ಎಂದು ಸುಮ್ಮನಿದ್ದೆ.'

"ಪಾಂಡಿತ್ಯ, ಸೌಜನ್ಯ ಎರಡೂ ಹೀಗೆ ಸೇರುವುದು ಅಪರೂಪ ವಲ್ಲವೇ?"

"ಶಾಸ್ತ್ರಿಗಳ ಪಾಂಡಿತ್ಯ, ಸೌಜನ್ಯ ಎರಡೂ ಅಗಾಧವಾದುವು

ಶಂಕರ್. ಭಾರತದ ಯಾವ ವಿಶ್ವವಿದ್ಯಾನಿಲಯದಲ್ಲಿಯೂ ಇವರ ಸಮಕ್ಕೆ ನಿಲ್ಲಬಲ್ಲ ಇತಿಹಾಸ ಪಂಡಿತರಿಲ್ಲವೆಂದು ನಾನು ಧೈರ್ಯವಾಗಿ ಹೇಳಬಲ್ಲೆ. ಇವರ ಸೌಜನ್ಯದ ಬಗ್ಗೆ ಏನೆಂದು ಹೇಳಲಿ. ಹತ್ತಾರು ವರ್ಷಗಳು ಒಂದು ವಿಷಯ ಅಭ್ಯಾಸ ಮಾಡಿ, ಟಿಪ್ಪಣಿ ಸಿದ್ಧಗೊಳಿಸಿರುತ್ತಾರೆ. ಆ ವಿಷಯದ ಬಗ್ಗೆ ಯಾರಾದರೂ ಬರೆಯಲು ಉತ್ಸುಕರಾದರೆ ತಮ್ಮ ಸಮಸ್ತ ಭಂಡಾರವನ್ನೂ ಅವರಿಗೆ ಧಾರೆಯೆರೆಯುತ್ತಾರೆ. ಯಾರು ಬರೆದರೇನು—ಆ ವಿಷಯ ಬೆಳಕಿಗೆ ಬಂದರೆ ಸಾಕು ಎನ್ನುವ ಮನೋಭಾವ."

"ಶ್ರೀಧರ್, ನಿನ್ನ ಉಪಕಾರ ಮರೆಯಲಾರೆನಪ್ಪಾ. ನಿನ್ನಂಥ ಗೆಳೆಯ—ಶಾಸ್ತ್ರಿಗಳಂಥ ಗುರುಗಳು ದೊರೆತುದು ನನ್ನ ಪೂರ್ವಾರ್ಜಿತ ಪುಣ್ಯ"

ಎಂದು ಕಳಕಳಿಯಿಂದ ನುಡಿದ. ನಿಷ್ಕಲ್ಮಷವಾದ ಅವನ ಹೃದಯ ಆನಂದದಿಂದ ತುಂಬಿ ತುಳುಕುತ್ತಿತ್ತು.

೧೭

ಗೌರಿಗೆ ಪ್ರಸವವೇದನೆ ಆರಂಭವಾಗಿತ್ತು. ಬಾಣಂತನ ಮಾಡುವುದಕ್ಕೆ ಪಾರ್ವತಮ್ಮನವರು ಸಜ್ಜಾಗಿದ್ದರು. ನಿಂಗವ್ವ 'ಪುಟ್ಟ ಧಣಿ'ಯನ್ನು ಕಾಣಲು ಕಾತರಳಾಗಿದ್ದಳು.

ತೊಟ್ಟಿಲಿಡುವ ವೇಳೆಗೆ ಶಂಕರ ಊರಿಗೆ ಬರಬೇಕೆಂದೇ ಎಲ್ಲರ ಮನದ ಆಕಾಂಕ್ಷೆಯಾಗಿತ್ತು. ಸುಬ್ರಹ್ಮಣ್ಯ ತಮ್ಮನಿಗೆ ಕಾಗದ ಬರೆದು, ಮನೆಯ ಸಂದರ್ಭ ವಿವರಿಸಿದ್ದ.

ಮೈಸೂರು ಬಿಡುವುದು ಶಂಕರನಿಗೆ ಸಾಧ್ಯವಾಗಲಿಲ್ಲ. ಅದೇ ಪಾಠ ಪ್ರವಚನಗಳು ಆರಂಭವಾಗಿದ್ದುವು. 'ಮೂರು ವಾರಗಳಲ್ಲಿ ನವರಾತ್ರಿ ರಜಾ ಆರಂಭವಾಗುತ್ತದೆ. ಆಗ ಬರುತ್ತೇನೆ' ಎಂದು ಶಂಕರ ಊರಿಗೆ ಉತ್ತರ ಬರೆದ.

ಶಂಕರನ ಕಾಗದ ಮನೆಯಲ್ಲಿ ಎಲ್ಲರಿಗೂ ನಿರಾಶೆಯನ್ನುಂಟು ಮಾಡಿತು. ನಿಂಗವ್ವ ಗೊಣಗಿಕೊಳ್ಳುತ್ತ,

"ಇಸ್ಕೂಲಿಗೆ ಹ್ವಾದ್ರೆ ಹೈದಗಳ್ಗೆ ಮನೆಯೇ ಮರೆತುಹೋಗತ್ತವ್ವಾ" ಎಂದಳು.

ಸುಬ್ರಹ್ಮಣ್ಯ ನಿಂಗವ್ವನಿಗೆ

"ಶಂಕರನಿಗೆ ಕಾಲೇಜು ಹೊಸದು ನಿಂಗವ್ವ. ಆರಂಭದಲ್ಲಿಯೇ ಪಾಠಗಳು ತಪ್ಪಿಹೋದರೆ ಆಮೇಲೆ ಕೂಡಿಸಿಕೊಳ್ಳುವುದು ಕಷ್ಟವಾಗುತ್ತದೆ. ಮೂರು ವಾರವೇನೂ ದೂರವಿಲ್ಲ.—ಆಡಿಯಾಡುತ್ತಾ ಬಂದು ಬಿಡುತ್ತದೆ" ಎಂದು ಸಮಾಧಾನ ಹೇಳಿದ.

ಹೆರಿಗೆ ಕಷ್ಟವಾದರೂ ಅಪಾಯಕಾರಿಯಾಗಲಿಲ್ಲ. ಪಾರ್ವತಮ್ಮನವರ ಜಾಗರೂಕತೆಯಿಂದಾಗಿ ಗೌರಿ ಗಂಡಾಂತರದಿಂದ ಪಾರಾಗಿ ಪುತ್ರರತ್ನವನ್ನು ಪ್ರಸವಿಸಿದಳು.

ಪಾರ್ವತಮ್ಮನವರ ಜೀವನಕ್ಕೆ ನವೋತ್ಸಾಹ, ನವಚೇತನ ಬಂದಿತ್ತು. ಮನೆಯೊಳಗಿನ ಕೆಲಸ, ಹೊಲಮನೆ ಕೆಲಸವೆರಡನ್ನೂ ಲಕ್ಷ್ಯವಿಲ್ಲದೆ ನಿರ್ವಹಿಸಿಕೊಂಡು ಹೋಗುತ್ತಿದ್ದರು.

ಪುತ್ರೋತ್ಸವ ಸಮಾರಂಭವನ್ನು ವಿಜೃಂಭಣೆಯಿಂದ ನೆರವೇರಿಸ ಬೇಕೆಂದು ಪಾರ್ವತಮ್ಮನವರು ಸೂಚಿಸಿದಾಗ ಸುಬ್ರಹ್ಮಣ್ಯ ಬೇಡವೆನ್ನ ಲಿಲ್ಲ.

"ಏನೇನು ಆಗಬೇಕಮ್ಮ" ಎಂದು ಕೇಳಿದ.

"ಆರತಿ, ಅಕ್ಷತೆ, ಶಾಂತಿಯಾಗಬೇಕು. ನಾಮಕರಣದ ದಿವಸ ಊರಿನವರಿಗೆಲ್ಲಾ ಸಮಾರಾಧನೆ ಆಗಬೇಕು."

"ನಿನಗೇನು ಬೇಕೋ ಸಂತೋಷವಾಗಿ ಮಾಡಮ್ಮ. ಯಾವುದಕ್ಕೂ ಸಂಕೋಚಪಟ್ಟುಕೊಳ್ಳಬೇಡ. ಆದರೆ..........."

"ಯಾಕೋ ಮೂಗೆಳೆಯುತ್ತೀಯಲ್ಲಾ ಸುಬ್ಬು."

"ಇಷ್ಟೆಲ್ಲಾ ಕಲಾಪಗಳು ಹಚ್ಚಿಕೊಂಡರೆ ನಿನ್ನ ಮೈಗೆ ತಡೆಯು ತ್ತದೆಯೇ?"

"ಅದಕ್ಕೆ ನಾನು ಯೋಚನೆ ಮಾಡಿದ್ದೀನಿ ಸುಬ್ಬೂ. ಚೌಡಮ್ಮ ನವರು ಬಂದು ಚಕ್ಕುಲಿ, ಉಂಡೆ ಮಾಡಿಕೊಡುತ್ತಾರೆ. ಕಮಲಮ್ಮ ಆರತಿ ಅಕ್ಷತೆ ಏರ್ಪಾಟು ನೋಡಿಕೊಳ್ಳುತ್ತಾರೆ. ಸಮಾರಾಧನೆ ಚೆನ್ನಾಗಿ ಆಗಬೇಕಪ್ಪ—ಅನ್ನ ಶಾಂತಿಯಾದರೆ ಒಳ್ಳೆಯದು. ಊರಿನ ಎಲ್ಲಾ ಜಾತಿಯವರಿಗೂ ಸುಖಭೋಜನವಾಗಬೇಕು."

"ಅದನ್ನು ಭೀಮಾಚಾರಿಗೆ ಒಪ್ಪಿಸಿಬಿಟ್ಟರೆ ಎಲ್ಲಾ ಸುಸೂತ್ರವಾಗಿ ನಡೆದುಹೋಗುತ್ತದೆ."

ಪಾರ್ವತಮ್ಮನವರು ಕಣ್ಣಲ್ಲಿ ನೀರು ತಂದುಕೊಂಡು

"ವಂಶೋದ್ಧಾರಕನ್ನ ಕಂಡಿದ್ದರೆ ಅವರೆಷ್ಟು ಸಂತೋಷಪಡುತ್ತಿ ದ್ದರೋ! ಮನೆಗೆ ಬರುವ ಮುತ್ತೈದೆಯರಿಗೆ ಅರಿಶಿನ ಕುಂಕುಮ ಕೊಡ ಬೇಕಾದರೆ ನಾನು ಅವರಿವರ ಆಜೂಜುವಾರಿ ಮಾಡುವ ಕಾಲ ಬಂತು..... ಶಂಕರನ ಮದುವೆ ಬೇಗ ಮಾಡಿಬಿಡಬೇಕು ಸುಬ್ಬೂ."

"ಮಾಡಬಹುದು. ಅವನು ಕಾಲೇಜ್ ಮುಗಿಸಲಿ ಎಂದು ನನ್ನ ಆಸೆ. ನಾನು ಕಾಲೇಜ್ ಹತ್ತಲಿಲ್ಲ; ನನ್ನ ತಮ್ಮನಾದರೂ ಪದವೀಧರ ನಾದರೆ ನಮ್ಮ ವಂಶಕ್ಕೇ ಕೀರ್ತಿ."

"ಸುಬ್ಬೂ—ನಿನ್ನ ಮಗನಿಗೆ ಏನು ಹೆಸರಿಡುತ್ತೀಯೋ?"

"ನಿನ್ನ ಮೊಮ್ಮಗನಿಗೆ ನೀನು ಯಾವ ಹೆಸರಿಟ್ಟರೂ ಅದೇ ನನಗೆ ಪ್ರಿಯವಾಗುತ್ತದೆ."

"ಅದು ನಾನು ಮಾಡುವ ಕೆಲಸವಲ್ಲಪ್ಪಾ. ನೀನೂ ಗೌರಿ ಯೋಚನೆ ಮಾಡಿ ತಿಳಿಸಿ. ಪಾಪ! ಅದರ ಮನಸ್ಸಿನಲ್ಲಿ ಏನಿದೆಯೊ?"

"ಅವಳನ್ನು ಕೇಳಿದರೆ ನನಗೇನು ಗೊತ್ತಾಗತ್ತೆ ಎನ್ನುತ್ತಾಳಮ್ಮ. ಮನೆಯಲ್ಲಿ ದೊಡ್ಡವರು ಅತ್ತೆ ಇದ್ದಾರೆ. ನೀವು ಇದ್ದೀರಿ–ಮೈದುನ ಇದ್ದಾನೆ. ನೀವೆಲ್ಲಾ ನಿಶ್ಚಯಿಸಿದ ಹೆಸರೇ ನನಗೂ ಇಷ್ಟವಾಗುತ್ತದೆ ಎನ್ನುತ್ತಾಳೆ."

"ಹೀಗಾದರೆ ಹೆಸರು ನಿಶ್ಚಯಿಸುವುದೇ ಕಷ್ಟವಾಗುತ್ತೆದೆ."

"ಈ ವಿಷಯ ಶಂಕರನಿಗೆ ಬಿಟ್ಟುಬಿಡೋಣಮ್ಮ. ಅವನು ತುಂಬ ಓದುತ್ತಾನೆ. ಒಳ್ಳೆಯ ಹೆಸರು ಆರಿಸಬಲ್ಲ."

ಪಾರ್ವತಮ್ಮನವರ ಮನಸ್ಸಿಗೆ ಅಪಾರ ಆನಂದವಾಯಿತು. ತಮ್ಮ ಮನಸ್ಸಿನಲ್ಲಾದ ಆಂದೋಲನವನ್ನು ಸ್ಮರಿಸಿಕೊಳ್ಳುತ್ತಾ

"ಅವರು ಕಣ್ಮರೆಯಾದ ಮೇಲೆ ನಾನು ತುಂಬ ಹೆದರಿದ್ದೆ ಸುಬ್ಬೂ."

"ಏಕಮ್ಮ?"

"ಶಂಕರ ಚಿಕ್ಕವನು. ಅವನ ಭವಿಷ್ಯ ಏನಾಗುತ್ತದೋ ಎಂದು; ಅಣ್ಣ ತಮ್ಮ ನೀವೆಲ್ಲಿ ಕಚ್ಚಾಡಿ ಕಾಪಾಡುತ್ತೀರೋ ಎಂದು."

"ಲಕ್ಷಕ್ಕೊಬ್ಬರೂ ಶಂಕರನ ಹಾಗಿರಲು ಸಾಧ್ಯವಿಲ್ಲಮ್ಮ. ಅಂಥ ತಮ್ಮ ನನಗಿರುವುದು ನನ್ನ ಭಾಗ್ಯ ಎಂದು ತಿಳಿದುಕೊಂಡಿದ್ದೇನೆ. ನನ್ನ ಸ್ನೇಹಿತ ಶಾಂತರುದ್ರಾ್ರಗಂತೂ ಶಂಕರನ್ನ ಕಂಡರೆ ಪಂಚಪ್ರಾಣ. ಶಾಂತರುದ್ರಾ್ರ ಮೇಲಿಂದ ಮೇಲೆ ಹೇಳುತ್ತಲೇ ಇದ್ದ. 'ನಿನ್ನ ತಮ್ಮ ಒಂದು ರತ್ನ ಕಣಯ್ಯಾ. ಅವನನ್ನು ಸರಿಯಾಗಿ ನೋಡಿಕೊಂಡರೆ ನಿಮ್ಮ ಮನೆತನಕ್ಕೆ ಮಾತ್ರವಲ್ಲದೆ ದೇಶಕ್ಕೇ ಕೀರ್ತಿ ತರುತ್ತಾನೆ' ಎಂತ. ಶಂಕರ ನನಗೆ ವಾರಕ್ಕೆ ಎರಡು ಮೂರು ಕಾಗದ ಬರೆಯುತ್ತಿದ್ದಾನಮ್ಮಾ. ತನ್ನ ಪ್ರತಿಯೊಂದು ಚಲನವಲನವನ್ನು ತಿಳಿಸುತ್ತಾನೆ. ಅವನಿಗೆ ಶ್ರೀಧರ ಎಂತಾ ಒಬ್ಬ ಸಹಪಾಠಿ ಇದ್ದಾನಂತೆ. ಆ ಶ್ರೀಧರನ ವಿಷಯ ಎಷ್ಟು

ಬರೆದರೂ ಶಂಕರರಿಗೆ ತೃಪ್ತಿಯಿಲ್ಲ. ಶ್ರೀಧರನ ಜತೆ 'ಭಗವದ್ಗೀತೆ' ಅಭ್ಯಾಸಮಾಡುತ್ತಿದ್ದಾನಂತೆ. ಯಾರೋ ಚಂದ್ರಶೇಖರ ಶಾಸ್ತ್ರಿಗಳಂತೆ. –ಅವರ ವಿಷಯ ತುಂಬ ಬರೆದಿದ್ದಾನೆ. 'ಶಾಸ್ತ್ರಿಗಳು ವಿದ್ಯೆಯ ಖಣಿ, ಗುಣದ ಗೌರೀಶಂಕರ. ಅವರ ಮನೆಗೆ ಆಗಾಗ್ಗೆ ಹೋಗುತ್ತಿರುತ್ತೇನೆ. ಅವರನ್ನೇ ನನ್ನ ಗುರುಗಳನ್ನಾಗಿ ಮಾಡಿಕೊಂಡಿದ್ದೇನೆ. ಶಾಸ್ತ್ರಿಗಳು ನನ್ನ ಜೀವನ ತಿದ್ದಿ ನನ್ನನ್ನು ಮನುಷ್ಯನನ್ನಾಗಿ ಮಾಡುತ್ತಿದ್ದಾರೆ' ಎಂದು ಬರೆದಿದ್ದಾನೆ.—ಮೊನ್ನೆ ಕಾಗದದಲ್ಲಿ ಒಂದು ಸ್ವಾರಸ್ಯವಾದ ವಿಷಯ ಬರೆದಿದ್ದಾನಮ್ಮಾ."

"ಏನಪ್ಪಾ ಅದು!"

"ಪ್ರತಿ ತಿಂಗಳೂ ನಾನು ಕಳಿಸುವ ಹಣಕ್ಕೆ ಲೆಕ್ಕ ಒಪ್ಪಿಸುತ್ತಾನೆ. ಈ ತಿಂಗಳು ಮೂವತ್ತು ರೂಪಾಯಿ ಪುಸ್ತಕ ಕೊಂಡನಂತೆ. ಆ ವಿಷಯ ಬರೆಯುತ್ತಾ ನನ್ನ ಗೀತಾ ವ್ಯಾಸಂಗಕ್ಕೆ ಅನುಕೂಲವಾಗಲಿ ಎಂದು ಆರ್ನಾಲ್ಡ್, ಅರವಿಂದರು, ಗಾಂಧೀಜಿ, ರಾಧಾಕೃಷ್ಣನ್, ಈಷರ್‌ವುಡ್, ಸ್ವರೂಪಾನಂದ ಇವರ ಗೀತಾ ಭಾಷ್ಯಗಳನ್ನು ಕೊಂಡಿದ್ದೇನೆ. ಇದಕ್ಕೆ ಮೂವತ್ತು ರೂಪಾಯಿ ಖರ್ಚಾಯಿತು. ಈ ರೀತಿ ಖರ್ಚು ಮಾಡುವುದು ತಪ್ಪಲ್ಲ ಎಂದು ನನ್ನ ಭಾವನೆ. ನೀವು ತಪ್ಪು ಎಂದು ಬರೆದು ತಿಳಿಸಿದರೆ ಈ ಖರ್ಚನ್ನು ಕಡಿಮೆಮಾಡುತ್ತೇನೆ, ಎಂದು ತಿಳಿಸಿದ್ದಾನೆ."

"ಅದಕ್ಕೆ ನೀನೇನು ಉತ್ತರ ಬರೆದೆ ಸುಬ್ಬು."

"ವ್ಯಾಸಂಗಕ್ಕಾಗಿ, ಪುಸ್ತಕ ಕೊಳ್ಳುವುದಕ್ಕಾಗಿ ನೀನು ಎಷ್ಟು ಖರ್ಚು ಮಾಡಿದರೂ ನಾನು ವ್ಯಥೆ ಪಡುವುದಿಲ್ಲ. ನಾನು ಕಳಿಸುತ್ತಿರುವ ಹಣ ಸಾಲದಾದರೆ ತಿಳಿಸು—ಹೆಚ್ಚು ಕಳಿಸುತ್ತೇನೆ, ಎಂದು ಬರೆದೆ."

"ನನ್ನ ಮಕ್ಕಳು ರಾಮಲಕ್ಷ್ಮಣರ ಹಾಗಿದ್ದಾರೆ ಎನ್ನುವ ವಿಷಯ ನನಗೆಂಥ ಹೆಮ್ಮೆಯನ್ನುಂಟುಮಾಡುತ್ತದೆ ಬಲ್ಲೆಯಾ ಸುಬ್ಬು."

ಎಂದರು ಪಾರ್ವತಮ್ಮ. ಅವರ ಕಣ್ಣುಗಳಿಂದ ಮುತ್ತಿನಂತಹ ಹರ್ಷಬಿಂದುಗಳುದುರಿದುವು.

ತನ್ನ ಒಂದು ಸವಿಮಾತು ತಾಯಿಗುಂಟುಮಾಡಿದ ನಿರ್ಮಲಾನಂದವನ್ನು ಕಂಡ ಸುಬ್ರಹ್ಮಣ್ಯನ ಚಿತ್ತ ವಿಚಾರದ ಸುಳಿಗೆ ಸಿಕ್ಕಿಕೊಂಡಿತು.

'ಅಮ್ಮನ ಸಕಲ ಸುಖವೂ ನಮ್ಮ ಅಭ್ಯುದಯವನ್ನು ಅವಲಂಬಿಸಿದೆ.

'ಶಂಕರನ ಕಾಗದದ ವಿಷಯ ಕೇಳಿ ಅಮ್ಮ ಎಷ್ಟು ಹರ್ಷಗೊಂಡರು.

'ನಾಳೆ—ನನ್ನ ವಿಷಯ ಗೊತ್ತಾದರೆ....?.........'

ತಾಯಿಯ ಮುಖದಲ್ಲಿ ಇಂದು ಮಿನುಗಿದ ಬೆಳಕು—ನಾಳೆ ಮೂಡುವ ಕತ್ತಲು ಎರಡು ಚಿತ್ರಗಳೂ ಸ್ಪಷ್ಟವಾಗಿ ಸುಬ್ರಹ್ಮಣ್ಯನಿಗೆ ಕಂಗೊಳಿಸಿದುವು. ಹಿಮಗಾಲದಲ್ಲಿ ತಣ್ಣೀರಿನಲ್ಲಿ ಮೀಯಮಾಡಿದವನಂತೆ ಅವನು ನಡುಗಿದ.

ಗೌರಿ ಹತ್ತು ದಿನಗಳ ಹೊಲೆಮನೆ ವಾಸ ಕಳೆದು ಹನ್ನೊಂದನೆಯ ದಿನ ಶುಚಿರ್ಭೂತಳಾದಳು. ಊರಿನ ಮುತ್ತೈದೆಯರು ತೊಟ್ಟಿಲುಗಟ್ಟಿ ಜೋಗುಳ ಹಾಡಿದರು.

ಮಗುವಿಗೆ ಹೆಸರಿಡುವ ವಿಷಯ ಇನ್ನೂ ಜಿಜ್ಞಾಸೆಯಲ್ಲಿಯೇ ಇತ್ತು. ಶಂಕರನಿಂದ ಕಾಗದವೂ ಬಂದಿರಲಿಲ್ಲ. ಟಪಾಲು ವೇಳೆಯವರೆಗೆ ನೋಡಿ, ಅನಂತರ ತಾವೇ ಯಾವುದಾದರೊಂದು ಹೆಸರಿಡುವುದೆಂದು ಪಾರ್ವತಮ್ಮ, ಸುಬ್ರಹ್ಮಣ್ಯ ನಿಶ್ಚಯಿಸಿದರು.

ಮಧ್ಯಾಹ್ನ ಹವನ ಹೋಮಾದಿಗಳಾಗುತ್ತಿರುವಾಗಲೇ ಅಂಚೆಯಾಳು ಶಂಕರನ ಕಾಗದ ತಂದಿತ್ತ. ಸುಬ್ರಹ್ಮಣ್ಯ ಕಾಗದವನ್ನು ಒಡೆದು ಕುತೂಹಲದಿಂದ ಓದಲಾರಂಭಿಸಿದ,

"ನಿಮ್ಮ ಕಾಗದಕ್ಕೆ ಉತ್ತರ ಬರೆಯಲು ತಡವಾದುದಕ್ಕೆ ಕ್ಷಮಿಸಬೇಕು. ನಿಮ್ಮ ಕಾಗದ ಬಂದ ದಿನವೇ ಗುರುಗಳ ಮನೆಗೆ ಹೋಗಿ ಅವರಿಗೆ ಮಗು ಹುಟ್ಟಿದ ತಾರೀಕು, ವೇಳೆ ತಿಳಿಸಿದೆ. ಅವರೂ ಎಲ್ಲಾ ಲೆಕ್ಕ ಹಾಕಿ ಜಾತಕವನ್ನೇ ಬರೆದು ಕೊಟ್ಟಿದ್ದಾರೆ. ಈ ಜಾತಕದಲ್ಲಿ ರವಿ ಪ್ರಧಾನನಾಗಿರುವುದರಿಂದ ಸೂರ್ಯನಿಗೆ ಸಂಬಂಧಿಸಿದ ಯಾವುದಾದರೂ ಹೆಸರಿಡುವುದು ಒಳ್ಳೆಯದೆಂದು ಸಲಹೆಯಿತ್ತರು. ರವಿ—ರವೀಂದ್ರ—ಸೊಗಸಾದ ಹೆಸರು. ಸೂರ್ಯನ ಹೆಸರು ಮತ್ತು ನಮ್ಮ ದೇಶದ ಮಹಾ ಕವಿಯ ಹೆಸರು. ಆ ಹೆಸರೇ ಇಡಬಹುದಲ್ಲವೆ? ರವಿ ತುಂಬ ಕೀರ್ತಿ

ಶಾಲಿಯಾಗಿ ಸೂರ್ಯನಂತೆ ಬೆಳಗುತ್ತಾನೆಂದು ಗುರುಗಳು ಆಶೀರ್ವದಿಸಿದ್ದಾರೆ."

ಸುಬ್ರಹ್ಮಣ್ಯ ಮರುಮಾತನಾಡದೆ ಪುರೋಹಿತರಿಗೆ

"ಮಗುವಿಗೆ ರವೀಂದ್ರನೆಂದು ನಾಮಕರಣ ಮಾಡಿ" ಎಂದು ಹೇಳಿದ.

ಮನೆಯಲ್ಲಿ ಮಧ್ಯಾಹ್ನದ ಕಲಾಪಗಳು ಮುಗಿದ ಕೂಡಲೇ ಊರಿಗೇ ಸಂತರ್ಪಣೆಯಾಯಿತು. ಸಂಪತ್ಕೃಷ್ಣ ಜೋಯಿಸರು, ಭೀಮಾಚಾರಿ, ಚಿನ್ನಪ್ಪ, ದಾಸರಿ ಒಂದೊಂದು ವರ್ಗದ ಕಡೆ ನಿಂತುಕೊಂಡು ಎಲ್ಲರಿಗೂ ಪದಾರ್ಥಗಳು ಸರಿಯಾಗಿ ತಲುಪುವಂತೆ ನೋಡಿಕೊಂಡರು.

ಊರಿನ ಹತ್ತಾರು ಜನಗಳ ಮನೆ ಬಿಡಿಸಿಕೊಂಡು ಎಲೆ ಹಾಕಲಾಗಿತ್ತು. ಪರಮಾನಂದಯ್ಯನ ಮನೆಯಲ್ಲಿ ಅವನ ಜನಗಳಿಗೆ ವ್ಯವಸ್ಥೆ ಮಾಡಲಾಗಿತ್ತು. ಬಡಿಸುವ ಸಂದರ್ಭದಲ್ಲಿ ಅವನ ಮನೆಯ ಉಗ್ರಾಣಕ್ಕೆ ಐವತ್ತು ಲಾಡು ಉಂಡೆಗಳು ಸೇರಿದುವು.

ಊರಿಗೆ ಊರೇ ತೃಪ್ತಿಯನ್ನು ವ್ಯಕ್ತಮಾಡಿತು.

'ತಂದೆಯ ಅಪಖ್ಯಾತಿಯನ್ನು ಮಗ ತೊಡೆದುಹಾಕಿದನಪ್ಪಾ. ಊರಿಗೆಲ್ಲಾ ಲಾಡು ಸಮಾರಾಧನೆ ಮಾಡಿಸುವುದು ಸಣ್ಣ ವಿಷಯವೇ' ಎಂದು ಜನ ಸುಬ್ರಹ್ಮಣ್ಯನನ್ನು ಕೊಂಡಾಡಿದರು.

ಸಂಜೆಗೆ ಆರತಿ ಅಕ್ಷತೆಯ ಏರ್ಪಾಟಾಗಿತ್ತು. 'ದೊಡ್ಡವರಿಗೆ ತೆಂಗಿನಕಾಯಿ, ಮಕ್ಕಳಿಗೆ ಬಾಳೆಯಹಣ್ಣು ಕೊಟ್ಟರೆ ಸಾಕು' ಎಂದು ಪಾರ್ವತಮ್ಮನವರು ಸೂಚಿಸಿದರು. ಸುಬ್ರಹ್ಮಣ್ಯ ಅವರ ಸಲಹೆಯನ್ನೊಪ್ಪದೆ 'ಮಕ್ಕಳಿಗೂ ತೆಂಗಿನಕಾಯಿ ಕೊಟ್ಟರೆ ಐವತ್ತು ಕಾಯಿ ತಾನೇ ಹೆಚ್ಚಾಗಿ ಖರ್ಚಾಗುವುದು. ಅವರಿಗೂ ಕಾಯೇ ಕೊಟ್ಟುಬಿಡಮ್ಮ. ಬೇಕಾದರೆ ಒಂದೊಂದು ಬಾಳೆಯ ಹಣ್ಣನ್ನೂ ಕೊಡು' ಎಂದು ಹೇಳಿದ.

ಬೆಳಿಗ್ಗೆಯೇ ಕಮಲಮ್ಮ ಹೋಗಿ ಊರಿನ ಸುಮಂಗಲೆಯರೆಲ್ಲರನ್ನೂ ಸಂಜೆಯಾರತಿ ಅಕ್ಷತೆಗೆ ಕರೆದು ಬಂದಿದ್ದಳು.

ಸುಮಂಗಲೆಯರಿಗೆ ಅರಿಸಿನ, ಕುಂಕುಮ, ಹೂವು, ಕಾಯಿ, ಬಾಗಿನದ ಚಕ್ಕುಲಿ, ಉಂಡೆ ಕೊಡುವ ಕೆಲಸವನ್ನು ಚೌಡಮ್ಮನವರು, ಕಮ

ಲಮ್ಮ, ನರ್ಮದಾ ಒಪ್ಪಿಕೊಂಡಿದ್ದರು. ನಿಂಗವ್ವ ಬಾಗಿಲಿನಲ್ಲಿಯೇ ಇದ್ದುಕೊಂಡು ತೆಂಗಿನಕಾಯಿ ಸರಬರಾಯಿ ಮಾಡುತ್ತಿದ್ದಳು. ಪಾರ್ವತಮ್ಮನವರು, ಹಸೇಮಣೆಯ ಸಮೀಪದಲ್ಲಿ ಕುಳಿತು ಬಂದವರನ್ನು ಉಪಚರಿಸುತ್ತಾ ಹಾಡು ಹೇಳಲು ಹಿಂಜರಿಯುತ್ತಿದ್ದ ಹೆಣ್ಣು ಮಕ್ಕಳನ್ನು ಪುಸಲಾಯಿಸುತ್ತಿದ್ದರು.

ಮನೆಯಲ್ಲಿ ಗದ್ದಲವೋ ಗದ್ದಲ. ಸಂತೋಷದ ಹೊಳೆಯೇ ಅಲ್ಲಿಗೆ ಹರಿದು ಬಂದಂತಿತ್ತು.

"ರವೀಂದ್ರ—ಎಷ್ಟು ಚಂದಾಕಿದೆಯಮ್ಮ ಹೆಸರು. ಹೊಸಾ ಹೆಸರು" ಎಂದೊಬ್ಬರು ಸಂತೋಷ ವ್ಯಕ್ತಮಾಡಿದರೆ, ಇನ್ನೊಬ್ಬರು ಗೌರಿಯ ಬಳಿಗೆ ಬಂದು

"ರವಿ ಒಬ್ಬನೇ ಆಗುತ್ತಾನೆ, ಮುಂದಿನ ವರ್ಷ, ಅವನ ಜತೆಗೆ ಒಬ್ಬ ತಮ್ಮನನ್ನೋ ತಂಗಿಯನ್ನೋ ಕೊಡಮ್ಮ" ಎಂದು ಹರಸುತ್ತಿದ್ದರು.

"ಇನ್ನೊಂದು ಊಟಕ್ಕೆ ಈಗಲೇ ಅಸ್ತಿಭಾರ ಹಾಕುತ್ತಿದ್ದೀರೇನ್ರಿ?"

"ಒಂದು ಊಟವಲ್ಲ—ಪಾತತ್ತೆ ನಾಲ್ಕು ಊಟ ಹಾಕಬೇಕಾಗತ್ತೆ. ಶಂಕ್ರೂ ಮದುವೆ ಊಟ ಮರೆತರೇನು?"

ಪಾರ್ವತಮ್ಮನವರು ಹಿಗ್ಗುತ್ತಾ

"ನಿಮ್ಮ ಬಾಯಿಹರಕೆಯಿಂದ ಹಾಗೇ ಆಗಲೇಳಿ. ನಾಲ್ಕಲ್ಲ ಎಂಟು ಊಟ ಹಾಕಿಸುತ್ತೇನೆ. ನೀವೆಲ್ಲಾ ಬರುವುದು ಹೆಚ್ಚೋ ನಾವು ಊಟ ಹಾಕುವುದು ಹೆಚ್ಚೋ" ಎಂದರು.

ಸಮಾರಂಭ ಸಾಗಿದ್ದಂತೆ ಪಾರ್ವತಮ್ಮನವರ ಮುಖ ಕಪ್ಪಿಟ್ಟಿತು. ಯಾರಿಗೋ ಅರಿಸಿನ, ಕುಂಕುಮ ಕೊಡುತ್ತಿದ್ದ ಕಮಲಮ್ಮ ಬಾಗಿಲು ಕಡೆ ನೋಡಿ

"ಬಾ ಜಯಮ್ಮ—ಬಾ ಮಂಗಳ" ಎಂದು ಕರೆದಳು.

ಸಭೆಯಲ್ಲಿ ವಿದ್ಯುತ್ಪ್ರವೇಶವಾದಂತಾಯಿತು. ಸುಮಂಗಲೆಯರೆಲ್ಲಾ ಜಯಮ್ಮನನ್ನೂ ಮಂಗಳೆಯನ್ನೂ ನೋಡಿ, ಗೌರಿಯ ಕಡೆಗೂ ಪಾರ್ವತಮ್ಮನವರ ಕಡೆಗೂ ದೃಷ್ಟಿ ಬೀರಿದರು.

ಕಮಲಮ್ಮ, ನರ್ಮದಾ ಹೊಸದಾಗಿ ಬಂದವರನ್ನು ವಿಶೇಷವಾಗಿ ಆದರಿಸಿ

"ಒಂದು ಹಾಡು ಹೇಳಮ್ಮ" ಎಂದರು.

"ನನ್ನ ಧ್ವನಿ ಚೆನ್ನಾಗಿಲ್ಲರೀ" ಎಂದು ಜಯಮ್ಮ ಸಬೂಬು ಹೇಳಿದಳು.

ಮಾತಿನ ಮಲ್ಲಿಯಾದ ನರ್ಮದಾ

"ಹಾಗಾದರೆ ಮಂಗಳ ಹೇಳಲಿ" ಎಂದಳು.

"ಮಂಗಳ ಬಲು ಚೆನ್ನಾಗಿ ಹಾಡುತ್ತಾಳೆ" ಎಂದು ಕಮಲಮ್ಮ ಒತ್ತಾಸೆ ಕೊಟ್ಟಳು.

ಮಂಗಳ ತಪ್ಪಿಸಿಕೊಳ್ಳಲೆತ್ನಿಸಿದಷ್ಟೂ ಕಮಲಮ್ಮ, ನರ್ಮದಾ ಒತ್ತಾಯ ಪಡಿಸಲಾರಂಭಿಸಿದರು. ಅವರ ಜತೆಗೆ ಇನ್ನೂ ಕೆಲವರು ಸೇರಿಕೊಂಡರು.

ನಿಂಗವ್ವ ಬಾಗಿಲಿನಲ್ಲಿಯೇ ನಿಂತು ಎವೆಯಿಕ್ಕದೆ ನೋಡುತ್ತಿದ್ದಳು.

ಪಾರ್ವತಮ್ಮನವರು ಕತ್ತುತಗ್ಗಿಸಿ ನೆಲದ ಮೇಲೆ ಬಿದ್ದಿದ್ದ ಮಂತ್ರಾಕ್ಷತೆ ಕಾಳುಗಳ ಮೇಲೆ ಬೆರಳಾಡಿಸುತ್ತಿದ್ದರು.

ಮಂಗಳ ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. 'ಶೃಂಗಾರಲಹರಿ' ಕೀರ್ತನೆ ಹಾಡಿದಳು. ನರ್ಮದಾ 'ಇನ್ನೊಂದು ಹೇಳು' ಎಂದು ಒತ್ತಾಯ ಮಾಡಿದಳು. 'ಹುಲ್ಲ ತರುವವರ ಮನೆಗೆ ಹೂವ ತರುವ' ದೇವರನಾಮವಾಯಿತು.

ಹೊತ್ತಾಯಿತೆಂದು ಜಯಮ್ಮ ಚಡಪಡಿಸಿದಳು. ಕಮಲಮ್ಮ ಅವರಿಗೆ ಮಂಗಳ ದ್ರವ್ಯಗಳನ್ನೂ ಫಲ ತಾಂಬೂಲಗಳನ್ನೂ ಬಾಗಿನಗಳನ್ನೂ ತಂದಿತ್ತಳು.

ಜಯಮ್ಮ, ಮಂಗಳೆ ಎದ್ದು ಹೋಗಲು ಸಭೆಯಲ್ಲಿದ್ದ ಮಹಿಳೆಯರು ಒಬ್ಬರ ಮುಖ ಒಬ್ಬರು ನೋಡಿಕೊಂಡರು. ಕೆಲವರು ಸೆರಗಿನಲ್ಲಿ ಮುಖ ಮುಚ್ಚಿಕೊಂಡೋ, ಮುಖವನ್ನು ಪಕ್ಕಕ್ಕೆ ತಿರುಗಿಸಿಯೋ 'ಕಿಸಕಿಸ' ನಕ್ಕರು.

ಪ್ರತಿಯೊಂದನ್ನೂ ಪಾರ್ವತಮ್ಮನವರು ಸೂಕ್ಷ್ಮವಾಗಿ ಗಮನಿಸಿದರು.

ಬಾಗಿಲಲ್ಲಿದ್ದ ನಿಂಗವ್ವ ಕಟಕಟನೆ ಹಲ್ಲು ಕಡಿದಳು.

ಉತ್ಸವದ ಕಾರ್ಯಕ್ರಮವೆಲ್ಲಾ ಮುಗಿದಂತಾಯಿತು. ಪಾರ್ವತಮ್ಮನವರು ಮೊಮ್ಮಗನನ್ನು ತೊಟ್ಟಿಲಲ್ಲಿ ಮಲಗಿಸಿ ಅವನಿಗೆ ಉಪ್ಪು ಮೆಣಸಿನಕಾಯಿ, ಪೊರಕೇಕಡ್ಡಿ ನೀವಾಳಿಸಿ ಇಳಿ ತೆಗೆದರು.

ಗೌರಿಗೂ ಆಯಾಸವಾಗಿತ್ತು. ಹಾಸಿಗೆಯ ಮೇಲೆ ಮಲಗಿದ ಅವಳ ಕಣ್ಣುಗಳಿಂದ ಒಂದೊಂದೇ ಹನಿ ಕೆಳಗಿಳಿಯಲಾರಂಭಿಸಿತು.

# ೧೮

ಶಾಸ್ತ್ರಿಗಳ ಮನೆಗೆ ಶಂಕರ ಉದ್ದೇಶ ಪೂರ್ವಕವಾಗಿ ಒಬ್ಬನೇ ಬಂದಿದ್ದ.

"ಶ್ರೀಧರ ಬರಲಿಲ್ಲವೇ?" ಎಂದು ಶಾಸ್ತ್ರಿಗಳು ಕೇಳಿದರು.

"ಇಲ್ಲ ಸಾರ್. ಕ್ರಿಕೆಟ್ ಮ್ಯಾಚ್ ನೋಡಲು ಹೋದ."

"ಊರಿಗೆ ಜಾತಕ ಕಳಿಸಿಕೊಟ್ಟೆರಾ ಶಂಕರ್?"

"ಕಳಿಸಿದೆ ಸಾರ್. ಅಣ್ಣ ಕಾಗದ ಬರೆದಿದ್ದಾರೆ. ತಮಗೆ ತುಂಬ ನಮಸ್ಕಾರ ತಿಳಿಸುವಂತೆ ಹೇಳಿದ್ದಾರೆ—ತಾವು ಸೂಚಿಸಿದ ಹೆಸರು ಎಲ್ಲ ರಿಗೂ ಪ್ರಿಯವಾಯಿತಂತೆ."

"ಸಂತೋಷ— ಸಂತೋಷ."

"ಸಾರ್. ತಮ್ಮಲ್ಲಿ ಒಂದು ವಿಷಯ ಆಲೋಚಿಸಲು ನಾನು ಏಕಾಂಗಿ ಯಾಗಿ ಬಂದೆ."

"ಅಷ್ಟು ರಹಸ್ಯವಾದುದೇ?"

"ಹೌದು. ಶ್ರೀಧರನ ವಿಷಯ ಒಂದೆರಡು ಪ್ರಶ್ನೆ ಕೇಳಬೇಕಾ ಗಿದೆ. ತಾವು ಮನಸ್ಸಿಗೇನೂ ತಿಳಿದುಕೊಳ್ಳಕೂಡದು."

"ಅವರನ್ನೇ ಕೇಳಬಹುದಲ್ಲ ಶಂಕರ್."

"ಅವನನ್ನು ಕೇಳುವ ವಿಷಯವಲ್ಲನೆಂದು ತಮಗೇ ವೇದ್ಯವಾಗು ತ್ತದೆ."

"ಕೇಳಿ."

"ನನ್ನ ಶ್ರೀಧರನ ಸ್ನೇಹ ಯಾವ ಮಟ್ಟದಲ್ಲಿದೆಯೆಂಬುದು ತಮಗೆ ಗೊತ್ತೇ ಇದೆ. ನಾವಿಷ್ಟು ಸ್ನೇಹಿತರಾದರೂ ಅವನು ಒಂದು ದಿನವೂ ತನ್ನ ಕಷ್ಟ ಸುಖ ನನ್ನಲ್ಲಿ ಹೇಳಿಕೊಂಡಿಲ್ಲ. ಅವನ ತಂದೆ ಅಷ್ಟು ಅನುಕೂಲಸ್ಥರಲ್ಲವೆಂಬುದನ್ನೂ, ಅವರು ಶಕ್ತಿ ಮೀರಿ ಧನ ಸಹಾಯ ಮಾಡುತ್ತಿರುವುದಾಗಿಯೂ ಅವನೇ ತಿಳಿಸಿದ್ದ."

"ಹೌದು. ಅದು ನಿಜ."

"ಈ ತಿಂಗಳು ತುಂಬ ಮುಗ್ಗಟ್ಟಿಗೆ ಸಿಕ್ಕಿಕೊಂಡಿರುವ ಹಾಗಿದೆ. ಊರಿನಿಂದ ಅವನಿಗೆ ಹಣ ಬಂದಂತೆ ಕಾಣುವುದಿಲ್ಲ."

"ಸ್ವಲ್ಪ ತೊಂದರೆಯಾಗಿದೆ ಎಂದು ಹೇಳಿದರು."

"ತಮ್ಮಲ್ಲಿ ಶ್ರೀಧರ ಹಣ ತೆಗೆದುಕೊಂಡು ಹೋಗುತ್ತಾನೆಯೇ ?"

"ಈ ಪ್ರಶ್ನೆಗೆ ಹೇಗೆ ಉತ್ತರ ಕೊಡಲಿ ಶಂಕರ್."

"ದಯವಿಟ್ಟು ಹೇಳಿ ಸಾರ್."

"ಆಗಾಗ್ಗೆ ತೆಗೆದುಕೊಂಡು ಹೋಗುತ್ತಿರುತ್ತಾರೆ. ಕೈಗೆ ಹಣ ಬಂದ ಕೂಡಲೆ ಹಿಂದಕ್ಕೆ ತಂದು ಕೊಟ್ಟುಬಿಡುತ್ತಾರೆ."

"ತಾವು ನನಗೊಂದು ಉಪಕಾರ ಮಾಡಬೇಕು."

"ಹೇಳಿ."

"ಈ ಹಣ ತಾವು ಕೊಟ್ಟ ಹಾಗೆ ಶ್ರೀಧರನಿಗೆ ಕೊಡಬೇಕು."

ಎಂದು ಶಾಸ್ತ್ರಿಗಳ ಕೈಗೆ ನೂರು ರೂಪಾಯಿಗಳನ್ನಿತ್ತ. ಶಾಸ್ತ್ರಿಗಳು ಆಶ್ಚರ್ಯದಿಂದ

"ನಾನು ಕೊಟ್ಟ ಹಾಗೇಕೆ ಕೊಡಬೇಕು. ನೀವೇ ಏಕೆ ಕೊಡಬಾರದು."

"ಶ್ರೀಧರ ತುಂಬ ಆತ್ಮಾಭಿಮಾನಿ. ತನ್ನ ತಾಪತ್ರಯ ನನಗೆ ತಿಳಿದುದಕ್ಕೆ ಅವನು ನೊಂದುಕೊಳ್ಳಬಹುದು."

"ನೀವು ಒಪ್ಪಿಸುತ್ತಿರುವ ಕೆಲಸ ಸಂತೋಷವಾಗಿ ಮಾಡುತ್ತೇನೆ ಶಂಕರ್. ಇದರಿಂದ ನಿಮಗೆ ತೊಂದರೆಯಾಗುವುದಿಲ್ಲವೇ?"

"ಇಲ್ಲ ಸಾರ್. ನಾನು ಕೈಯೆತ್ತಿ ಇನ್ನೊಬ್ಬರಿಗೆ ಕೊಟ್ಟರೆ ನಮ್ಮಣ್ಣನವರು ಬೇಡವೆನ್ನುವುದಿಲ್ಲ."

"ಈ ಕಾಲದಲ್ಲಿ ಇಂಥ ಅಣ್ಣಂದಿರೂ ಇರುತ್ತಾರೆಯೇ ಶಂಕರ್."

"ಈ ಹಣ ನನಗೆ ಹಿಂದಕ್ಕೆ ಬರಬೇಕಾದುದಿಲ್ಲ ಸಾರ್."

"ಅದು ಹೇಗೆ ಸಾಧ್ಯ? ಶ್ರೀಧರ ಹಣ ಹಿಂದಕ್ಕೆ ತಂದು ಕೊಟ್ಟರೆ ನಾನೇನು ಮಾಡಲಿ?"

"ಅವನಿಗೆ ಸುಳುಹು ಕೊಡದಂತೆ ಹಣ ಅವನ ಕೈಗೆ ಹಾಕುವುದು ತಮ್ಮ ಭಾರ ಸಾರ್."

"ನಾನು ಸುಳ್ಳು ಹೇಳಬೇಕಾಗುತ್ತದೆ."

"ಏಕೆ ಸಾರ್."

"ನನಗೆ ಎಕ್ಸಾಮಿನರ್ ಷಿಪ್ ಹಣ ಬಂತೆಂದು ಹೇಳಬೇಕಾಗುತ್ತದೆ."

..............................

"ಶಂಕರ್............"

"ಸಾರ್."

"ಗುರುವಿನಿಂದ ಶಿಷ್ಯರು ಧನ್ಯರಾಗುತ್ತಾರೆ; ಶಿಷ್ಯರಿಂದ ಗುರುವೂ ಧನ್ಯನಾಗುತ್ತಾನೆ........ಬಹಳ ಜನ ವೇದಾಂತ ಓದುತ್ತಾರೆ. ಗೀತೋಪನಿಷತ್ತುಗಳನ್ನು ಲೀಲಾಜಾಲವಾಗಿ ಒಪ್ಪಿಸುತ್ತಾರೆ. ಆದರೆ ಯಾರೂ ಅವುಗಳನ್ನನುಸರಿಸಲು ಯತ್ನಿಸುವುದಿಲ್ಲ. ನಿಮ್ಮಲ್ಲಿರುವ ಆಚರಣೆ ನೋಡಿ ನನಗೆ ಅತ್ಯಾನಂದವಾಯಿತು. ಶ್ರೀಧರ ನಿಜವಾಗಿಯೂ ತುಂಬ ಕಷ್ಟದಲ್ಲಿದ್ದಾರೆ. ಕಾಲೇಜು ಬಿಟ್ಟು ಕೆಲಸ ಹುಡುಕುವ ಯೋಚನೆಯನ್ನೂ ಮಾಡುತ್ತಿದ್ದಾರೆ."

"ಅದಕ್ಕೆ ಅವಕಾಶ ಕೊಡಬೇಡಿ ಸಾರ್. ತಿಂಗಳಿಗೆ ಐವತ್ತು ರೂಪಾಯಿ ನಾನು ಕೊಡುತ್ತೇನೆ. ಅವನು ವಿದ್ಯಾಭ್ಯಾಸ ಮುಂದುವರಿಸಲಿ."

"ಆಗಲಿ. ಮಾತನಾಡಿ ನೋಡುತ್ತೇನೆ."

"ನನ್ನ ಹೆಸರು ಮಾತ್ರ ಹೇಳಬೇಡಿ ಸಾರ್."

"ಇಲ್ಲಪ್ಪಾ–ಹೇಳುವುದಿಲ್ಲ. ರಜಕ್ಕೆ ಊರಿಗೆ ಹೋಗಿ ಬರುವಿರಾ?"

"ಹೋಗಲೇ ಬೇಕು. ನಾಮಕರಣಕ್ಕೆ ನಾನು ಬರಲಿಲ್ಲವೆಂದು ಮನೆಯವರು ಕೋಪಮಾಡಿಕೊಂಡಿದ್ದಾರೆ."

"ಶ್ರೀಧರರನ್ನೂ ಜತೆಯಲ್ಲಿ ಕರೆದುಕೊಂಡು ಹೋಗುವಿರಾ?"

"ಬಾರೆಂದು ಪೀಡಿಸುತ್ತಿದ್ದೇನೆ. ಅವನೇಕೋ ಹಿಂದೆಗೆಯುತ್ತಿದ್ದಾನೆ. ತಮ್ಮಲ್ಲಿ ಈ ವಿಷಯ ಪ್ರಸ್ತಾಪಮಾಡಿದನೇ?"

"ಮಾಡಿದರು. ಹೋಗಿಬನ್ನೀಂತ ನಾನೂ ಹೇಳಿದೆ."

"ಮತ್ತೊಮ್ಮೆ ಹೇಳಿ ಸಾರ್. ಅವನು ಬರಲಿ. ಇನ್ನೊಂದು ಮಾತು—ಅಪ್ಪಣೆಯಾದರೆ ಹೇಳುತ್ತೇನೆ."

"ಹೇಳಿ."

"ತಾವೂ ಬರಲು ಸಾಧ್ಯವೇ ಸಾರ್. ನಮ್ಮಮ್ಮ, ಅಣ್ಣ, ಅತ್ತಿಗೆ ಎಲ್ಲರೂ ಸಂತೋಷಪಡುತ್ತಾರೆ. ನನ್ನ ಎತ್ತಿ ಆಡಿಸಿದ ನಿಂಗಜ್ಜಿ ಹಿಗ್ಗಿ ಹೋಗುತ್ತಾಳೆ."

"ಬರುತ್ತಿದ್ದೆ ಶಂಕರ್. ನವರಾತ್ರಿ ಕಾಲದಲ್ಲಿ ಕೆಲವು ಪೂಜೆಗಳನ್ನಿಟ್ಟುಕೊಂಡಿದ್ದೇನೆ. ದುರ್ಗಾಷ್ಟಮಿ ನನಗೆ ಬಹಳ ಮಹತ್ವದ ದಿನ—ಅಂದು ನಾನು ಎಲ್ಲಿಗೂ ಹೋಗಲು ಸಾಧ್ಯವಿಲ್ಲ.."

"ಕ್ರಿಸ್‌ಮಸ್ ರಜಕ್ಕೆ ಬರುವಿರಾ ಸಾರ್?"

"ಬರುತ್ತೇನಪ್ಪಾ. ನೀವು ಕರೆದಾಗ ಬರುತ್ತೇನೆ. ನಮ್ಮಂಥಾ ಬಡಮೇಷ್ಟ್ರುಗಳನ್ನು ಇಷ್ಟು ಪ್ರೀತಿಯಿಂದ ಕರೆಯುವವರು ಯಾರು?"

ಶಂಕರ ಹೊರಡಲನುವಾಗಿ ಎದ್ದು ನಿಲ್ಲಲು ಶಾಸ್ತ್ರಿಗಳು

"ಇಲ್ಲೇ ಊಟಮಾಡಿಕೊಂಡು ಹೋಗಬಾರದೇ ಶಂಕರ್" ಎಂದರು.

"ಕ್ಷಮಿಸಿ ಸಾರ್. ಇನ್ನೊಂದು ದಿನ ಶ್ರೀಧರನನ್ನೂ ಕರೆದುಕೊಂಡು ಬರುತ್ತೇನೆ."

"ತಡೆಯಿರಿ. ನಾನೂ ಸ್ವಲ್ಪ ದೂರ ಬರುತ್ತೇನೆ."

ಶಾಸ್ತ್ರಿಗಳು ಹೆಗಲಮೇಲೆ ಟವಲು ಹಾಕಿಕೊಂಡು ಶಂಕರನ ಜತೆ ಹೊರಟರು. ಅವರ ಮನೆ ದಾಟಿ ಮುಂದಿನ ರಸ್ತೆಗೆ ಬಂದರೆ 'ಕಾಲೇಜ್ ಕಾಫಿ ಹೌಸ್'. ಶಾಸ್ತ್ರಿಗಳು ಹೋಟೇಲಿನ ಮುಂದೆ ನಿಂತು

"ಬನ್ನಿ ಶಂಕರ್—ಕಾಫಿ ಕುಡಿದು ಹೋಗೋಣ" ಎಂದರು.

ಇಬ್ಬರೂ ಒಳಕ್ಕೆ ಬಂದು ಮೇಜಿನ ಮುಂದೆ ಕುಳಿತರು. ಮಾಣಿ ಬಂದು 'ಏನು ಬೇಕು' ಎಂದು ಕೇಳಿದ. ಶಾಸ್ತ್ರಿಗಳು ತಿಂಡಿ ಪದಾರ್ಥಗಳ ಕಡೆ ದೃಷ್ಟಿಬೀರಿ

"ಎರಡು ಪ್ಲೇಟ್ ಜಾಮೂನ್, ಎರಡು ವಡೆ, ಎರಡು ಸ್ಪೆಷಲ್ ಕಾಫಿ" ಎಂದರು.

"ಈಗೇಕೆ ಸಾರ್ ತಿಂಡಿ—ಬರೀ ಕಾಫಿಯಾಗಿದ್ದರೆ ಸಾಕಾಗಿತ್ತು."

ಶಾಸ್ತ್ರಿಗಳು ಮಾತಾಡಲಿಲ್ಲ.

ಉಪಾಹಾರ ಮುಗಿದ ಮೇಲೆ, ಶಾಸ್ತ್ರಿಗಳೇ ಬಿಲ್ ಪಾವತಿ ಮಾಡಿದರು.

ಇಬ್ಬರೂ ಬರುವಾಗ ಶಂಕರ

"ತಾವು ಹೊಟೇಲಿಗೂ ಹೋಗುವುದುಂಟೆ ಸಾರ್."

"ಇಲ್ಲ—ಯಾವಾಗಲಾದರೂ ಒಮ್ಮೊಮ್ಮೆ ಹೋಗುತ್ತೇನೆ. ಇವತ್ತು ಮನಸ್ಸಿಗೆ ಏನೋ ಸಂತೋಷವಾಯಿತು. ನಿಮಗೆ ಸಿಹಿ ತಿಂಡಿ ಕೊಡಿಸಬೇಕೆಂದು ಆಸೆಯಾಯಿತು."

ಶಂಕರ ಮಾತಾಡಲಿಲ್ಲ.

ಶಾಸ್ತ್ರಿಗಳು ಶಂಕರನ ಜತೆ ಐದು ದೀಪದ ಚೌಕದ ವರೆಗೆ ಬಂದು ನೂರಡಿ ರಸ್ತೆಯ ಕಡೆ ತಿರುಗಿದರು.

ಶಂಕರ ಕಾಲೇಜ್ ಹಾಸ್ಟೆಲ್‌ಗೆ ಬಂದ.

ಶ್ರೀಧರ ಊಟಕ್ಕೆ ಹೋಗಲು ಶಂಕರನ ದಾರಿಯನ್ನೇ ನೋಡು ತ್ತಿದ್ದ.

# ೧೯

ಭೀಮಾಚಾರಿಯ ಜೀವನ ಸುಸೂತ್ರವಾಗಿ ಸಾಗಿರಲಿಲ್ಲ. ಮಾಸ ಚಕ್ರದಲ್ಲಿ ಶುಕ್ಲ, ಕೃಷ್ಣಪಕ್ಷಗಳಿದ್ದಂತೆ ಅವನ ಜೀವನದಲ್ಲಿಯೂ ಏರು ಬೀಳುಗಳು ಕ್ರಮವಾಗಿ ಒದಗುತ್ತಿದ್ದುವು. ಫೂಟ್ ಲಾಯರಿ, ದಳ್ಳಾಳಿ, ಇಸ್ಪೇಟುಗಳಲ್ಲಿ ಅವನಿಗೆ ವರಮಾನ ದೊರೆಯುತ್ತಿದ್ದರೂ ಅದು ಅವನ ಆವಶ್ಯಕತೆಗಳೆಲ್ಲವನ್ನೂ ಪೂರೈಸುತ್ತಿರಲಿಲ್ಲ. ತಾವರೆಕೆರೆ ತೀರಿಸಲಾಗದ ಆಸೆಗಳನ್ನು ಅವನು ಮೈಸೂರಿನಲ್ಲಿ ಮುಗಿಸಿಕೊಳ್ಳಬೇಕಾಗುತ್ತಿತ್ತು. ಅನೇಕ ಸಲ ಹಣದ ಅಭಾವದಿಂದ ಅವನು ಮೈಸೂರು ಯಾತ್ರೆ ನಿಲ್ಲಿಸುವ ಪ್ರಸಂಗವೂ ಒದಗುತ್ತಿತ್ತು.

ಶಾಂತರುದ್ರೂ ಹೊಸಪೇಟೆಗೆ ಹೊರಟು ಹೋದುದು ಎಲ್ಲರಿಗಿಂತ ಹೆಚ್ಚಾಗಿ ಭೀಮಾಚಾರಿಗೆ ಕಷ್ಟಕ್ಕೆ ಬಂದಿತ್ತು. ಕೇಳಿದಾಗ ಅವನು ಐದು ಹತ್ತು ರೂಪಾಯಿಗಳನ್ನು ಆಚಾರಿಯ ಕೈಯಲ್ಲಿ ಹಾಕುತ್ತಿದ್ದ. ಸುಬ್ರಹ್ಮಣ್ಯನ ಕೈಯಿಂದ ಐದು ಹತ್ತು ರೂಪಾಯಿಗಳನ್ನು ಆಚಾರಿ ತೆಗೆದುಕೊಳ್ಳಬಹುದಾಗಿತ್ತು. ಆದರವನಿಂದ "ಜುಜಿಬಿ" ಪ್ರಯೋಜನ ಪಡೆದರೆ ಮುಂದೆ ದೊಡ್ಡದಕ್ಕೆ ಏಟು ಬೀಳುವುದೆಂದು ಹೆದರಿ ಆಚಾರಿ ಬಾಯಿ ಮುಚ್ಚಿಕೊಂಡಿದ್ದ.

ಸ್ವಪ್ರಯೋಜನವಿಲ್ಲದೆ ಚಿನ್ನಪ್ಪ ಕಾಸು ಬಿಚ್ಚುತ್ತಿರಲಿಲ್ಲ. ಕೃಪಣಾಗ್ರೇಸರ ಚಿನ್ನಪ್ಪನಿಂದ ಚಿಲ್ಲರೆ ಕಾಸು ಕಿತ್ತುಕೊಳ್ಳುವುದು ತನ್ನ ಗೌರವಕ್ಕೆ ಕಡಿಮೆಯೆಂಬ ಭಾವನೆಯೂ ಆಚಾರಿಗಿತ್ತು. "ವಾಜರೋನು ಕಷ್ಟಕ್ಕೆ ಸಿಕ್ಕಿಕೊಂಡಾಗಲೇ ಅವನ ರಕ್ತ ಹೀರಬೇಕು" ಎನ್ನುವ ಪ್ರತಿಜ್ಞೆಯನ್ನು ಮುರಿಯಲು ಆಚಾರಿಯ ಮನಸ್ಸು ಒಪ್ಪುತ್ತಿರಲಿಲ್ಲ.

ಕೈಯಲ್ಲಿ ಕಾಸಿದ್ದರೆ ಆಚಾರಿಯನ್ನು ಹಿಡಿಯುವವರೇ ಇರುತ್ತಿರಲಿಲ್ಲ. ಅದು ಮುಗಿಯುವ ವರೆಗೆ ಅವನ ಮನಸ್ಸಿಗೆ ನೆಮ್ಮದಿ ಇರುತ್ತಿರಲಿಲ್ಲ. ಕೈಯಲ್ಲಿ ಕಾಸು ಮುಗಿದೊಡನೆಯೇ ಆಚಾರಿ ನಿರ್ವಿಣ್ಣನಾಗಿ ಭೂಮಿಗಿಳಿದು ಹೋಗುತ್ತಿದ್ದ. ಅಂಥ ದಿನಗಳಲ್ಲಿ ಅವನು ಕ್ಲಬ್ಬಿನಲ್ಲಿ

"ನಾನು ಸತ್ತರೆ ಸುಡೋ ಭಾರ ನಿಮ್ಮದಯ್ಯಾ" ಎಂದು ಹೇಳು ತ್ತಿದ್ದ.

ಆಚಾರಿಯ ಮಾತು ನಗೆಮಾತೆಂದು ಭಾವಿಸುತ್ತಿದ್ದ ಕ್ಲಬ್ಬಿಗರು

"ನಿನ್ನ ಸುಡುವುದಕ್ಕೆ ನಮಗೆಲ್ಲಿ ಅವಕಾಶ ಕೊಡುತ್ತೀಯೋ ಆಚಾರಿ. ನಮ್ಮ ಕಥೆ ಮೊದಲು ಮುಗಿಸಿಯೇ ನೀನು ಸ್ವಾಮಿ ಪಾದ ಸೇರುವುದು." ಎಂದು ಹಾಸ್ಯ ಮಾಡುತ್ತಿದ್ದರು. ಆಚಾರಿಯ ಬಂಡವಾಳ ಅವನಿಗಲ್ಲದೆ ಬೇರೆ ಯಾರಿಗೂ ಗೊತ್ತಿರಲಿಲ್ಲ.

ನಾಟಕದ ಕಂಪೆನಿಯ ಮಾತು ನಿಂತೇ ಹೋದುದನ್ನು ಕಂಡು ಪರಮಾನಂದಯ್ಯನಿಗೂ ಬೇಸರವಾಗಿತ್ತು. 'ಮಂಗಳೆಗೆ ವಯಸ್ಸಾಗು ತ್ತಿದೆ. ತಾರುಣ್ಯದ ಮಾದಕ ಲಾವಣ್ಯ ಪ್ರಬುದ್ಧತೆಯ ಶಾಂತ ಸೌಂದ ರ್ಯಕ್ಕೆಡೆಕೊಡುತ್ತಿದೆ. ಈಗಲೇ ಅವಳ ಕೈಯಲ್ಲಿ ಪಾರ್ಟು ಮಾಡಿಸ ದಿದ್ದರೆ ಮುಂದೆ ಏನೂ ಪ್ರಯೋಜನವಾಗುವುದಿಲ್ಲ' ಎನ್ನುವ ಆತಂಕವೂ ಪರಮಾನಂದಯ್ಯನ ಮನಸ್ಸನ್ನು ಕೊರೆಯುತ್ತಿತ್ತು.

ಒಂದು ದಿನ ಆಚಾರಿಗೆ ತೀರ ತಾಪತ್ರಯವಾಗಿತ್ತು. ಬಾಯಿ ಬಿಟ್ಟು ಕಾಸು ಕೇಳಿದರೂ ಚಿನ್ನಪ್ಪ ನಕಾರ ಹೇಳಿದ್ದ. ಆಚಾರಿ ಉರಿ ಮನಸ್ಸಿನಲ್ಲಿಯೇ ಬಂದು ಪರಮಾನಂದಯ್ಯನ ಮನೆಯಲ್ಲಿ ಕುಳಿತ. ಜಯಮ್ಮ ಬಂದು ಮಾತನಾಡಿಸಿ

"ಯಾಕಣ್ಣಾ–ಹೀಗಿದ್ದೀರಿ" ಎಂದು ಕೇಳಿದಳು.

"ಏನಿದ್ದೀನೋ ಬಿಡಮ್ಮ–ಈ ಊರೇ ನನಗೆ ಬೇಸರವಾಗಿದೆ. ತಿರುಪತೀಗೋ ಮಂತ್ರಾಲಯಕ್ಕೋ ಹೋಗಿ ಸ್ವಾಮಿ ಸೇವೆ ಮಾಡಿ ಕೊಂಡು ಕಾಲ ತಳ್ಳಿಬಿಡೋಣ ಎಂದು ನಿಶ್ಚಯಮಾಡಿದ್ದೇನೆ....ದಾಸರಿ ಎಲ್ಲಿ?"

"ನಿಂಬೆಹಣ್ಣು ತರುವುದಕ್ಕೆ ಪೇಟೆಗೆ ಹೋಗಿದ್ದಾರೆ....ಕಾಫಿ ಮಾಡಿ ಕೊಡಲೇನು?"

"ಮಾಡಿಕೊಡು."

ಜಯಮ್ಮ ಒಳಗೆ ಹೋದ ಸ್ವಲ್ಪ ಹೊತ್ತಿನಲ್ಲಿ ಪರಮಾನಂದಯ್ಯ ನಿಂಬೆಹಣ್ಣು ಹಿಡಿದು ಬಂದು ಆಚಾರಿಯನ್ನು ನೋಡಿ

"ಏನು ಆಚಾರಿ, ಇಷ್ಟು ಹೊತ್ತಿಗೇ ಬಂದೆ?" ಎಂದು ಕೇಳಿದ.

"ಏಕೆ? ಬರಬಾರದಾಗಿತ್ತೇನು?"

"ನಾರಾಯನ ಹಾಗೆ ಬಾಪ್ಪ. ನಿನ್ನ ಮನೆಗೆ ನೀನು ಬರುವುದಕ್ಕೆ ನನ್ನದೇನು ಅಡ್ಡಿ."

"ಕೆಲಸವಾಗಬೇಕಾದರೆ ಎಲ್ಲರಿಗೂ ಆಚಾರಿ ಬೇಕಯ್ಯ. ಉಳಿದ ಕಾಲದಲ್ಲಿ ಅವನನ್ನು ಸತ್ತೆಯಾ, ಬದುಕಿದೆಯಾ ಎಂದು ಯಾರೂ ಕೇಳುವುದಿಲ್ಲ."

"ನಿನಗೇನಯ್ಯ ಅಂಥ ಕಷ್ಟ ಬಂದಿರೋದು?"

"ನನ್ನ ಕಷ್ಟ ಭಗವಂತನಿಗೊಬ್ಬನಿಗೇ ಗೊತ್ತು. ನಿನಗೆ ಹೇಗೆ ಗೊತ್ತಾಗತ್ತೆ. ನಿನ್ನ ಕೆಲಸವಾಯಿತು—ದಿಮ್ಮರಂಗ ಎಂದು ಕುಳಿತುಬಿಟ್ಟೆ."

ಜಯಮ್ಮ ಕಾಫಿ ತಂದುಕೊಟ್ಟು, ಪರಮಾನಂದಯ್ಯ ತಂದಿದ್ದ ನಿಂಬೆಯ ಹಣ್ಣುಗಳನ್ನು ಕೈಗೆತ್ತಿಕೊಂಡು,

"ಯಾಕೋ ಆಚಾರ್ರು ಇವತ್ತು ತುಂಬ ಬೇಸರಪಟ್ಟುಕೊಂಡಿದ್ದಾರೆ" ಎಂದಳು.

ಆಚಾರಿಯ ಬೇಸರದ ಕಾರಣ ಊಹಿಸಿದ್ದ ಪರಮಾನಂದಯ್ಯ ಮಾತು ಮರೆಸಲು

"ಶಂಕರ ಊರಿಗೆ ಬಂದನೇ?" ಎಂದು ಕೇಳಿದ.

ಆಚಾರಿ ಮುಖ ಸಿಂಡರಿಸಿಕೊಂಡು

"ಯಾವನು ಬಂದನೋ ಯಾವನು ಹೋದನೋ ನನಗೇನಾಗಬೇಕೋ ದಾಸರಿ. ನಿನ್ನ ಅಳಿಯ ಬಂದಾಗ ಕೇಳಿ ತಿಳಿದುಕೋ" ಎಂದ.

"ಆಚಾರ್ರಿಗೆ ತುಂಬ ತಾಪತ್ರಯವಾದಂತಿದೆ" ಎಂದಳು ಜಯಮ್ಮ.

"ಅದಕ್ಕೇನು ಮಾಡೊಂತಿ?"

"ಹತ್ತೋ ಇಪ್ಪತ್ತೋ ಕೊಡಬಾರದೇನು?"

ಜಯಮ್ಮನನ್ನು ಮನಸ್ಸಿನಲ್ಲಿ ಶಪಿಸುತ್ತ ಪರಮಾನಂದಯ್ಯ ತೆಪ್ಪಗೆ ಕುಳಿತ.

"ಹೆಂಗಸು ಅವಳು ವಾಸಿ. ಕಷ್ಟ ಕಂಡರೆ ಮರುಗುತಾಳೆ. ನೀನಿದ್ದೀ ನೋಡು—ಲೋಹದ ಮೂರ್ತಿ."

ಪರಮಾನಂದಯ್ಯ ಜೇಬು ತಡಕಾಡಿ ಹತ್ತು ರೂಪಾಯಿ ನೋಟು ತೆಗೆದು ಆಚಾರಿಯ ಕೈಯಲ್ಲಿಟ್ಟು

"ಸರಿಯೇನಪ್ಪಾ" ಎಂದ.

"ಇನ್ನೊಂದು ಹತ್ತು ಕೊಡೋ."

ಪರಮಾನಂದಯ್ಯ ಇನ್ನೊಂದು ನೋಟು ತೆಗೆದು ಆಚಾರಿಯ ಕೈಯಲ್ಲಿಟ್ಟ. ಜಯಮ್ಮ ತೃಪ್ತಿಯ ನಗೆಸೂಸಿ ಒಳಗೆ ಹೋದಳು.

ಇಪ್ಪತ್ತು ರೂಪಾಯಿ ಕೈಬಿಟ್ಟು ಹೋದುದಕ್ಕೆ ತಳಮಳಗೊಂಡಿದ್ದ ಪರಮಾನಂದಯ್ಯ

"ನೀನು ಹೇಳಿದ್ದ ಮಾತೆಲ್ಲಾ ಗಾಳೀಗೆ ಹೋಯ್ತಾ ಆಚಾರಿ?" ಎಂದು ಕೇಳಿದ.

"ಯಾವ ಮಾತು?"

"ಅದೂ ನೆನಪಿಲ್ಲ ನಿನಗೆ—ಕಂಪೆನಿ ತೆಗೆಯೋ ಮಾತು."

"ಇವತ್ತೋ ನಾಳೆಯೋ ಸುಬ್ರಹ್ಮಣ್ಯನ ಹತ್ತಿರ ಆ ವಿಷಯ ಪ್ರಸ್ತಾಪ ಮಾಡುತ್ತೀನೆ. ನಿನ್ನ ಒಂದು ಮಾತು ಕೇಳಿ ಹೋಗೋಣಾಂತಲೇ ನಾನು ಬಂದದ್ದು."

"ಕಂಪೆನಿ ಒಂದು ಮಾಡಿಸು ಆಚಾರಿ. ನಿನ್ನ ಮಂದಾಸನದಲ್ಲಿಟ್ಟು ಪೂಜೆ ಮಾಡುತ್ತೀನೆ."

"ನನಗೆ ಪೂಜೆ ಬೇಕಾಗಿಲ್ಲ."

"ಇನ್ನೇನು ಬೇಕು?"

"ಕಂಪೆನೀಗೆ ನಾನೇ ಮ್ಯಾನೇಜರಾಗಿರಬೇಕು. ಸಂಗೀತ, ಆಕ್ಟರುಗಳು, ಪ್ರಾಕ್ಟೀಸು ಎಲ್ಲಾ ನಿನ್ನ ಜವಾಬ್ದಾರಿ; ಹೊರಗಿನ ವ್ಯವಹಾರ ನನ್ನ ಜವಾಬ್ದಾರಿ."

"ಅದು ಹೇಗಾದರೂ ಆಗುತ್ತೆ. ಮೊದಲು 'ಅಡಿ' ಎನ್ನುವುದಕ್ಕೆ 'ಅವಳೀ' ಇಲ್ಲ!"

"ಸುಬ್ರಹ್ಮಣ್ಯನ ಕೈಯಲ್ಲಿ ನಾನು ದುಡ್ಡು ಹಾಕಿಸುತ್ತೀನೆ."

"ಯಾವ ಧೈರ್ಯದ ಮೇಲೆ ಹೇಳುತ್ತೀ. ಈಗವನ ತಮ್ಮ ಮೈಸೂರಿನಲ್ಲಿ ಓದುತ್ತಾ ಇದ್ದಾನೆ."

"ತಮ್ಮ ಓದಿದರೆ ಸುಬ್ರಹ್ಮಣ್ಯನಿಗೆ ಬಡತನ ಬರುತ್ತದೆ ಎಂದು ತಿಳಿದಿರುವೆಯಾ?"

"ಆ ಸಬೂಬು ಅವನು ಹೇಳಬಹುದು ಎಂದು ಸೂಚಿಸಿದೆ."

"ಸಬೂಬು ಹೇಳದ ಹಾಗೆ ನಾನು ಇತ್ಯರ್ಥ ಮಾಡುತ್ತೇನೆ—ನನ್ನ ಕರಾರಿಗೆ ನಿನ್ನ ಒಪ್ಪಿಗೆ ತಾನೆ?"

"ನೀನು ಹೇಳಿದ ಹಾಗೆ ಕೇಳುತ್ತೇನೆ ಮಾರಾಯ. ಕಂಪೆನಿಯೊಂದನ್ನು ಮೊದಲು ಹುಟ್ಟಿಹಾಕು."

"ಕಂಪೆನಿ ತೆಗೆಯುವುದಕ್ಕೆ ಹಣವೆಷ್ಟು ಬೇಕಾಗುತ್ತದೆ."

"ಎಲ್ಲಾ ಪೊಗದಸ್ತಾಗಿರಬೇಕಾದರೆ ಹತ್ತು ಸಾವಿರವಾದರೂ ಬೇಕು."

"ಒಟ್ಟಿಗೆ ಹತ್ತು ಸಾವಿರ ಕೇಳಿದರೆ ಸುಬ್ರಹ್ಮಣ್ಯ ಹೆದರಿಬಿಟ್ಟಾನು. ಮೊದಲು ಐದು ಸಾವಿರಕ್ಕೆ ಏಟುಹಾಕುವುದು—ಉಳಿದ ಐದು ಸಾವಿರ ಒಂದೆರಡು ತಿಂಗಳಲ್ಲಿ ವಸೂಲ್ಮಾಡಿಕೊಳ್ಳುವುದು."

"ಹಾಗೇ ಮಾಡು."

"ಈ ವಿಷಯ ನೀನು ಯಾರಲ್ಲಿಯೂ ಬಾಯಿ ಬಿಡಬೇಡ. ಸಾಮಾನುಗಳಿಗೇನು ಮಾಡುತ್ತೀ?"

"ಚಿಗಳಿ ಕಂಪೆನಿಯ ಸಾಮಾನು ಕೊಳೀತಾ ಬಿದ್ದಿದೆ. ಅದನ್ನೇ ತಂದು ಬಣ್ಣ ಹಾಕಿಸಿದರೆ ಸದ್ಯಕ್ಕೆ ಸಾಕು."

"ಎಷ್ಟಾಗುತ್ತದೆ?"

"ಸಾವಿರ, ಸಾವಿರದಿನ್ನೂರು ಕೈಗೆ ಹಾಕಿದರೆ ಎಲ್ಲಾ ಸಾಮಾನೂ ಸಿಕ್ಕುತ್ತೆ."

"ನೀನು ನಾಳೆ ನಾಡಿದ್ದು ಹೋಗಿ ಸಾಮಾನು ಮಾತನಾಡಿಕೊಂಡು ಬಾ."

"ಹಾಗೆ ಬೇಡ ಭೀಮಣ್ಣ. ಕೈಯಲ್ಲಿ ಕಾಸಿಟ್ಟುಕೊಂಡು ಹೋಗಿ ಮಾತನಾಡುವುದೇ ಒಳ್ಳೆಯದು."

"ಅದೂ ಸರಿ...."

"ಸಾಮಾನು ಇಡೋಕೆ, ಪ್ರ್ಯಾಕ್ಟೀಸು ಮಾಡುವುದಕ್ಕೆ ತಾವ ಬೇಕಲ್ಲ ಭೀಮಣ್ಣ."

"ಅದಕ್ಕೇಕೋ ಯೋಚನೆ. ಸಣ್ಣಪ್ಪನವರ ರೈಸ್‌ಮಿಲ್ ಖಾಲಿ ಬಿದ್ದಿದೆ. ಅದನ್ನೇ ಬಾಡಿಗೆಗೆ ಗೊತ್ತುಮಾಡಿಕೊಂಡರಾಯಿತು."

"ನಾಟಕ ಇಲ್ಲೇ ಷುರು ಮಾಡೋದಾ?"

"ನಿನ್ನದೆಲ್ಲಾ ಕೂಸು ಹುಟ್ಟುವುದಕ್ಕೆ ಮುಂಚೆ ಕುಲಾವಿ ಹೊಲಿಸೋ ಮಾತೇ! ನಾಟಕ ಸಿದ್ಧವಾದ ಮೇಲೆ ತಾನೆ ನಾಟಕ ಆಡೋ ಮಾತು. ನಾಟಕ ಎಷ್ಟು ದಿನದಲ್ಲಿ ಸಿದ್ಧಮಾಡಬಲ್ಲೆ.?"

"ಸದಾರಮೆ, ಗುಲೇಬಕಾವಲಿ, ವಿರಾಟಪರ್ವ, ಸುಂದೋಪಸುಂದ, ಲಂಕಾದಹನದ ಹಾಡು, ಮಾತುಗಳನ್ನೆಲ್ಲಾ ಅಮ್ಮಯ್ಯನಿಗೆ ಪಾಠ ಮಾಡಿ ಸಿದ್ದೀನಿ ಭೀಮಣ್ಣ. ಕಳ್ಳನ ಪಾರ್ಟಿಗೆ ಲಕ್ಷ್ಮಯ್ಯ, ಆಂಜನೇಯನ ಪಾರ್ಟಿಗೆ ನಂಜುಂಡಯ್ಯ, ರಾಜಾಪಾರ್ಟಿಗೆ ಮೇಲುಕೋಟೆ ಭಾಷ್ಯಮ ಯ್ಯಂಗಾರಿಯನ್ನು ಕರೆಸಿಕೊಂಡರೆ ಚಿಲ್ರೆ ಪಾರ್ಟುಗಳಿಗೆ ಬೇಕಾದಷ್ಟು ಜನ ಸಿಕ್ಕುತ್ತಾರೆ. ಹದಿನೈದು ದಿನ ಪ್ರ್ಯಾಕ್ಟೀಸು ಆದರೆ ಸಾಕು-ಸ್ಟೇಜ್ ಮೇಲೆ ನಾಟಕ ತಂದುಬಿಡಬಹುದು."

"ನೀನು ಯಾರು ಯಾರಿಗೆ ಕಾಗದ ಬರೆಯಬೇಕೋ ಬರೆದು ಎಲ್ಲಾ ವ್ಯವಸ್ಥೆಮಾಡು. ಉಳಿದ ವಿಷಯ ನನಗಿರಲಿ."

"ಸುಬ್ರಹ್ಮಣ್ಯನ ಹತ್ತಿರ ಇವತ್ತೇ ಮಾತನಾಡುತ್ತೀಯಾ?"

"ಜವಾಬ್ದಾರಿ ನಾನು ಹೊತ್ತುಕೊಂಡ ಮೇಲೆ ಮುಗಿದು ಹೋಯಿತು. ಅದರ ಹವ್ಯಾಸವನ್ನೇ ಮರೆತುಬಿಡು."

"ಮರೆತು ಬಿಡು!..........."

"ಚಿಂತೆ ಮಾಡುವುದನ್ನು ಮರೆತುಬಿಡು ಎಂದರ್ಥ."

"ಹಾಗೇ—ಆಗಲಪ್ಪಾ."

ಸುಬ್ರಹ್ಮಣ್ಯನನ್ನು ನೋಡುವ ಉದ್ದೇಶವಿಟ್ಟುಕೊಂಡೇ ಸಂಜೆ ಆಚಾರಿ ತೋಟದ ಕಡೆ ಹೋದ. ತೋಟದಿಂದ ಹೊರಬಿದ್ದ ಸುಬ್ರಹ್ಮಣ್ಯ

"ಇದೇನು ಆಚಾರಿ—ಇಷ್ಟು ದೂರ ಪಾದ ಬೆಳಸಿಬಿಟ್ಟೆ." ಎಂದ.

"ಬಡವರೂ ವಾಕಿಂಗ್ ಹೋಗೋ ಅಭ್ಯಾಸ ಇಟ್ಟುಕೊಂಡಿದ್ದಾರಯ್ಯಾ."

"ಬೇಡ ಎಂದವರು ಯಾರಪ್ಪಾ."

ಎಂದು ಜತೆಯಲ್ಲಿಯೇ ಹೊರಟ. ಇಬ್ಬರೂ ಮೈಸೂರು ರಸ್ತೆಯಲ್ಲಿ ಸ್ವಲ್ಪ ದೂರ ನಡೆದು, ರಸ್ತೆ ಮಗ್ಗುಲಿಗಿದ್ದ ಕಲ್ಲು ಬೆಂಚಿನ ಮೇಲೆ ಕುಳಿತರು.

"ಶಂಕರ ಯಾವಾಗ ಬರುತ್ತಾನೆ" ಎಂದು ಆಚಾರಿ ಕೇಳಿದ.

"ನಾಳೆ ನಾಡಿದ್ದು ಬರಬಹುದು."

"ಮನೆಯಲ್ಲೇನು ವಿಶೇಷ."

"ಒಳಗೇ ಗುಜುಗುಂಪಲು ನಡೆದಿದೆ—ನನ್ನ ತನಕ ಇನ್ನೂ ಬಂದಿಲ್ಲ. ದಾಸಪ್ಪನ ಹೆಂಡತಿ ಕಮಲಮ್ಮ ತುಂಬ ಹೆಚ್ಚಿಹೋಗಿದ್ದಾಳೆ ಆಚಾರಿ."

"ಒಳ್ಳೆಯ ಸಾಧುಪ್ರಾಣಿ ಹಾಗೆ ಕಾಣಿಸುತ್ತಾಳೆ."

"ಶುದ್ಧ ಗೋಮುಖವ್ಯಾಘ್ರ. ನಮ್ಮ ಮನೆಗೆ ಅವಳು ಹೆಚ್ಚು ಬರುತ್ತಿರಲಿಲ್ಲ. ಈಗ ದಿವಸಕ್ಕೆ ಒಂದು ಸಲವಾದರೂ ತುಕ್ಕದೆ ಇರುವುದಿಲ್ಲ. ನಾಮಕರಣದ ದಿವಸ ಅವಳು ಮಾಡಿದ ಕುತಂತ್ರ ನೋಡಿದೆಯಪ್ಪೆ."

"ಕೇಳಿದೆ............ಈ ವಿಷಯ ಮುಚ್ಚಿಡುವುದಕ್ಕಾಗುವುದಿಲ್ಲ ಸುಬ್ರಹ್ಮಣ್ಯ. ಒಂದಲ್ಲ ಒಂದು ದಿನ ಬಯಲಿಗೆ ಬಿದ್ದೇ ಬೀಳುತ್ತದೆ."

"ಕಮಲಮ್ಮನಂಥವರು ಇಲ್ಲದ ಯಜಮಾನಿಕೆ ಮಾಡದಿದ್ದರೆ ಪರಿಸ್ಥಿತಿ ವಿಕೋಪಕ್ಕೆ ಹೋಗುವುದಿಲ್ಲ. ಉರಿಯುತ್ತಿರುವ ಬೆಂಕಿಗೆ ಕಮಲಮ್ಮ ತುಪ್ಪ ಹುಯ್ಯುತ್ತಿದ್ದಾಳೆ."

"ಬೆಂಕಿ ಉರಿಯುತ್ತಿದೆಯೇನು?"

"ಹೊಗೆಯಾಡುತ್ತಿದೆ."

"ಸ್ಫೋಟನವಾಗುವುದಕ್ಕೆ ಮುಂಚೆಯೇ ಎಚ್ಚರವಾಗಿರುವುದು ಲೇಸು ಸುಬ್ರಹ್ಮಣ್ಯ."

"ಏನು ಮಾಡೂಂತೀ?"

"ದಾಸರಿ ನಾಟಕದ ಕಂಪೆನಿ ಮಾಡಬೇಕೆಂದು ಒಂದೇ ಸಮನೆ ಬಡಿದುಕೊಳ್ಳುತ್ತಿದ್ದಾನೆ. ಕಂಪೆನಿ ಮಾಡಿಕೊಡು. ಅವನೂ ಅವನ ಸಂಸಾರ ಕೆಲವು ತಿಂಗಳು ಊರು ಬಿಟ್ಟು ಹೋದರೆ ನೀನು ಮನೆಯನ್ನು ತಹಬಂದಿಗೆ ತರಬಹುದು."

"ಅಲ್ಲಿಯ ವರೆಗೆ ನನ್ನ ಗತಿ?"

"ಕಂಪೆನಿ ದೂರವೇನೂ ಹೋಗುವುದಿಲ್ಲವಲ್ಲ. ಮಂಡ್ಯ, ಮದ್ದೂರು, ಹಿರೋಡೆ, ಶ್ರೀರಂಗಪಟ್ಟಣ, ಮೈಸೂರು—ಇಲ್ಲೇ ಇರುತ್ತದೆ. ನೀನು ಬೇಕಾದಾಗ ಹೋಗಿ ಬರಲು ಯಾರದೇನು ಅಡ್ಡಿ."

"ಕಂಪೆನಿ ಹುಚ್ಚು ಅವನ ತಲೆಗೆ ಹಾಕಿದವರು ಯಾರು?"

"ಅದು ಅವನ ಜನ್ಮಕ್ಕಂಟಿದ ಹುಚ್ಚು. ನಿನ್ನ ವಿಷಯ ನಾನು ಹಿಂದೆಯೇ ಪ್ರಸ್ತಾಪಿಸಿದಾಗ ಕಂಪೆನಿ ತೆಗೆಯುವ ನೆಪ ಹೂಡಿ 'ಸಾಧ್ಯ ವಿಲ್ಲ' ಎಂದ. ಅವನನ್ನು ದಾರಿಗೆ ತರುವುದಕ್ಕೆ 'ಸುಬ್ರಹ್ಮಣ್ಯನ ಬಾಂಧವ್ಯ ಮಾಡು. ಕಂಪೆನಿ ತೆಗೆಯುವ ವಿಷಯ ಮುಂದೆ ಯೋಚಿಸಿದ ರಾಯಿತು' ಎಂದು ಹೇಳಿ ಪುಸಲಾಯಿಸಬೇಕಾಯಿತು. ಆ ಮಾತನ್ನೇ ಭದ್ರವಾಗಿ ಹಿಡಿದುಕೊಂಡು ನನ್ನ ಜೀವ ಅರೆಯುತ್ತಿದ್ದಾನೆ."

"ಈ ವಿಷಯ ಅವನೇ ಹೇಳಬಹುದಾಗಿತ್ತಲ್ಲಾ !"

"ಅದು ಹೇಗಯ್ಯ ಹೇಳುತ್ತಾನೆ."

"ಸರಿ–ಕಂಪೆನಿ ಮಾಡುವುದಕ್ಕೆ ಹಣ?"

"ಚಿನ್ನಪ್ಪ ಕೊಡುವುದಕ್ಕೆ ಸಿದ್ಧವಾಗಿದ್ದಾನೆ."

"ಇದರಲ್ಲಿ ನಿನ್ನ ಪಾತ್ರವೇನು ಆಚಾರಿ?"

"ನನ್ನ ಕಿವಿಯ ಮೇಲೆ ಬಿದ್ದಿರುವ ಸಂಗತಿಗಳನ್ನೆಲ್ಲಾ ನಿರ್ವಂಚನೆ ಯಾಗಿ ನಿನಗೆ ತಿಳಿಸಿದ್ದೇನೆ. ನಿನ್ನ ಕೇಳದೆ—ನಿನ್ನ ಮನಸ್ಸಿಗೆ ಅಸ ಮಾಧಾನವಾಗುವ ಯಾವ ಕೆಲಸವನ್ನೂ ಮಾಡಕೂಡದೆಂದೂ ದಾಸ ರೀಗೆ ಎಚ್ಚರಿಕೆ ಕೊಟ್ಟಿದ್ದೇನೆ. ಬೇಕಾದರೆ ನೀನೇ ಕೇಳಿ ನೋಡು."

"ನಾಟಕದ ಕಂಪೆನಿ ಕಟ್ಟಿಕೊಂಡು ಇವನು ಏಗಬಲ್ಲನೇ ಆಚಾರಿ. ಎಂಥೆಂಥಾ ಕಂಪೆನಿಗಳೋ ದಿವಾಳಿ ತೆಗೆಯುತ್ತಿವೆ. ಈ ಕಾಲದಲ್ಲಿ ನಾಟ ಕದ ಕಂಪೆನಿ ಮಾಡುವವನನ್ನು ವಿವೇಕಿ ಎಂದು ಕರೆಯಲು ಸಾಧ್ಯವೇ?"

"ಸಾಧ್ಯವಿಲ್ಲ. ಆದರೆ ದಾಸರಿ ಯಾವತ್ತು ವಿವೇಕಿ ಎನಿಸಿ ಕೊಂಡಿದ್ದ. ಹುಟ್ಟಾ ಮೂರ್ಖ—ಅವಿವೇಕ ಶಿಖಾಮಣಿ. ಕಂಪೆನಿ ಮಾಡಿಕೊಂಡು ಲಕ್ಷಾಂತರ ರೂಪಾಯಿ ಸಂಪಾದನೆ ಮಾಡಿ ತಾನೂ ವೀರಣ್ಣನವರ ಹಾಗೆ ನಾಲ್ಕೈದು ಥಿಯೇಟರ್ ಕಟ್ಟುತ್ತೇನೆ ಎಂದು ಕನಸುಕಾಣುತ್ತಿದ್ದಾನೆ."

"ನನಗೆ ಇದು ಕಾಡುವ ಕಾಲ ಆಚಾರಿ. ಮನೆಯಲ್ಲಿ ಕುರುಕ್ಷೇತ್ರ–ಹೊರಗೆ ಈ ತಾಪತ್ರಯ. ದಾಸರೀಗೆ ದುಡ್ಡು ಬೇಕಾದರೆ ಸಾವಿರ, ಎರಡು ಸಾವಿರ ಕೊಡುವುದಕ್ಕೆ ನಾನು ಸಿದ್ಧನಾಗಿದ್ದೇನೆ.... ಕಂಪೆನಿ ಮಾಡುವ ಯೋಚನೆ ಬಿಡಿಸಿಬಿಡು."

"ನನ್ನ ಪ್ರಯತ್ನ ಮುಗಿದುಹೋಯಿತು ಸುಬ್ಬಣ್ಣ. ಚಿನ್ನಪ್ಪ ಧೂಪ ಹಾಕಿರುವಾಗ ದಾಸರಿ ನಮ್ಮ ಮಾತು ಕೇಳುತ್ತಾನೆಯೇ?"

"ಚಿನ್ನಪ್ಪನಿಗಿನ್ನೂ ಏನಾದರೂ ಆಸೆಯಿದೆಯೇ?"

"ಅಂಥದ್ದೇನೂ ಇಲ್ಲ. ನಾಲ್ಕೈದು ಸಾವಿರ ರೂಪಾಯಿ ಬಂಡ ವಾಳ ಹಾಕಿ ನಲವತ್ತು ಐವತ್ತು ಸಾವಿರ ರೂಪಾಯಿ ಬಾಚಿ ಕೊಳ್ಳಬಹುದು ಎಂದು ಅವನ ದುರಾಶೆ."

"ನನ್ನ ಏನು ಮಾಡು ಎನ್ನುತ್ತೀ ಆಚಾರಿ"

ಎಂದು ಸುಬ್ರಹ್ಮಣ್ಯ ಕೇಳಿದ. ಅವನ ಧ್ವನಿಯಲ್ಲಿ ನಿರಾಶೆ ಮೊಳಕೆ ಹಾಕಿತ್ತು. ಅವನ ಒಳಗುದಿ ಮುಖದ ಮೇಲೆ ಸ್ಪಷ್ಟವಾಗಿ ಮೂಡಿತ್ತು.

"ನಾನು ಹೇಳಿದ ಹಾಗೆ ಮಾಡುವೆಯಾ?"

"ನೀನು ನನ್ನ ಹಿತೈಷಿಯೆಂದು ನಂಬಿದ್ದೇನೆ ಆಚಾರಿ."

"ನಿನ್ನಂಥ ಸ್ನೇಹಿತನನ್ನು ಕಳೆದುಕೊಳ್ಳುವಷ್ಟು ಮೂಢನೇನಯ್ಯಾ ನಾನು. 'ನನಗೆ ಕಷ್ಟ ಬಂದಿದೆ—ಸಾವಿರ, ಎರಡು ಸಾವಿರ ರೂಪಾಯಿ ಕೊಡು' ಎಂದರೆ ನೀನು ಇಲ್ಲವೆನ್ನುತ್ತೀಯಾ?"

..................................

"ಈ ಸಮಸ್ಯೆ ನಾವು ಊಹಿಸಿರುವುದಕ್ಕಿಂತ ಗಾಢವಾಗಿದೆ. ಸದ್ಯ ನಾವು ದಾಸರಿ ಹೇಳಿದ ಹಾಗೆ ಕೇಳುವುದೇ ಜಾಣತನ. ಹಕ್ಕಿ ಕೈಯಿಂದ ಜಾರಿದರೆ ಪುನಃ ಹಿಡಿಯುವುದು ಕಷ್ಟ."

"ಈ ಕಂಪೆನೀಗೆ ಯಾರು ದಿಕ್ಕು?"

"ಯಾರನ್ನಾದರೂ ಹುಡುಕಬೇಕು."

"ನೀನು ಜವಾಬ್ದಾರಿ ತೆಗೆದುಕೊಳ್ಳುವೆಯಾ?"

"ನಾಲ್ಕು ದಿವಸದ ಹಾಲೂ ಅನ್ನ ನಂಬಿಕೊಂಡು ನಿತ್ಯದ ಕೂಳು ಕಳೆದುಕೊಳ್ಳಲೇ? ನನ್ನ ಜಾಗದಲ್ಲಿ ಇನ್ನು ಯಾವನಾದರೂ ಫೂಟ್

ಲಾಯರಿ ಬಂದು ಕುಳಿತರೆ ನಾನು ಉಣ್ಣುವ ಅನ್ನಕ್ಕೆ ಮಣ್ಣು ಬೀಳುತ್ತದೆ."

"ನೀನು ಕಂಪೆನಿ ಜವಾಬ್ದಾರಿ ಹೊತ್ತುಕೊಳ್ಳುವ ಹಾಗಿದ್ದರೆ ನಾನು ಯೋಚನೆ ಮಾಡುತ್ತೇನೆ ಆಚಾರಿ."

"ನಾಳೆ ನಾನು ನಿರುದ್ಯೋಗಿಯಾದರೆ ನಿನಗೇ ಹೊರೆಯಾಗುತ್ತೇನಲ್ಲಾ ಸುಬ್ಬಣ್ಣ?"

"ಅಂಥ ಕಾಲ ಬಂದಾಗ ನಿನ್ನ ಕೈ ನಾನು ಬಿಡುವುದಿಲ್ಲಯ್ಯಾ."

"ಹಾಗಾದರೆ ಆಗಲಪ್ಪಾ. ನಿನ್ನ ಹಣ ಜೋಕೆ ಮಾಡುವುದೂ ನನ್ನ ಧರ್ಮ."

"ಕಂಪೆನಿ ಆರಂಭಿಸುವುದಕ್ಕೆ ಎಷ್ಟು ಹಣ ಬೇಕು?"

"ಸಾಮಾನು ಸರಂಜಾಮು ಆಗಬೇಕು—ಆಕ್ಟರುಗಳನ್ನು ಕರೆಸಿಕೊಳ್ಳಬೇಕು—ಅವರಿಗೆಲ್ಲಾ ಅಡ್ವಾನ್ಸ್ ಹಣ ತೆರಬೇಕು—ಪ್ರ್ಯಾಕ್ಟೀಸ್ ಮಾಡುವುದಕ್ಕೆ ಒಂದು ಮನೆ ಬಾಡಿಗೆಗೆ ತೆಗೆದುಕೊಳ್ಳಬೇಕು—ಆಕ್ಟರುಗಳ ಊಟೋಪಚಾರ ನೋಡಿಕೊಳ್ಳಬೇಕು. ನಾಟಕಗಳು ರಂಗದ ಮೇಲೆ ಬಂದರೆ ಹಣ ಬರುತ್ತದೆ."

"ಅಲ್ಲಿಯ ವರೆಗೆ ಎಷ್ಟು ಬೇಕಾಗಬಹುದು?"

"ಸುಮಾರು ಐದು ಸಾವಿರ."

"ಇದು ನಾನು ಮನಸ್ಸಂತೋಷದಿಂದ ಕೊಡುವ ಹಣವಲ್ಲ ಆಚಾರಿ."

"ನೀನು ನೊಂದುಕೊಂಡು ಕೊಡಬೇಡಪ್ಪಾ. ಕಂಪೆನಿ ಊರ್ಜಿತವಾಗಲ್ಲ. ಸಂತೋಷವಾಗಿ ಕೊಡುವ ಹಾಗಿದ್ದರೆ ಕೊಡು—ನಾನೂ ಹಗಲೂ ರಾತ್ರಿ ದುಡಿದು ಕಂಪೆನಿ ಬದುಕುವ ಹಾಗೆ ಮಾಡುತ್ತೇನೆ. ನಿನಗೆ ಸಂತೋಷವಿಲ್ಲದಿದ್ದರೆ ದಾಸರಿ ಉಂಟು—ಚಿನ್ನಪ್ಪ ಉಂಟು. ನಾನು 'ಅಲಕ್ ನಿರಂಜನ್' ಎಂದುಬಿಟ್ಟು ಹೊರಗೆ ಬಂದುಬಿಡುತ್ತೇನೆ."

"ಹಾಗೆನ್ನಬೇಡ ಆಚಾರಿ."

ಎಂದು ಸುಬ್ರಹ್ಮಣ್ಯನ ಹೃದಯಾಂತರಾಳದಿಂದ ಕೂಗು ಹೊರಟಿತು.

## ೨೦

ಶ್ರೀಧರನನ್ನು ಜತೆಯಲ್ಲಿ ಕರೆದುಕೊಂಡೇ ಶಂಕರ ನವರಾತ್ರಿ ರಜಕ್ಕೆ ಊರಿಗೆ ಬಂದ. ಪಾರ್ವತಮ್ಮನವರು ಮಗನನ್ನಪ್ಪಿಕೊಂಡರು.

ಶ್ರೀಧರನ ಪರಿಚಯ ಶಂಕರನ ಕಾಗದಗಳ ಮೂಲಕ ಮನೆಯವರಿಗೆಲ್ಲಾ ಸಾಕಷ್ಟು ಆಗಿತ್ತು.

"ಇವನೇಮ್ಮ—ನನ್ನ ಸ್ನೇಹಿತ ಶ್ರೀಧರ್."

ಎಂದು ಶಂಕರ ಹೇಳಿದಾಗ ಪಾರ್ವತಮ್ಮನವರು ಅವನನ್ನು ಪ್ರೀತಿಯಿಂದ ಸ್ವಾಗತಿಸಿದರು.

ರವಿಯನ್ನು ನೋಡುವ ಆತುರ ಶಂಕರನನ್ನು ಬಾಧಿಸುತ್ತಿತ್ತು. ಅತ್ತಿಗೆಯ ರೂಮಿಗೆ ಹೋಗಿ, ಅವಳನ್ನು ಮಾತನಾಡಿಸಿ ರವಿಯನ್ನು ಹೊರಗೆತ್ತಿಕೊಂಡು ಬಂದ. ಪಾರ್ವತಮ್ಮನವರು ಮಗನಿಗೆ,

"ತಲೆ ಭದ್ರವಾಗಿ ಹಿಡಿದುಕೊಳ್ಳಪ್ಪ. ಎಳೆ ಬೊಮ್ಮಟೆ—ಹಿಂಸೆಯಾದೀತು." ಎಂದರು.

ಶಂಕರ ರವಿಯನ್ನಪ್ಪಿ ಮುದ್ದಾಡುತ್ತಾ,

"ರವಿ ಹೇಗಿದ್ದಾನೆ ಶ್ರೀಧರ್?" ಎಂದು ಕೇಳಿದ.

"ತಿಂಗಳ ಮಗು ಕೆಂಪು ತೋರಿಸಿ ಹೇಗಿದೆ ಎಂದು ಕೇಳಿದರೆ ಏನು ಹೇಳಲೋ ಶಂಕರ."

ಮಗುವನ್ನು ಮುದ್ದಾಡುತ್ತಾ ಶಂಕರ,

"ರವಿ—ರವಿ—ನಾನು ಯಾರು ಗೊತ್ತೇನೋ" ಎಂದ.

ಮಗು ಕಣ್ಣು ಬಿಟ್ಟುಕೊಂಡು ನೋಡಿತು.

"ನಾನು ಕಣೋ—ನಿನ್ನ ಚಿಕ್ಕಪ್ಪ—ಶಂಕರ."

ಮಗು ಬಾಯಿ ಚಪ್ಪರಿಸಿತು.

"ನೋಡೋ ಶ್ರೀಧರ್—ರವಿ ನನಗೆ ಮುತ್ತು ಕೊಡುತ್ತಿದ್ದಾನೆ."

ಮಗು ಶಂಕರನನ್ನೇ ನೋಡುತ್ತಾ ನಕ್ಕಿತು.

"ಛೀ ಕಳ್ಳ—ದೊಡ್ಡವನಾಗು ನಿನಗೆ ಮಾಡುತ್ತೇನೆ. ಇಲ್ಲಿ ಬಿ.ಎ. ಮಾಡಿಸಿ ಆಕ್ಸ್‌ಫರ್ಡಿಗೆ ಓಡಿಸಿಬಿಡುತ್ತೇನೆ."

ಪಾರ್ವತಮ್ಮನವರು ಮೆಲ್ಲನೆ

"ಗಾಳಿ ಬೀಸುತ್ತಾ ಇದೆ. ಮಗು ಒಳಕ್ಕೆ ಕೊಡು ಶಂಕರಾ."

ಎಂದರು. ಶಂಕರ ಮಗುವನ್ನೆತ್ತಿಕೊಂಡು ಹೋಗಿ ತೊಟ್ಟಿಲಿನಲ್ಲಿ ಮಲಗಿಸಿ

"ಚೆನ್ನಾಗಿದ್ದೀಯಾ ಅತ್ತಿಗೆ" ಎಂದ.

"ಚೆನ್ನಾಗಿದ್ದೀನಪ್ಪಾ. ಕೊನೆಗೂ ನಾಮಕರಣಕ್ಕೆ ತಪ್ಪಿಸಿಕೊಂಡೆ."

"ನನಗೆ ಲಭ್ಯವಿಲ್ಲ ಅತ್ತಿಗೆ. ಅಣ್ಣ ಚೆನ್ನಾಗಿದ್ದಾನೆಯೇ ?"

"ಇದ್ದಾರೆ."

ಶಂಕರ ಹೊರಗೆ ಬಂದವನೇ

"ಅಮ್ಮ—ನಿಂಗಜ್ಜಿ ಎಲ್ಲಿ" ಎಂದು ಕೇಳಿದ.

"ಇಲ್ಲೇ ಹೋಗಿರಬಹುದು—ಬರುತ್ತಾಳೆ. ನೀನೂ ನಿನ್ನ ಸ್ನೇಹಿತರೂ ಸ್ನಾನಮಾಡಿ."

"ಕಾಫಿ ಕುಡಿದು ಸ್ನಾನ ಮಾಡುತ್ತೀವಮ್ಮ."

"ಹಾಗೇ ಮಾಡಿ."

ಶಂಕರ ಗೆಳೆಯನನ್ನು ತನ್ನ ರೂಮಿಗೆ ಕರೆದೊಯ್ದ. ಅವರು ಬಟ್ಟೆ ಬದಲಾಯಿಸುವಷ್ಟರಲ್ಲಿ ಪಾರ್ವತಮ್ಮ ಬಿಸಿ ಕಾಫಿ, ಕೋಡುಬಳೆ ತಂದು ಕೊಟ್ಟರು.

ಕೋಡುಬಳೆ ಕುರುಕುತ್ತಿದ್ದ ಶಂಕರ ಬಾಗಿಲಿನಲ್ಲಿ ಕಂಡ ನಿಂಗವ್ವನನ್ನು ನೋಡಿ 'ನಿಂಗಜ್ಜೀ' ಎಂದು ಕೂಗಿದ. ನಿಂಗವ್ವ ಬಂದು ಅವನ ರೂಮಿನ ಬಾಗಿಲಿನಲ್ಲಿ ನಿಂತು

"ಯಾವಾಗ ಬಂದೆ ಅಪ್ಪಯ್ಯ?" ಎಂದು ಕೇಳಿದಳು.

"ಈಗ ತಾನೇ ಬರ್ತಾ ಇದ್ದೇನೆ."

"ಇವರು ಯಾರು ?"

"ನನ್ನ ಸ್ನೇಹಿತ ಶ್ರೀಧರ್."

"ನಿನ್ನ ಗುರುಗೋಳು ಬರ್ನಿಲ್ವಾ?"

"ಇಲ್ಲ ನಿಂಗವ್ವ—ಅವರ ಮನೆಯಲ್ಲಿ ಪೂಜೆಯಂತೆ."

"ನಮ್ಮ ವಿಷಯವೆಲ್ಲಾ ನಿನ್ನ ಮನೆಯವರಿಗೆ ತಿಳಿದುಹೋಗಿದೆ."

ಎಂದು ಶ್ರೀಧರ ವಿಸ್ಮಯಗೊಂಡು ಕೇಳಿದ.

"ನೀನು ಹೇಗಿದ್ದೀ ನಿಂಗಜ್ಜಿ."

"ಚಂದಾಕಿದ್ದೀನಪ್ಪಾ. ರವಿಯಪ್ಪನ್ನ ನೋಡಿದ್ಯಾ ?"

"ಅವನನ್ನೆತ್ತಿಕೊಂಡು ಹಿಸುಕಿ, ಮುದ್ದೆ ಮಾಡಿ ಅತ್ತಿಗೆ ಕೈಗೆ ಹಾಕಿಬಿಟ್ಟೆ."

ತನ್ನನ್ನೇ ದಿಟ್ಟಿಸಿ ನೋಡುತ್ತಿದ್ದ ನಿಂಗವ್ವನ ಕಡೆ ತಿರುಗಿ

"ಏನು ಹಾಗೆ ನೋಡುತ್ತಿದ್ದೀ ನಿಂಗಜ್ಜಿ" ಎಂದು ಶಂಕರ ಕೇಳಿದ.

"ನಿಮ್ಮಿಬ್ರನ್ನೂ ನೋಡಿದ್ರೆ ರಾಮಲಕ್ಷ್ಮಣನ್ನ ಕಂಡಾಗೆ ಆಯ್ತದಪ್ಪ."

"ನಿಜ ಹೇಳಿದೆ ನಿಂಗವ್ವ. ಶ್ರೀಧರ ನನ್ನ ಅಣ್ಣ ಇದ್ದ ಹಾಗೇ ಇದ್ದಾನೆ."

"ಸಾನಾ ಆಯ್ತಾ?"

"ಇಲ್ಲ—ಇದೋ ಎದ್ದೆವು."

"ಒಸಿ ಒಲೆ ನೋಡ್ತೀನಿ–ಚಂದಾಕಿ ಬಿಸಿಬಿಸಿಯಾಗಿ ನೀರು ಉಯ್ಕೊಳ್ಳಿ"

ಎಂದು ನಿಂಗವ್ವ ಒಳಕ್ಕೆ ಹೋದಳು. ಶ್ರೀಧರ ಆಶ್ಚರ್ಯ ಚಕಿತನಾಗಿ

"ಈ ಮುದುಕಿ ನಿನ್ನ ಎಷ್ಟು ಪ್ರೀತಿಸುತ್ತೆ ಶಂಕರ!"

"ನಿನಗೆ ಹೇಗೆ ಗೊತ್ತಾಯಿತು?"

"ಅವಳ ಕಣ್ಣುಗಳು ನಿನ್ನನ್ನೇ ತುಂಬಿಕೊಳ್ಳುತ್ತಿದ್ದುದನ್ನು ನೋಡಿದೆ."

"ನೀನು ಬಹಳ ಅಪಾಯದ ಆಸಾಮಿ ಕಣಯ್ಯಾ."

"ಏಕಪ್ಪಾ?"

"ಬೆರಳು ತೋರಿಸಿದರೆ ಹಸ್ತ ನುಂಗುತ್ತೀ."

"ನಾನು ಇಲ್ಲಿಗೆ ಬರುವುದಕ್ಕೆ ತುಂಬ ಅನುಮಾನಿಸಿದೆ."

"ನನಗೆಷ್ಟು ಕೋಪ ಬಂದಿತ್ತು ಬಲ್ಲೆಯಾ?"

"ನಿನ್ನ ಕೋಪ ನ್ಯಾಯವಾದುದು. ಇಲ್ಲಿಗೆ ಬಂದು ಈ ಮನೆ— ಈ ಜನ ನೋಡದಿದ್ದರೆ ನಾನು ತುಂಬ ದುರದೃಷ್ಟಶಾಲಿಯಾಗುತ್ತಿದ್ದೆ."

"ನನ್ನ ತಾಯಿ, ಅಣ್ಣ, ಅತ್ತಿಗೆ, ನಿಂಗವ್ವ ಎಲ್ಲಾ ಹಳ್ಳಿಯ ಜನ ಶ್ರೀಧರ್. ನಾಗರಿಕತೆಯ ನಯವಿನಯ ನನ್ನ ಜನಕ್ಕೆ ಗೊತ್ತಿಲ್ಲ. ಆದರೆ ಪಟ್ಟಣಿಗರ ಕುಹಕ, ಮೋಸ ಇವರಲ್ಲಿ ಇಲ್ಲವೆಂದು ಧಾರಾಳವಾಗಿ ಹೇಳಬಲ್ಲೆ."

"ಪಟ್ಟಣಿಗರಲ್ಲಿಯೂ ಧರ್ಮಿಷ್ಠರಿದ್ದಾರೆ ಶಂಕರ. ಮಾನವನ ಮನಸ್ಸು ನೈಸರ್ಗಿಕವಾಗಿ ಪರಿಶುದ್ಧವಾದುದು. ವಯಸ್ಸು ಬೆಳೆದಂತೆ ಅದರ ಮೇಲೆ ಧೂಳು ಕವಿಯುತ್ತದೆ. ನಿನ್ನ ರವಿಯನ್ನೇ ನೋಡು— ದೇವರು ಇದ್ದಾನೆ ಎನ್ನುವುದಕ್ಕೆ ರವಿಯೇ ಸಾಕ್ಷಿ. ದೇವರಿಗೆ ನಾವು ಆರೋಪಿಸುವ ಸಕಲ ಸದ್ಗುಣಗಳೂ ಆ ಮುದ್ದು ಮಗುವಿನಲ್ಲಿ ಮೂರ್ತಿವತ್ತಾಗಿದೆ. ನಾವೂ ಒಮ್ಮೆ ಹೀಗೇ ಇದ್ದೆವಲ್ಲವೇ—ಯಾವ ಕೊಂಕು, ಕುಹಕ, ಕಾಪಟ್ಯವನ್ನೂ ಕಾಣದೆ ದೇವರ ಮಕ್ಕಳ ಹಾಗೆ—ದೇವರ ಹಾಗೆ ಇದ್ದೆವಲ್ಲವೇ? ಇಂದು ರಾಗದ್ವೇಷಗಳಿಗೆ, ಈರ್ಷೆ ವೈಷಮ್ಯಗಳಿಗೆ ಮನಸ್ಸು ತೆತ್ತಿದ್ದೇವೆ. ದೇವತಾಸ್ವರೂಪದ ಮೇಲೆ ಪಾಪದ ಮುಸುಕನ್ನು ಹಾಕಿದ್ದೇವೆ."

"ನಿನ್ನ ಮಾತು ನಿಜ ಶ್ರೀಧರ್. ವಯಸ್ಸಾದರೂ ದೇವತಾಂಶ ಉಳಿಸಿಕೊಳ್ಳಲು ಸಾಧ್ಯವಿದೆ. ನನ್ನ ತಾಯಿ, ನಿಂಗಜ್ಜಿ ನೋಡಿದರೆ ಈ ಸತ್ಯ ನನ್ನ ಮನಸ್ಸಿಗೆ ನಿತ್ಯವೆನಿಸುತ್ತದೆ."

"ನಾವು ದೇವರನ್ನು ಸತ್ತ ಗುಡಿಗಳಲ್ಲಿ, ನಿರ್ಜೀವ ಗ್ರಂಥಗಳಲ್ಲಿ ಹುಡುಕುತ್ತೇವೆ. ಅದು ಬೆಳಗುವುದು ಮಾನವನ ಹೃದಯದಲ್ಲಿ ಎಂಬ ಅರಿವು ನಮಗಿಲ್ಲ.—ಶಾಸ್ತ್ರಿಗಳು ಒಂದು ಸಲ ಹೇಳಿದುದು ಜ್ಞಾಪಕಕ್ಕೆ ಬರುತ್ತದೆ. ಬುದ್ಧಚಾರಿತ್ರ್ಯ ಓದುತ್ತಿದ್ದೆವು. ಅದರಲ್ಲಿ ಮಂದೆಯನ್ನಗಲಿದ್ದ ಕುರಿಮರಿಯನ್ನೆತ್ತಿಕೊಂಡು ಭಗವಂತ ಅದನ್ನು ಮಂದೆಯ ಬಳಿ ಬಿಟ್ಟ ಕಥೆಯೊಂದು ಬರುತ್ತದೆ. ಆ ಭಾಗ ಓದುತ್ತಾ ಶಾಸ್ತ್ರಿಗಳು ಕಣ್ಮುಚ್ಚಿ 'ಬುದ್ಧ ಆಸ್ತಿಕನೋ ನಾಸ್ತಿಕನೋ ನನಗೆ ಬೇಕಿಲ್ಲ. ಈ ನಿದರ್ಶನ ಸಾಕು. ಭೂತಾನುಕಂಪದಿಂದ ಕೂಡಿದ ವಿಶ್ವಮಾನವತ್ವವೇ ಅವನು ಭಗವಂತನೆನ್ನುವುದಕ್ಕೆ ಸಾಕ್ಷಿ' ಎಂದರು."

ಭಾವನಾಲೋಕಕ್ಕೆ ಹೋದ ಇಬ್ಬರೂ ಮೈಮರೆತು ಕುಳಿತರು. ಪಾರ್ವತಮ್ಮನವರು ಬಂದು,

"ಶಂಕರಾ, ನೀನೂ ನಿನ್ನ ಸ್ನೇಹಿತರೂ ಸ್ನಾನಮಾಡಿಯಪ್ಪ, ಬಿಸಿಯಾಗಿ ಊಟಮಾಡುವಿರಂತೆ" ಎಂದರು.

"ಅಣ್ಣನೂ ಬರಲಮ್ಮ. ಜತೆಯಲ್ಲಿ ಕುಳಿತು ಊಟ ಮಾಡುತ್ತೇವೆ."

"ಅವನು ಎಷ್ಟು ಹೊತ್ತಿಗೆ ಬರುತ್ತಾನೋ ಏನೋ?"

"ಎಷ್ಟು ಹೊತ್ತಿಗಾದರೂ ಬರಲಿ—ನಮಗೆ ಹಸಿವೇನೂ ಆಗಿಲ್ಲ. ಸ್ನಾನಮಾಡುತ್ತೇವೆ—ಆಮೇಲೆ ಒಂದೊಂದು ಕಪ್ ಬಿಸಿ ಕಾಫಿ ಕೊಡು."

ಪಾರ್ವತಮ್ಮನವರು ನಗುತ್ತಾ

"ಮೈಸೂರಿಗೆ ಹೋದ ಮೇಲೆ ಕಾಫಿ ಕುಡಿಯುವುದು ತುಂಬ ಅಭ್ಯಾಸಮಾಡಿಕೊಂಡು ಬಿಟ್ಟೆ ಶಂಕರ" ಎಂದರು.

"ಹೌದಮ್ಮ, ಸಹವಾಸದೋಷ. ಶ್ರೀಧರನಿಗೆ ಕಾಫಿಯೊಂದಿದ್ದರೆ ಇನ್ನೇನೂ ಬೇಡ."

"ತಾಯಿಯವರಿಗೆ ನನ್ನ ವಿಷಯದಲ್ಲಿ ಕೆಟ್ಟ ಅಭಿಪ್ರಾಯ ಬರುವಂತೆ ಮಾಡುತ್ತಿದ್ದೀಯಲ್ಲ ಶಂಕರ"

ಎಂದು ಶ್ರೀಧರ ಸರಳವಾಗಿ ನುಡಿದ.

"ಅಮ್ಮನಿಗೆ ಸುಳ್ಳು ಹೇಳಲೇನಯ್ಯಾ?"

"ಶಂಕರನ ಮಾತು ಲೆಕ್ಕಕ್ಕಿಟ್ಟುಕೊಳ್ಳಬೇಡೀಪ್ಪ—ಅದೊಂದು ಶುದ್ಧ ಮಗು."

"ಇಲ್ಲ ತಾಯಿ, ತಮಾಷೆಗೆಂದೆ. ಜೀವನ ತೀರ ನೀರಸವಾಗಬಾರದೆಂದು ನಾನೂ ಶಂಕರ ಆಗಾಗ್ಗೆ ಸ್ವಲ್ಪ ವ್ಯಾಜ್ಯ ಕಾಯುತ್ತೇವೆ." ಎಂದ.

ಪಾರ್ವತಮ್ಮನವರು ನಸುನಕ್ಕರು. ಶ್ರೀಧರ ಗಂಭೀರ ಮುದ್ರೆ ತಾಳಿ,

"ತಾಯಿ, ನಿಮ್ಮಲ್ಲಿ ಒಂದು ಪ್ರಾರ್ಥನೆ ಮಾಡಿಕೊಳ್ಳಬೇಕಾಗಿದೆ."

"ಹೇಳಿಯಪ್ಪ."

"ದಯವಿಟ್ಟು ನನ್ನನ್ನು ಬಹುವಚನದಲ್ಲಿ ಕರೆಯಬೇಡಿ. ಶಂಕರನ ತಾಯಿ ನನಗೂ ತಾಯಿಯೇ—ನನ್ನ ತಾಯಿ ನನ್ನ ಬಹುವಚನದಲ್ಲಿ ಕರೆಯುವುದಿಲ್ಲ."

"ಹಾಗೇ ಆಗಲಪ್ಪಾ. ಎಷ್ಟು ಮಕ್ಕಳಿದ್ದರೆ ತಾನೆ ಹೆಣ್ಣು ಜೀವ ಬೇಡವೆನ್ನುತ್ತದೆ—ಏಳಿ ಸ್ನಾನ ಮಾಡಿ."

ಎಂದು ಒಳಕ್ಕೆ ಹೋದರು.

ಶ್ರೀಧರನ ಕಣ್ಣು ತೇವಗೊಂಡಿತು.

ಇಬ್ಬರೂ ಸ್ನಾನ ಮುಗಿಸಿಕೊಂಡು ಬರುವ ವೇಳೆಗೆ ಪಾರ್ವತಮ್ಮನವರು ಬಿಸಿ ಕಾಫಿ ತಂದು ಕೊಟ್ಟರು.

ಅಡಿಗೆಯ ಮನೆಯಲ್ಲಿ ಎಲೆ ಹಾಕಿ ಬಡಿಸುವಷ್ಟರಲ್ಲಿ ಸುಬ್ರಹ್ಮಣ್ಯನೂ ಮನೆಗೆ ಬಂದ. ಶಂಕರನನ್ನು ನೋಡಿ ಹರ್ಷದಿಂದ,

"ಎಷ್ಟು ಹೊತ್ತಾಯಿತು ನೀನು ಬಂದು ಶಂಕರ" ಎಂದು ಕೇಳಿದ.

"ಒಂದು ಗಂಟೆಯಾಯಿತಣ್ಣಾ. ನನ್ನ ಸ್ನೇಹಿತ ಶ್ರೀಧರನೂ ಬಂದಿದ್ದಾನೆ."

ಸುಬ್ರಹ್ಮಣ್ಯನೇ ಹೋಗಿ ಶ್ರೀಧರನ ಪರಿಚಯ ಮಾಡಿಕೊಂಡು,

"ನೀವು ಬಂದದ್ದು ಬಹಳ ಸಂತೋಷ. ಇದೂ ನಿಮ್ಮ ಮನೆ ಎಂದು ತಿಳಿದುಕೊಳ್ಳಿ" ಎಂದು ಉಪಚರಿಸಿದ.

ವಿಜಯದಶಮಿ ಪಾಡ್ಯವೂ ಆಗಿತ್ತು. ಮನೆಯಲ್ಲಿ ಹಬ್ಬ. ಮಗನೂ ಮನೆಗೆ ಬಂದಿದ್ದ. ಪಾರ್ವತಮ್ಮನವರಿಗೆ ಎರಡು ಹಬ್ಬಗಳು ಕೂಡಿ ಬಂದಂತಾಗಿತ್ತು. ಶಾಸ್ತ್ರಕ್ಕೆ ತೊಪ್ಪೆ, ಪಾಯಸ ಅಡಿಗೆ ಮಾಡಬೇಕೆಂದಿದ್ದರೂ ಅನ್ನ ಕಲಸಿ, ಶಾವಿಗೆ ಖೀರು ಮಾಡಿ, ಉಪ್ಪೇರಿ ಕರಿದಿದ್ದರು. ಎಲ್ಲರಿಗೂ ಪುಷ್ಕಳ ಭೋಜನವಾಯಿತು. ಶ್ರೀಧರ ಕೈ ತೊಳೆಯುತ್ತಾ,

"ಹೀಗೇ ಇನ್ನು ನಾಲ್ಕು ದಿನ ಊಟಮಾಡಿಬಿಟ್ಟರೆ ಹಾಸ್ಟೆಲಿಗೆ ಕೈಮುಗಿದುಬಿಡೋದೇ" ಎಂದ.

"ಯಾಕೆ ?"

"ನಿಮ್ಮ ತಾಯಿ ಕೈಯಡಿಗೆ ಊಟಮಾಡಿದ ಮೇಲೆ ಹಾಸ್ಟೆಲ್ ಕೂಳು ಗಂಟಲಲ್ಲಿ ಇಳಿಯುತ್ತೇನಯ್ಯ."

"ಅದು ಅಮ್ಮನ ವೈಶಿಷ್ಟ್ಯ ಶ್ರೀಧರ್. ಅವಳು ಬರೀ ಅನ್ನ, ಸಾರು, ಕೊತ್ತುಂಬರಿ ಚಟ್ನಿ ಮಾಡಿಹಾಕಿದರೂ ಹಬ್ಬದೂಟ ಮಾಡಿದ ಹಾಗಾಗುತ್ತದೆ."

"ಬಡಿಸುವವರ ಮನಸ್ಸು ತುಂಬಿದ್ದರೆ ಊಟವೂ ತುಂಬತ್ತೆ."

ಮನೆಗೆ ಅತಿಥಿ ಬಂದುದರಿಂದ ಸುಬ್ರಹ್ಮಣ್ಯನ ದಿನಚರಿ ಬದಲಾಗ ಲಿಲ್ಲ. ಶಂಕರ ಬಂದಮೇಲೆ ಪಾರ್ವತಮ್ಮನವರಾಗಲಿ, ನಿಂಗವ್ವನಾಗಲಿ ಅಷ್ಟಾಗಿ ಸುಬ್ರಹ್ಮಣ್ಯನ ಚಲನವಲನಗಳನ್ನು ಗಮನಿಸುತ್ತಿರಲಿಲ್ಲ.

ಶಂಕರ ಒಂದು ಗಳಿಗೆಯೂ ರವೀಗೆ ಪುರಸತ್ತು ಕೊಡುತ್ತಿರಲಿಲ್ಲ. ಮಲಗಿದ್ದ ಮಗುವನ್ನೆತ್ತಿಕೊಂಡು

"ಏಳೋ ಸೋಮಾರಿ, ಎಷ್ಟು ಹೊತ್ತು ಮಲಗಿಕೊಂಡು ಗೊರಕೆ ಹೊಡೆಯುತ್ತೀ" ಎನ್ನುತ್ತಿದ್ದ.

"ಸಣ್ಣ ಮಕ್ಕಳು ನಿದ್ದೆಯಲ್ಲೇ ಬೆಳೆಯಬೇಕು ಶಂಕರ. ರವಿ ಯನ್ನೆಬ್ಬಿಸಬೇಡ"

ಎಂದು ಪಾರ್ವತಮ್ಮನವರು ಹೇಳಿದರೆ,

"ನಾಲ್ಕೈದು ದಿನಗಳ ಮೇಲೆ ನಾನು ಮೈಸೂರಿಗೆ ಹೊರಟು ಹೋಗುತ್ತೇನೆ. ಆಮೇಲೆ ರವಿ ಬೇಕಾದಷ್ಟು ನಿದ್ದೆಮಾಡಲಿ."

ಎನ್ನುತ್ತಿದ್ದ. ಶಂಕರ ಬಂದಕೂಡಲೆ ಕಣ್ಣುಬಿಟ್ಟು ನೋಡು ತ್ತಿದ್ದ ರವಿಯ ಆಟ ಕಂಡು ಗೌರಿಯೂ ಆಶ್ಚರ್ಯಪಡುತ್ತಿದ್ದಳು.

"ಏನು ತುಂಟನಮ್ಮಾ ಇವನು. ರಾತ್ರಿಯೆಲ್ಲಾ ಗೋಳು ಹುಯಿದುಕೊಳ್ಳುತ್ತಾನೆ. ಶಂಕರ ಬಂದರೆ ತೆಪ್ಪಗಾಗುತ್ತಾನಲ್ಲಾ !—ಎಲ್ಲರಿಗಿಂತ ಇವನಿಗೆ ಚಿಕ್ಕಪ್ಪನೇ ಹೆಚ್ಚಾಯಿತಲ್ಲ!"

"ಹೌದು ಅತ್ತಿಗೆ. ರವಿ ಮುಂದೆ ನನ್ನ ಶಿಷ್ಯನಾಗುವವನು. ಈಗಲೇ ಗುರುವನ್ನು ಆಶ್ರಯಮಾಡುತ್ತಿದ್ದಾನೆ."

"ನಿನ್ನ ರವಿಯನ್ನು ನೀನೇ ಕರೆದುಕೊಂಡು ಹೋಗಪ್ಪಾ."

ಶಂಕರ ಗಹಗಹಿಸಿ ನಗುತ್ತಾ ಗಟ್ಟಿಯಾಗಿ

"ಶ್ರೀಧರ್—ನಮ್ಮ ರೂಮಿನಲ್ಲಿ ಒಂದು ತೊಟ್ಟಿಲು ಕಟ್ಟುವುದಕ್ಕೆ ಜಾಗವಿದೆಯೇನಯ್ಯಾ?"

"ತೊಟ್ಟಿಲು! ಏಕೆ?"

"ರವಿ ನಮ್ಮ ರೂಮ್‌ಮೇಟಾಗುತ್ತಾನೆ. ಡೇ ಡ್ಯೂಟಿ ನಿನ್ನದು—ನೈಟ್ ಡ್ಯೂಟಿ ನನ್ನದು."

"ರವಿ ಹೆಸರಿನಲ್ಲಿ ತೊಟ್ಟಿಲು ಕಟ್ಟಿ ನೀನೇ ಅದರಲ್ಲಿ ಮಲಗಿಕೊಳ್ಳುವ ಹಾಗೆ ಕಾಣುತ್ತದೆ."

"ನನ್ನ ನೋಡಿಕೊಳ್ಳುವವರು ?"

"ವಾರ್ಡನ್."

ಶಂಕರ ಗಹಗಹಿಸಿ ನಕ್ಕು

"ಕೇಳಿದೆಯಾ ಅತ್ತಿಗೆ" ಎನ್ನುತ್ತಿದ್ದ.

ನಗುವಿನ ಹೊಳೆಗೆ ಇದ್ದಕ್ಕಿದ್ದಂತೆಯೇ ಯಾರೋ ಅಡ್ಡಗಟ್ಟಿ ಗಟ್ಟಿದಂತಾಗುತ್ತಿತ್ತು. ಗೌರಿಯ ಮುಖ ಕಾಂತಿಹೀನವಾಗುತ್ತಿತ್ತು. ಅವಳ ಮನಸ್ಸನ್ನು ಪೀಡಿಸುತ್ತಿದ್ದ ವೇದನೆಯಾವುದೆಂಬುದರ ಅರಿವು ಶಂಕರನಿಗಿತ್ತು.

ಆದರೆ ಆ ಬಗ್ಗೆ ಬಾಯಿಬಿಟ್ಟು ಮಾತಾಡಲೊಲ್ಲ.

ಗೌರಿಯೂ ಮಾತಾಡಲೊಲ್ಲಳು.

ಸುಬ್ರಹ್ಮಣ್ಯ ಊಟದ ಹೊತ್ತು ತಪ್ಪಿಸುತ್ತಿರಲಿಲ್ಲ. ಮನೆಗೆ ಬಂದವನು ಶ್ರೀಧರನನ್ನು ಮಾತನಾಡಿಸಿ, ಜತೆಯಲ್ಲಿ ಕುಳಿತು ಊಟ ಮಾಡಿ ಕಣ್ಮರೆಯಾಗುತ್ತಿದ್ದ. ಒಂದು ದಿನ ಅವನೇ ಶ್ರೀಧರ, ಶಂಕರ ಇಬ್ಬರನ್ನೂ ತೋಟಕ್ಕೆ ಕರೆದೊಯ್ದು ಎಳೆನೀರಿನ ಸಮಾರಾಧನೆಯನ್ನೂ ಮಾಡಿಸಿದ್ದ.

ಬೆಳಿಗ್ಗೆ ಎದ್ದವರೇ ಶಂಕರ, ಶ್ರೀಧರ ಸ್ನಾನ ಉಪಾಹಾರ ಮುಗಿಸಿಕೊಂಡು ಊರು ದಾಟಿ ಹೊರಗೆ ಹೋಗುತ್ತಿದ್ದರು. ಸುತ್ತಲಿದ್ದ ಬೆಟ್ಟ ಗುಡ್ಡಗಳಲ್ಲಿ ಸುತ್ತಾಡಿಕೊಂಡು, ನಿಸರ್ಗದ ಸ್ವಚ್ಛಂದ ಶ್ರೀಯನ್ನು ತುಂಬಿಕೊಳ್ಳುತ್ತಿದ್ದರು. ಒಮ್ಮೊಮ್ಮೆ ಮಾತಿಗೆ ಮಾತು ಬೆಳೆಯುತ್ತಿತ್ತು—ವಾದವೂ ಆರಂಭವಾಗುತ್ತಿತ್ತು. ಪುಸ್ತಕಗಳ ಮಾತು ಹೊರಡುತ್ತಿತ್ತು. ಕನಸುಗಳ ವಿನಿಮಯವಾಗುತ್ತಿತ್ತು.

"ಕಾಲೇಜ್ ಮುಗಿಸಿಕೊಂಡು ಇಬ್ಬರೂ ಶಾಲೆ ತೆಗೆಯೋಣ ಶ್ರೀಧರ್. ಮಾಂಟೆಸಾರಿ ಪದ್ಧತಿಯನ್ನೂ ಅಭ್ಯಾಸ ಮಾಡಿಕೊಂಡು ಬರೋಣ. ಆಶ್ರಮದ ಮಾದರಿಯಲ್ಲಿ ಶಾಲೆ ತೆರೆದು ಶಾಸ್ತ್ರಿಗಳನ್ನೂ ಬರಮಾಡಿಕೊಳ್ಳಬೇಕೆಂದು ಆಸೆಪಡುತ್ತಿದ್ದೇನೆ."

"ನಿನ್ನ ಕನಸು ನನಸಾಗಲಿ ಶಂಕರ್. ದೇವರು ನಿನಗೆ ಅನುಕೂಲ ಕೊಟ್ಟಿದ್ದಾನೆ. ಅದನ್ನು ಕಾರ್ಯೋನ್ಮುಖ ಮಾಡುವ ಚೇತನ, ಶ್ರದ್ಧೆ ಎರಡೂ ನಿನ್ನಲ್ಲಿವೆ. ಆದರೆ ನಾನು........ಅಷ್ಟು ಸ್ವತಂತ್ರನಾಗಿಲ್ಲ. ನನ್ನ ಶಿಕ್ಷಣ ಕರ್ತವ್ಯದ ಹೊರೆ ಹೊರುವ ಸಿದ್ಧತೆಯಾಗಿದೆ. ಹಣೆಗೆ ಡಿಗ್ರಿ ಹಚ್ಚಿಕೊಂಡ ಹೊರತೂ ನನಗೆ ಯಾರೂ ಕೆಲಸ ಕೊಡುವುದಿಲ್ಲ."

"ಭಗವಂತ ನನಗೆ ಸ್ವಲ್ಪ ಅನುಕೂಲ ಕೊಟ್ಟಿದ್ದಾನೆ. ಅದನ್ನು ನಾನೊಬ್ಬನೇ ಉಪಭೋಗಿಸಬೇಕೆಂದು ಭಾವಿಸುವುದು ತಪ್ಪಾಗುವುದಿಲ್ಲವೇ? ನನ್ನ ಸಂಪತ್ತು ನನ್ನದು ಹೇಗೋ ಹಾಗೇ ನನ್ನವರದೂ ಆಗಿದೆ."

"ನಿನ್ನ ಮಾತಿನಲ್ಲಿ ಸತ್ಯವಿಲ್ಲದಿಲ್ಲ. ಆದರೆ........ಈಗೇಕೆ ಆ ಮಾತು. ಕಾಲೇಜ್ ಮುಗಿಸಿದ ಮೇಲೆ ತಾನೆ ಮುಂದಿನ ಯೋಚನೆ."

ಎಂದು ಆ ವಿಷಯವನ್ನಲ್ಲೇ ಮೊಟಕು ಮಾಡಿದ.

ಹಲವು ಬಾರಿ—ಹಲವು ರೀತಿಯಲ್ಲಿ ತನ್ನ ನೆರವು ಸ್ವೀಕರಿಸಬೇಕೆಂದು ಶಂಕರ ಶ್ರೀಧರನಿಗೆ ಸೂಚಿಸುತ್ತಿದ್ದ. ಶ್ರೀಧರನದು ಒಂದೇ ಉತ್ತರ—'ಸ್ವಾವಲಂಬನವಿಲ್ಲದ ಬಾಳು ಸಾರ್ಥಕವಾಗುವುದಿಲ್ಲ ಶಂಕರ.'

ಶ್ರೀಧರನ ಕಠೋರ ಪ್ರತಿಜ್ಞೆ ಶಂಕರನ ಮನಸ್ಸಿಗೆ ತುಂಬ ದುಃಖವನ್ನುಂಟುಮಾಡುತ್ತಿತ್ತು. ಆದರೆ ಶ್ರೀಧರನ ಪ್ರತಿಜ್ಞೆಯನ್ನಿದಿರಿಸುವ ಧೈರ್ಯವಾಗಲೊಲ್ಲದು. ಬಡತನವನ್ನು ಸಿಂಹಾಸನದ ಮೇಲಿಟ್ಟು ಪೂಜಿಸುತ್ತಿದ್ದ ಗೆಳೆಯನ ವೈರಾಗ್ಯವೃತ್ತಿ ಶಂಕರನ ಹೃದಯದಲ್ಲಿ ಅಭಿಮಾನ, ಗೌರವವನ್ನು ಬಲವಾಗಿ ಮೂಡಿತ್ತು.

ರಜಾ ಮುಗಿಯುತ್ತ ಬಂದಿತ್ತು.

ಶ್ರೀಧರ, ಶಂಕರ ಊರಿಗೆ ಹೊರಟು ನಿಂತರು.

ರವಿಯನ್ನು ಬಿಟ್ಟು ಹೋಗಲು ಶಂಕರನಿಗೆ ತುಂಬ ಕಷ್ಟವಾಯಿತು. ಕಂಬನಿಗರೆಯುತ್ತ ನಿಂತ ಶಂಕರನನ್ನು ನೋಡಿ ಗೌರಿಯೇ

"ಇಷ್ಟು ದುಃಖ ಪಡುತ್ತಾರೇನೋ ಶಂಕರ. ನಿನ್ನ ರವಿ ಎಲ್ಲಿಯೂ ಓಡಿಹೋಗುವುದಿಲ್ಲ. ಮೈಸೂರಿಗೆ ಹೋಗಿ ಪರೀಕ್ಷೆ ಮುಗಿಸಿಕೊಂಡು ಬಾ" ಎಂದು ಸಮಾಧಾನ ಹೇಳಿದಳು.

ಸುಬ್ರಹ್ಮಣ್ಯ ಕರ್ತವ್ಯಲೋಪಮಾಡಲಿಲ್ಲ. ಬಸ್ಸಿನಲ್ಲಿ ತಾನೇ ಸ್ಥಳಗಳನ್ನು ಕಾಯ್ದಿರಿಸಿ, ಗೆಳೆಯರನ್ನು ಬೀಳ್ಕೊಟ್ಟ.

'ಮಗ, ಅಕ್ಕಿಯಂಗೆ ಬಂತು, ಅಕ್ಕಿಯಂಗೆ ಒಂಟೋಯ್ತು' ಎಂದು ನಿಂಗವ್ವ ನಿಟ್ಟುಸಿರುಬಿಟ್ಟಳು.

## ೨೧

ಸಣ್ಣಪ್ಪನವರ ರೈಸ್‌ಮಿಲ್ಲಿನ ಹಜಾರದಲ್ಲಿ ಪರಮಾನಂದಯ್ಯನ ಕಂಪೆನಿ ಜನ್ಮ ತಾಳಿತು. ಭೀಮಾಚಾರಿಯೇ ಚಿಗಳೀಗೆ ಹೋಗಿ ಅಲ್ಲಿದ್ದ ನಾಟಕದ ಸಾಮಾನುಗಳನ್ನು ಖರೀದಿ ಮಾಡಿ ತಂದಿದ್ದ. ಈ ವ್ಯವಹಾರದಲ್ಲಿ ಅನಾಯಾಸವಾಗಿ ಎಂಟು ನೂರು ರೂಪಾಯಿಗಳು ಅವನ ಜೇಬು ಸೇರಿತ್ತು.

ಪೇಂಟರ್ ನರಸಿಂಹಲು ಹಳೆಯ ಪರದೆಗಳನ್ನೂ ಸೈಡ್‌ವಿಂಗ್ಸ್ ಗಳನ್ನೂ ಹೊಸದು ಮಾಡುವುದಕ್ಕೆ ಬದ್ಧಕಂಕಣನಾಗಿ ಕುಳಿತಿದ್ದ.

ಪರಮಾನಂದಯ್ಯನೇ ಪ್ರ್ಯಾಕ್ಟೀಸ್ ಮ್ಯಾನೇಜರ್. ಭೀಮಾ ಚಾರಿಯೇ ಕಂಪೆನಿ ಮ್ಯಾನೇಜರ್. ದೀಪಾವಳಿ ಹಬ್ಬದ ವೇಳೆಗೆ ನಾಟಕ ಗಳನ್ನು ಸಿದ್ಧಮಾಡಿಕೊಂಡು ಮಂಡ್ಯದಲ್ಲಿ ಕ್ಯಾಂಪ್ ಹಾಕುವುದೆಂದು ನಿಶ್ಚಯವಾಗಿತ್ತು.

ಸುಬ್ರಹ್ಮಣ್ಯ ಹಗಲೂ ಸಂಜೆ ಪ್ರ್ಯಾಕ್ಟೀಸಿಗೆ ಬರುತ್ತಿದ್ದ. ಭೀಮಾಚಾರಿ, ಪರಮಾನಂದಯ್ಯ ಅವನ ಬಗ್ಗೆ ತೋರಿಸುತ್ತಿದ್ದ ವಿನೀತ ಭಾವ, ಗೌರವ ನೋಡಿ ಅವನೇ ಮಾಲಿಕನೇ ಆಗಿರಬೇಕೆಂದು ನಟರು ತರ್ಕಿಸಲು ತಡವಾಗಲಿಲ್ಲ. ಸುಬ್ರಹ್ಮಣ್ಯ ಮಂಗಳೆಯೊಂದಿಗೆ ವರ್ತಿಸು ತ್ತಿದ್ದ ರೀತಿ ಅನೇಕ ಊಹಾಪೋಹಗಳಿಗೆ ಅವಕಾಶಕೊಟ್ಟಿತ್ತು.

ಊರಿನಲ್ಲಿ ಎಲ್ಲಿ ನೋಡಿದರೂ ಇದೇ ಮಾತಾಯಿತು. ಕಂಪೆನಿ ಜನಗಳ ಸ್ವಚ್ಛಂದ ನಡವಳಿಕೆ ಊರಿನವರಿಗೆ ಜುಗುಪ್ಸೆಯನ್ನುಂಟು ಮಾಡಿತ್ತು. ಈ ಜನಗಳಿಗೆ ಭೀಮಾಚಾರಿಯ ವಾಕ್ಸಹಾಯ, ಸುಬ್ರ ಹ್ಮಣ್ಯನ ಧನಸಹಾಯವಿದೆಯೆಂದು ತಿಳಿದ ಮೇಲಂತೂ ಊರಿನ ಜನ ಗಳ ಆಗ್ರಹಕ್ಕೆ ಮಿತಿಯಿಲ್ಲದಂತಾಯಿತು. ನಂಜುಂಡಯ್ಯನವರ ಕಾಲದಲ್ಲಿ ಅವರ ಮನೆಯ ಮೇಲೆ ಊರಿನವರಿಗಿದ್ದ ಕಿಚ್ಚು ದಳ್ಳುರಿ ಯಾಗಿ ಈಗ ಸ್ಫೋಟನವಾಗಲು ಸಮಯ ಕಾಯುತ್ತಿತ್ತು.

ಸಂಪತ್ಕೃಷ್ಣ ಜೋಯಿಸರಲ್ಲಿ ಊರಿನ ಹಿರಿಯರು ನಿಯೋಗ ಹೋಗಿ ತಮ್ಮ ಸಂಕಟವನ್ನರುಹಿಕೊಂಡರು.

"ನೀವು ಹೇಳುವುದು ಸರಿಯೇ. ಆದರೆ ನಾನೇನು ಮಾಡುವುದಕ್ಕಾಗುತ್ತದೆ. ಭೀಮಾಚಾರೀನ, ಸುಬ್ರಹ್ಮಣ್ಯನ ಎದುರು ಹಾಕಿಕೊಂಡು ಈ ಊರಿನಲ್ಲಿ ನಾವು ಬಾಳಲು ಸಾಧ್ಯವೇ? ಆಚಾರಿ ಹೇಳಿ ಕೇಳಿ ಪುಂಡ. ಯಾವುದಕ್ಕೂ ಅವನು ಹೇಸುವವನಲ್ಲವೆಂದು ನಿಮಗೆ ತಿಳಿದೇ ಇದೆ. ಸುಬ್ರಹ್ಮಣ್ಯ ಪುಂಡನಲ್ಲ—ಆಚಾರಿ ಸಹವಾಸಮಾಡಿ ಅವನೂ ದಾರಿಬಿಡುತ್ತಿದ್ದಾನೆ. ನಾವು ಪ್ರತಿಭಟನೆ ತೋರಿದರೆ ಸುಬ್ರಹ್ಮಣ್ಯನೂ ಪುಂಡನಾಗುವ ಸಂಭವವಿದೆ. ಸಂಭಾವಿತನನ್ನು ಪುಂಡನನ್ನಾಗಿ ಮಾಡಿದ ಅಪಖ್ಯಾತಿ ನಮ್ಮ ತಲೆಗೇ ಕಟ್ಟುತ್ತದೆ."

"ಊರಿನಲ್ಲಿ ಈ ಹಾವಳಿ ತಡೆಯೋದು ಹೇಗೆ ಜೋಯಿಸರೇ? ಈ ಹಾಳು ನಾಟಕದವರು ಊರನ್ನು ಹೊಲಗೇರಿ ಮಾಡುತ್ತಿದ್ದಾರೆ. ನಾಳೆ ನಮ್ಮ ಹೆಂಗಸರು ಯಾರನ್ನು ಇವರು ಹಾರಿಸಿಕೊಂಡು ಹೋಗುತ್ತಾರೋ ಹೇಳಬಲ್ಲವರು ಯಾರು?"

ಎಂದು ಅಂಗಡಿ ದಾಸಪ್ಪನ ಕೋರಿಕೆ.

"ನಮ್ಮ ಹೆಂಗಸರ ಶೀಲ ಅಷ್ಟು ಶಿಥಿಲವಾದುದು ಎಂದು ನಾನು ತಿಳಿದಿಲ್ಲ ದಾಸಪ್ಪ."

"ನೀವು ಕೃತಯುಗದವರು ಸ್ವಾಮಿ. ಕಲಿಕಾಲದ ಮಹಿಮೆ ನಿಮಗಿನ್ನೂ ಅರ್ಥವಾಗಿಲ್ಲ."

"ಇದಕ್ಕೆ ಏನು ಮಾಡಬೇಕೆಂದು ನಿನ್ನ ಅಭಿಪ್ರಾಯ."

"ನನ್ನೇ ಕೇಳಿದರೆ! ಊರಿನ ಹಿರಿಯರು ಸೇರಿದ್ದೀರಿ–ನೀವು ನಿಶ್ಚಯಿಸಿ."

"ಪೋಲೀಸ್ ಕಂಪ್ಲೇಂಟು ಕೊಡೋಣ."

ಎಂದು ತಿಪ್ಪಾಶಾಸ್ತ್ರಿ ಸೂಚಿಸಿದ.

"ಪೋಲೀಸಿನವರೆಲ್ಲಾ ಆಚಾರಿ ಶಿಷ್ಯರು ಎನ್ನುವುದು ಮರೆತೆಯಾ?"

ಎಂದು ದಾಸಪ್ಪ ಎಚ್ಚರಿಸಿದ.

"ಒಂದು ಕೆಲಸ ಮಾಡಬಹುದು ಜೋಯಿಸರೇ—ಪಾರ್ವತಮ್ಮನವರು ಸಂಪ್ರದಾಯಸ್ಥರು. ಧರ್ಮ, ಕರ್ಮದಲ್ಲಿ ಅವರಿಗೆ ತುಂಬ ಭಕ್ತಿಯಿದೆ. ನೀವು ಅವರ ಕಿವಿಗೆ ಒಂದು ಮಾತು ಹಾಕಿ ಸುಬ್ರಹ್ಮಣ್ಯ

ನಿಗೆ ಬುದ್ಧಿ ಹೇಳಬೇಕೆಂದು ತಿಳಿಸಿದರೆ ಪರಿಸ್ಥಿತಿ ಹತೋಟಿಗೆ ಬರ ಬಹುದು."

ಎಂದು ಸ್ಕೂಲ್ ಮೇಷ್ಟ್ರು ಶಾಮಯ್ಯ ಸಲಹೆಯಿತ್ತ. ಅವನ ಸಲಹೆಯನ್ನು ದಾಸಪ್ಪ, ತಿಪ್ಪಾಶಾಸ್ತ್ರಿ ಮುಕ್ತಕಂಠದಿಂದ ಹೊಗಳಿ, ಜೋಯಿಸರು ಊರಿನ ಹಿತಾರ್ಥವಾಗಿ ಪಾರ್ವತಮ್ಮನವರನ್ನು ಕಾಣ ಬೇಕೆಂದು ಒತ್ತಾಯ ಮಾಡಿದರು.

ಜೋಯಿಸರಿಗೆ ಉಭಯ ಸಂಕಟಕ್ಕಿಟ್ಟುಕೊಂಡಿತು. ಶಾಮ ಯ್ಯನ ಸೂಚನೆಯಂತೆ ಪಾರ್ವತಮ್ಮನವರ ಬಳಿ ದೂರು ಒಯ್ದರೆ, ಸುಬ್ರಹ್ಮಣ್ಯನ ವಿಶ್ವಾಸಕ್ಕೆ ತಿಲೋದಕ ಬಿಟ್ಟಂತೆಯೇ!—ಸೂಚನೆ ನಿರಾ ಕರಿಸಿದರೆ ಈ ಗುಂಪಿನ ವಿರೋಧ ಕಟ್ಟಿಕೊಂಡಂತೆ! ಏನು ಮಾಡುವು ದೆಂದು ಯೋಚಿಸುತ್ತಾ,

"ಈ ವಿಷಯದಲ್ಲಿ ಇನ್ನೂ ಸ್ವಲ್ಪ ಯೋಚನೆ ಮಾಡುವುದು ಒಳ್ಳೆ ಯದು. ಅಮಲ್ದಾರರು ನಮ್ಮವರಾಗಿದ್ದಾರೆ—ಪಾಪಭೀರುಗಳು— ತಾಲ್ಲೂಕಿನ ಧಣಿ. ಅವರನ್ನು ಒಂದು ಮಾತು ಕೇಳಿ ಈ ವಿಷಯ ನಿರ್ಧರಿಸುವುದು ಒಳ್ಳೆಯದು. ಈ ವಿಷಯ ಸಂಪೂರ್ಣವಾಗಿ ನೀವು ನನಗೆ ಬಿಡುವುದಾದರೆ ನಾಳೆಯೇ ಅಮಲ್ದಾರರನ್ನು ಕಾಣುತ್ತೇನೆ."

ಎಲ್ಲರಿಗೂ ಜೋಯಿಸರ ಸೂಚನೆ ಸಮಂಜಸವಾಗಿ ಕಂಡು ಬಂದಿತು. ಸಮಸ್ಯೆಯನ್ನು ಜೋಯಿಸರಿಗೆ ಒಪ್ಪಿಸಿ ಉಳಿದವರು ತಟಸ್ಥ ರಾದರು.

ಜೋಯಿಸರು 'ಇವತ್ತು—ನಾಳೆ' ಎಂದುಕೊಂಡು ಕಾಲ ತಳ್ಳುತ್ತ ಬಂದರು. ಅಮಲ್ದಾರರ ಕಿವಿಗೆ ಸುದ್ದಿ ಹಾಕಿದ ವಿಷಯ ಭೀಮಾಚಾ ರಿಗೆ ತಿಳಿದರೆ ತಮ್ಮ ಪಾಡು ಏನಾಗಬಹುದೆಂಬ ಭೀತಿ ಜೋಯಿಸ ರನ್ನು ಪ್ರಬಲವಾಗಿ ಕಾಡುತ್ತಿತ್ತು.

ಊರಿನವರ ಸಂಕಟ ದೇವರೇ ಪರಿಹಾರ ಮಾಡಿದ. ದೀಪಾವಳಿ ಹಬ್ಬದ ಮುನ್ನವೇ ಕಂಪೆನಿ ಮಂಡ್ಯಕ್ಕೆ ಪ್ರಯಾಣ ಬೆಳಸಿತು. ಸುಬ್ರ ಹ್ಮಣ್ಯನೂ ಕಂಪೆನಿಯ ಜತೆಯಲ್ಲಿ ಪ್ರಯಾಣ ಮಾಡಿದ.

ಸುಬ್ರಹ್ಮಣ್ಯನ ಚಲನವಲನ ಊರಿನಲ್ಲಿ ನಗುಪಾಟಲಾಗುತ್ತ

ಬಂತು. ತಾವರೆಕೆರೆಗೆ ಬಂದರೂ 'ತುರ್ತು' ಕೆಲಸ ಅರ್ಧ ದಿನದಲ್ಲಿ ಮುಗಿಸಿಕೊಂಡು ಮಂಡ್ಯಕ್ಕೆ ಹೊರಟು ಹೋಗುತ್ತಿದ್ದ. ಪಾರ್ವತಮ್ಮ ನವರ ಕಿವಿಯ ಮೇಲೆ ಅಸ್ಪಷ್ಟವಾಗಿ ಬೀಳುತ್ತಿದ್ದ ಮಾತುಗಳು ಸುಸ್ಪಷ್ಟವಾಗುತ್ತ ಬಂದುವು.

ಮಗನ ಹತ್ತಿರ ಈ ವಿಷಯ ಪ್ರಸ್ತಾಪಿಸಬೇಕೆಂದು ಪಾರ್ವತಮ್ಮ ನವರು ಹಲವು ಸಲ ಮನಸ್ಸು ಗಟ್ಟಿಮಾಡಿಕೊಳ್ಳುತ್ತಿದ್ದರು. ಆದರೆ ಸುಬ್ರಹ್ಮಣ್ಯನೊಂದಿಗೆ ಸಾವಕಾಶವಾಗಿ ಮಾತನಾಡುವ ಅವಕಾಶವೇ ಅವರಿಗೆ ದೊರೆಯುತ್ತಿರಲಿಲ್ಲ.

ಮನಸ್ಸಿನಲ್ಲಿ ಕೊರಗು ಹತ್ತಿತು. ಗೌರಿಯನ್ನು ನೋಡಿದಾಗ ಲೆಲ್ಲ—ಅವಳ ಜೊಗಸೆಗಂಗಳ ಮೇಲೆ ನಿಂತಿರುತ್ತಿದ್ದ ತುಂತುರು ಹನಿ ಕಂಡಾಗಲೆಲ್ಲ ಅವರ ದುಃಖ ಉಮ್ಮಳಿಸುತ್ತಿತ್ತು. ರವಿಯನ್ನಪ್ಪಿಕೊಂಡು ತಮ್ಮ ಮೂಕಶೋಕವನ್ನು ವ್ಯಕ್ತಪಡಿಸುತ್ತಾ ನಿಟ್ಟುಸಿರು ಬಿಡುವರು. ಅಜ್ಜಿಯ ಬಿಸಿಯುಸಿರಿಗೆ ಬೆದರಿ ಮಗು ಅಳುವುದಕ್ಕಾರಂಭಿಸುತ್ತಿತ್ತು.

ಅಮ್ಮಾವರ ದುಃಖ ನೋಡಲು ನಿಂಗವ್ವನಿಗೆ ಸಾಧ್ಯವಾಗುತ್ತಿರ ಲಿಲ್ಲ. ಅವರೆದುರಿಗೆ ಕೂಡುವುದನ್ನೇ ಕಡಿಮೆ ಮಾಡತೊಡಗಿದಳು.

ಪಾರ್ವತಮ್ಮನವರು ತುಳಸೀ ಕಟ್ಟೆ ಸೇರುವುದನ್ನೇ ಚಿಂತೆಯ ದೈತ್ಯಸಂತಾನ ಕಾಯುತ್ತಿದ್ದುವು. ಅವರು ಕೂಡುವುದೇ ತಡ ಅವು ಗುಂಪುಗಟ್ಟಿಕೊಂಡು ಅವರಿಗೆ ಮುತ್ತಿಗೆ ಹಾಕುತ್ತಿದ್ದುವು.

ನಿಂಗವ್ವನೂ ತಮ್ಮಿಂದ ದೂರ ಸರಿಯುತ್ತಿದ್ದುದನ್ನು ಪಾರ್ವತಮ್ಮ ನವರು ಗಮನಿಸಿದ್ದರು.

ಒಂದು ದಿನ ತಡೆಯಲಾಗದೆ,

"ನೀನೂ ನನ್ನ ಕೈ ಬಿಡುತ್ತಿದ್ದೀಯಾ ನಿಂಗೀ" ಎಂದರು.

"ಯಾಕ್ರವ್ವಾ—ಅಂಗಂತೀರಿ?"

"ನಾಲ್ಕು ಸಮಾಧಾನದ ಮಾತಾಡುತ್ತಿದ್ದೆ. ಈಗ ಅದನ್ನೂ ಬಿಟ್ಟುಬಿಟ್ಟೆ. ನನ್ನ ಗೋಳು ತಪ್ಪಿದ್ದೇ ಅಲ್ಲ—ಎಲ್ಲರಿಗೂ ಬೇಸರ ವಾಗಿರುವಂತೆ ನಿನಗೂ ಬೇಸರವಾಗಿದೆ—ನನ್ನ ಬಾಳೆಲ್ಲಾ ಗೋಳೇ ಆಗಿ ಹೋಯಿತಲ್ಲೇ!"

"ಸುಮ್ಕಿರ್ರವ್ವಾ ಯಾಕಂಗಂತೀರಿ! ದೊರೆಮಕ್ಕಳಂತ ಇಬ್ಬರು ಗಂಡು ಮಕ್ಕಳವ್ರೆ—ದೇವರಂಥ ಮೊಮ್ಮಗ ಅವ್ನೆ—ನಿಮಗೇನ್ರವ್ವಾ ದೇವರು ಕಮ್ಮಿ ಮಾಡಿರೋದು."

"ಎಲ್ಲಾ ಕೊಟ್ಟಿದ್ದಾನೆ ನಿಂಗಿ—ಮನಶ್ಶಾಂತಿ ಕೊಟ್ಟಿಲ್ಲ. ಸುಬ್ಬೂ ಸಂಸಾರ ನೇರವಾಯ್ತು ಅಂತಿದ್ದೆ. ಅದು ಹೀಗಾಗಿ ಕುಳಿತು ಕೊಂಡಿತು. ಬಾಣಂತಿ ಹುಡುಗಿ ಕಣ್ಣೀರಿನಲ್ಲಿ ಕೈತೊಳೀತಿದೆ. ಹಸೀ ಮೈ. ಅದಕ್ಕೇನಾದರೂ ಆದರೆ ಏನು ಗತಿ?"

"ಸುಬ್ಬಪ್ಪ ಕೆಟ್ಟೋನಲ್ರವ್ವಾ."

"ಒಳ್ಳೆಯವರು ಯಾರು, ಕೆಟ್ಟವರು ಯಾರು! ನನಗೊಂದೂ ತಿಳಿಯಲ್ಲ ನಿಂಗಿ."

"ಸುಬ್ಬಪ್ಪನ್ನ ಅತ್ರ ಕರೆದು ಕೂರಿಸ್ಕೊಂಡು ಒಂದು ಮಾತು ಏಳಾಕ್ಕಾಗಾಕಿಲ್ವಾ? ಅವ್ವಾವರ ಮಾತು ತೆಗೆದು ಆಕೋ ಅಷ್ಟು ಅವನು ದಾರಿ ಬಿಟ್ಟಿಲ್ರವ್ವಾ!"

"ಎಲ್ಲಿ ಗೌರೀಗೂ ಅವನಿಗೂ ಮನಸ್ಸು ಕೆಟ್ಟು ಹೋಗುತ್ತದೆಯೋ ಎಂದು ಹೆದರುತ್ತೀನಿ."

"ನೀವು ಊ ಅನ್ರವ್ವಾ–ಆ ಆಚಾರೀನ ತೇರಿನ ಬೀದೀಲಿ ನಿಲ್ಲಿಸ್ಕೊಂಡು ಬರಲಿನಲ್ಲಿ ಬಡಿದು ಬಿಡ್ತೀನಿ."

"ಅವನನ್ನೇಕೆ ಬಯ್ಯಬೇಕು—ನಮ್ಮ ಗ್ರಹಚಾರ ಚೆನ್ನಾಗಿಲ್ಲ."

"ಸುಮ್ಕಿರ್ರವ್ವಾ–ಇದ್ಕೆಲ್ಲಾ ಅವನೇ ಮೂಲ. ಈ ಊರ್ಗೇ ಮಾರಿಯಾಗವ್ನೆ."

"ನಮ್ಮ ವಿವೇಕ ನಮ್ಮ ಕೈ ಬಿಟ್ಟರೆ ಯಾರೇನು ಮಾಡುವುದಕ್ಕಾಗುತ್ತದೆ ನಿಂಗಿ."

"ನಿಮ್ಮ ಲೆಕ್ಕಾನೇ ನಂಗೆ ತಿಳಿಯಾಕಿಲ್ಲ. ಓಗ್ಲಿ ಬಿಡ್ರವ್ವಾ"

ಎಂದು ಬೇಸರದಿಂದ ನಿಂಗವ್ವ ಎದ್ದು ಹೋಗುತ್ತಿದ್ದಳು. ಪಾರ್ವತಮ್ಮನವರು ತಾಯಿ ತುಳಸೀಗೆ ಕಣ್ಣೀರಿನ ಅಭಿಷೇಕ ಮಾಡುತ್ತ ಕೂಡುತ್ತಿದ್ದರು.

# ೨೨

ಶಂಕರ ಅಣ್ಣನ ಹೆಸರಿಗೆ ನಾಲ್ಕಾರು ಕಾಗದಗಳು ಬರೆದರೂ ಒಂದಕ್ಕೂ ಮಾರುತ್ತರ ಬರುತ್ತಿರಲಿಲ್ಲ. ಅವನು ತುಂಬ ಆಕ್ಷೇಪಿಸಿ ಬರೆದರೆ ಸುಬ್ಬಣ್ಣನಿಂದ ಒಂದು ಪೋಸ್ಟ್ ಕಾರ್ಡು ಬರುತ್ತಿತ್ತು—ಎರಡೇ ಪಂಕ್ತಿಗಳು—ನಾನೂ ಕ್ಷೇಮ, ನೀನೂ ಕ್ಷೇಮ.

ಊರಿಗೆ ಹೋಗಿ ಪರಿಸ್ಥಿತಿಯನ್ನರಿತು ಬರಬೇಕೆಂದು ಶಂಕರನ ಮನಸ್ಸು ಧಾವಿಸುತ್ತಿದ್ದರೂ ಸ್ವಲ್ಪವೂ ವ್ಯವಧಾನ ದೊರೆಯುತ್ತಿರಲಿಲ್ಲ.

ಪಾರ್ವತಮ್ಮನವರು ಆಗಾಗ್ಗೆ ಗೌರಿಯ ಕೈಯಲ್ಲಿ ಕಾಗದ ಬರೆಸುತ್ತಿದ್ದರು. ಅವರು ತಮ್ಮ ಅಂತರ್ವೇದನೆಯನ್ನು ಮುಚ್ಚಿಡಲು ಪ್ರಯತ್ನಿಸಿದಷ್ಟೂ ಅದು ತಲೆಯೆತ್ತಿ ನಿಲ್ಲುತ್ತಿತ್ತು.

ಶಂಕರನ ಚಿತ್ತವಿಹ್ವಲತೆ ಕಂಡು ಶ್ರೀಧರನಿಗೆ ಪರಿತಾಪವಾಗುತ್ತಿತ್ತು.

"ಮನೆಯಲ್ಲಿ ಎಲ್ಲರೂ ಕ್ಷೇಮವಷ್ಟೆ?"

"ಎಲ್ಲರೂ ಕ್ಷೇಮ."

"ಪರೀಕ್ಷೆ ಹತ್ತಿರವಾಗುತ್ತಿದೆ—ನೀನು ಈಗ ತಲೆ ಕೆಡಿಸಿಕೊಂಡರೆ............"

"ತಲೆ ಕೆಡಿಸಿಕೊಳ್ಳಬಾರದೆಂದೇ ಪ್ರಯತ್ನಿಸುತ್ತಿದ್ದೇನೆ."

"ರವಿ ಚೆನ್ನಾಗಿದ್ದಾನೆಯೇ?"

"ಚೆನ್ನಾಗಿ ಆಡಿಕೊಂಡಿದ್ದಾನಂತೆ!"

"ಊರಿಗೆ ಹೋಗಿ ಬರುವೆಯಾ?"

"ಇಲ್ಲ—ಈಗ ಹೋಗುವುದಿಲ್ಲ."

"ಸದ್ಯಕ್ಕೆ ಊರಿನ ವಿಷಯ ಮರೆತು ಪರೀಕ್ಷೆಯೊಂದನ್ನೇ ಯೋಚನೆ ಮಾಡು."

'ಊರಿನ ವಿಷಯ ಮರೆಯುವುದೆಂತು' ಎಂದು ಶಂಕರ ವಿಚಾರ ಮಾಡುತ್ತಿದ್ದ.

ಊರಿನಲ್ಲಿ ಪರಿಸ್ಥಿತಿ ಕ್ರಮೇಣ ವಿಕೋಪಕ್ಕೆ ಹೋಗುತ್ತಿತ್ತು. ಊರಿನ ಮಹಿಳೆಯರಲ್ಲಿ ಯಾರಾದರೂ ಒಬ್ಬಿಬ್ಬರು ಪ್ರತಿನಿತ್ಯ ಗೌರಿಯನ್ನು ನೋಡುವ ನೆಪ ಮಾಡಿಕೊಂಡು ಬಂದು ಮನೆಯ ಸ್ಥಿತಿಯನ್ನರಿತು ಹೋಗಿ ವರದಿ ಮಾಡುತ್ತಿದ್ದರು.

'ಸುಬ್ರಹ್ಮಣ್ಯ ಊರಿಗೇ ಬಂದಿಲ್ಲವಂತೆ !

'ಮಂಡ್ಯದಲ್ಲಿ ಸಾಯ್ತಾ ಇದ್ದಾನಂತೆ !

'ಇಲ್ರೀ—ಕಂಪೆನಿ ಮಂಡ್ಯ ಬಿಟ್ಟು ಹಿರೋಡೆಗೆ ಹೋಯಿತಂತೆ !

'ಗೌರಿ ನವೆದು ಹೋಗುತ್ತಿದ್ದಾಳೆ.

'ಸುಬ್ರಹ್ಮಣ್ಯ ಒಂದೆರಡು ಜಮೀನುಗಳನ್ನೂ ಮಂಗಳೆಯ ಹೆಸರಿಗೆ ಬರೆದಿದ್ದಾನಂತೆ !

'ಶಂಕರನ ಕೈಗೆ, ರವಿಯ ಕೈಗೆ ಚಿಕ್ಕನಾಯಕನಹಳ್ಳಿ ಬೆಳ್ಳಿ ಬಟ್ಟಲೇ ಖಂಡಿತ !

'ಹೋಗಲಿ ಬಿಡಿ—ಅನ್ಯಾಯದಲ್ಲಿ ಸಂಪಾದಿಸಿದ ಹಣ ಅನ್ಯಾಯದಲ್ಲಿಯೇ ಹಾಳಾಗಿ ಹೋಗುತ್ತಾ ಇದೆ.'

ಎಂದವರು ಮಾತನಾಡಿಕೊಳ್ಳುತ್ತಿದ್ದುದಲ್ಲದೆ ತಮ್ಮ ಮಾತುಗಳನ್ನು ಪಾರ್ವತಮ್ಮ, ಗೌರಿ ಕಿವಿಗೆ ಮುಟ್ಟಿಸಲೂ ಪ್ರಯತ್ನಿಸುತ್ತಿದ್ದರು.

ಒಂದು ದಿನ ಗೌರಿಯನ್ನು ನೋಡಲು ಬಂದ ಕಮಲಮ್ಮ, ನರ್ಮದಾ ಬಹಳ ಹೊತ್ತು ಕುಳಿತರು. ರವಿಯನ್ನು ಆಡಿಸಿದ್ದಾಯಿತು. ಅಲ್ಲೇ ಕಾಫಿ ಉಪಾಹಾರವಾಯಿತು. ತಲೆ ಬಾಚಿಕೊಂಡು ಜಡೆ ಹೆಣೆದುಕೊಂಡದ್ದಾಯಿತು. ಗೌರಿ ತಾತ್ಕಾಲಿಕವಾಗಿ ತನ್ನ ದುಃಖ ಮರೆತಿದ್ದಾಗ ಕಮಲಮ್ಮ

"ನಿನ್ನ ಯಜಮಾನರು ಊರಲ್ಲಿಲ್ಲವೇ ಗೌರಿ ?" ಎಂದು ಕೇಳಿದಳು.

ಗೌರಿಯ ಎದೆ ಧಸಕ್ಕೆಂದಿತು. ಧೈರ್ಯ ತಂದುಕೊಂಡು,

"ಶಂಕರನನ್ನು ನೋಡಿಕೊಂಡು ಬರುವುದಕ್ಕೆ ಮೈಸೂರಿಗೆ ಹೋಗಿದ್ದಾರೆ."

"ನಿನ್ನೆ ನಮ್ಮ ಮಾವನವರು ನಿನ್ನ ಯಜಮಾನರನ್ನು ಹಿರೋಡಿಯಲ್ಲಿ ಕಂಡರಂತೆ!"

ಎಂದು ನರ್ಮದಾ ಹೇಳಿದಳು.

ಗೌರಿಯ ಬಾಯಿ ಕಟ್ಟಿಹೋಯಿತು.

ಕಮಲಮ್ಮ ದೀರ್ಘವಾಗಿ ಆಲೋಚಿಸುತ್ತಾ,

"ಗೌರಮ್ಮ, ನೀನು ಚಿಕ್ಕವಳು. ನಿನಗೆ ಸ್ವಲ್ಪವೂ ಲೋಕಾನುಭವವಿಲ್ಲ. ಗಂಡಸರನ್ನು ಹೀಗೆ ಹೋದ ದಾರಿಗೆ ಬಿಡಬಾರದಮ್ಮ."

"ನಾನೇನು ಮಾಡಬೇಕು?"

"ಬುದ್ಧಿ ಹೇಳಬೇಕು."

"ಚಿಕ್ಕವಳು ದೊಡ್ಡವರಿಗೆ ಬುದ್ಧಿ ಹೇಳುವುದೇ?!"

"ಗಂಡನನ್ನು ಕಂಡವರ ಕೈಗೆ ನೀನೇ ಹಾಕುತ್ತೀಯೇನು?"

..................................

"ನಿನ್ನ ಗಂಡ ಏತಕ್ಕೆ ಓಡಿಯಾಡುತ್ತಿದ್ದಾನೆ ಗೊತ್ತಿದೆಯೇ?"

...........................

"ನಿನ್ನ ಗಂಡನ ಮಾತು ಊರಿನ ಸುದ್ದಿಯಾಗಿದೆ."

..............................

"ನಿನ್ನ ಗಂಡ ನಾಟಕದವಳನ್ನು ಬೆನ್ನಿಗೆ ಕಟ್ಟಿಕೊಂಡು ಊರೂರು ಅಲೆದರೆ ನಿನಗೆ ಗೌರವವೇ—ನಿನ್ನ ಮನೆಗೆ ಗೌರವವೇ?"

"ಸಾಕು ಸುಮ್ಮನಿರಿ ಕಮಲಕ್ಕ."

"ಕಂಡವರ ಸುದ್ದಿ ನನಗೇಕೆ ಎಂದೇ ಸುಮ್ಮನಿದ್ದೆ ಗೌರಿ. ಈಚೆಗೆ ನಿನ್ನ ಗಂಡ ಹೊಲಗದ್ದೆಗಳನ್ನೂ ಮಂಗಳೆ ಹೆಸರಿಗೆ ಮಾಡುತ್ತಾ ಇದ್ದಾನೆಂದು ತಿಳಿದ ಮೇಲೆ ಜೀವ ತಡೆಯುಲಿಲ್ಲವಮ್ಮ—ಹೇಳಿದೆ. ನೀನು ಜಾಣೆಯಾಗದಿದ್ದರೆ ಹಸುಕಂದನ ಕೈಗೆ ತೆಂಗಿನ ಕರಟವೇ ಗಟ್ಟಿಯಾಗುತ್ತದೆ."

"ನನ್ನ ಗಂಡನಿಂದ ನನಗೆ ತಾನೇ ಅನ್ಯಾಯವಾಗುತ್ತಿರುವುದು—ಇನ್ನು ಯಾರಿಗೂ ಆಗುತ್ತಿಲ್ಲವಲ್ಲ."

ಎಂದು ಗೌರಿ ಮುಖ ಮುಚ್ಚಿಕೊಂಡು ಅಳಲುಪಕ್ರಮಿಸಿದಳು.

ಕಮಲಮ್ಮ, ನರ್ಮದಾ ಕುಂಕುಮಕ್ಕೂ ಕಾಯದೆ ಆ ಸ್ಥಳ ಬಿಟ್ಟು ಹೊರಟುಹೋದರು.

ಗೌರಿ ಬಿಕ್ಕಿ ಬಿಕ್ಕಿ ಅಳುತ್ತಿದ್ದುದು ಅದೇ ಬಂದ ನಿಂಗವ್ವನಿಗೆ ಕೇಳಿಸಿತು. ಅವಳು ಪಾರ್ವತಮ್ಮನವರ ಬಳಿ ಬಂದು,

"ಅವ್ವಾ, ಗೌರವ್ವ ಯಾಕೋ ಅಳ್ತಾ ಅವ್ರವ್ವ" ಎಂದಳು.

ಪಾರ್ವತಮ್ಮನವರು ಸೊಸೆಯ ಬಳಿ ಬಂದು ಕುಳಿತರು. ಗೌರಿ ಸ್ವಲ್ಪ ಹೊತ್ತಿಗೆ ಮುಂಚೆ ನಡೆದುದನ್ನು ಅತ್ತೆಗೆ ವರದಿ ಒಪ್ಪಿಸಿ ಅವರಿಗೆ ತೆಕ್ಕೆಬಿದ್ದಳು.

ಪಾರ್ವತಮ್ಮನವರು ಕರಗಿ ನೀರಾದರು. ಗೌರಿಗೆ ಸಮಾಧಾನ ಹೇಳಲು ಅವರ ಬಾಯಲ್ಲಿ ಮಾತುಗಳಿಲ್ಲ—ಹೃದಯದಾವೇಗ ಕಂಬನಿಯಾಗಿ ಹೊರಬಿತ್ತು.

ದುಃಖದ ದಳ್ಳುರಿ ಸ್ವಲ್ಪ ಉಪಶಮನವಾದ ಮೇಲೆ ಪಾರ್ವತಮ್ಮನವರು,

"ಈ ಸಾರೆ ಸುಬ್ಬು ಬಂದಾಗ ಒಂದು ಮಾತು ಸ್ಪಷ್ಟವಾಗಿ ಕೇಳಿಬಿಡುತ್ತೀನಿ ಗೌರಿ" ಎಂದರು.

"ಬೇಡ ಅತ್ತೆ–ಏನೂ ಕೇಳಬೇಡಿ. ಅವರಿಗೆ ಹೇಗೆ ಸಂತೋಷವೋ ಹಾಗಿರಲಿ—ಎಲ್ಲಿ ಸಂತೋಷವೋ ಅಲ್ಲಿರಲಿ. ಅವರು ಚೆನ್ನಾಗಿದ್ದರೆ ಸಾಕು."

"ನಿನ್ನ ವಸ್ತು ಕಂಡವರು ಕಿತ್ತುಕೊಂಡು ಹೋಗುತ್ತಿದ್ದರೆ ನೋಡಿಕೊಂಡು ಸುಮ್ಮನಿರುವೆಯಾ?"

"ಹಿಂದಿನ ಜನ್ಮದಲ್ಲಿಯಾದರೂ ನಾನು ಭಗವಂತನ ತಲೆಗೆ ಒಂದೆ ಸಳು ಹೂವನ್ನು ಭಕ್ತಿಯಿಂದ ಏರಿಸಿದ್ದರೆ ಆ ಧರ್ಮ ನನ್ನನ್ನು ಕಾಯುತ್ತದೆ ಅತ್ತೆ. ನನ್ನ ಸ್ವಾಮಿಗೆ ನಾನು ಬೇಡವಾದ ಮೇಲೆ ನಾನಿದ್ದೇನು ಸಾರ್ಥಕ?"

"ನಿನ್ನ ಸ್ವಾಮಿಗೆ ನೀನು ಬೇಡವಾಗಿರುವೆಯಾ?"

"ಇಲ್ಲ—ಒಂದು ದಿನವೂ ಅವರು ನನ್ನನ್ನು ತಿರಸ್ಕಾರ ಮಾಡಿಲ್ಲ–ಬೈದಿಲ್ಲ—ಹೊಡೆದಿಲ್ಲ–ಹಿಂಸೆಮಾಡಿಲ್ಲ. ಯಾವುದಕ್ಕೂ ಕೊರತೆ ಮಾಡಿಲ್ಲ."

“ಗೌರಿ—ಅಯೋಗ್ಯನನ್ನು ವಹಿಸಿಕೊಂಡು ನೀನು ಮಾತಾಡ ಬೇಡಮ್ಮ.”

“ಇಲ್ಲ ಅತ್ತೆ–ನನ್ನ ಮಾತು ನಂಬಿ. ಅವರು ಸುಖವಾಗಿರುವ ರೆಂದು ತಿಳಿದಿರುವಿರಾ?”

“ಅವನಿಗೇನು ಗುನಗು. ರಂಭೆ ಸಿಕ್ಕಿದ್ದಾಳೆ—ಅವಳ ಜತೆ ದಿಮ್ಮ ರಂಗ ಎಂದು ಮೆರೆಯುತ್ತಿದ್ದಾನೆ.”

“ಅವರೇನು ಮಾಡುತ್ತಿದ್ದಾರೋ ನಾನರಿಯೆ—ಆದರೆ ಅವರು ಸುಖವಾಗಿಲ್ಲವೆಂದು ನಾನು ಹೇಳಬಲ್ಲೆ.—ಮೊನ್ನೆ ಬಂದಿದ್ದಾಗ ರವಿ ಯನ್ನೆತ್ತಿಕೊಂಡರು. ಮಗುವನ್ನು ಮುದ್ದಾಡುತ್ತಾ ‘ರವಿ, ನಿನ್ನಮ್ಮ ನಿಗೆ ನಾನು ಒಳ್ಳೆಯ ಗಂಡನಾಗಲಿಲ್ಲ—ನೀನಾದರೂ ಒಳ್ಳೆಯ ಮಗ ನಾಗಪ್ಪ’ ಎಂದರು. ನಾನು ‘ಏಕೆ ಹಾಗನ್ನುವಿರಿ. ನಿಮಗಿಂತ ಒಳ್ಳೆಯ ಗಂಡ ಸಿಕ್ಕಲು ಸಾಧ್ಯವೇ’ ಎಂದೆ. ‘ಅಯ್ಯೋ ಹುಚ್ಚಿ’ ಎಂದದ್ದೇ ಎದ್ದು ಹೋದರು. ಅವರ ಮುಖ ನೀವು ಆಗ ನೋಡಬೇಕಾಗಿತ್ತು ಅತ್ತೆ!”

“ಗೌರಾ–ಗೌರಾ, ಈ ಹಾಳು ಪ್ರಪಂಚದಲ್ಲಿ ಇಷ್ಟು ಒಳ್ಳೆಯ ತನ ನಡೆಯುವುದಿಲ್ಲವೇ ತಾಯಿ.”

“ಲೋಕಕ್ಕೆ ಧರ್ಮ ಬೇಡವಾಗಿದೆಯೆಂದು ನಾವು ಧರ್ಮವನ್ನು ಬಿಡಬಹುದೇ ಅತ್ತೆ?”

“ಧರ್ಮವೇ ನಮ್ಮ ಕೈಬಿಡುತ್ತಿದೆ ಗೌರಿ.”

“ಇಲ್ಲ ಅತ್ತೆ, ನಂಬಿದವರನ್ನು ಧರ್ಮ ಎಂದಿಗೂ ಕೈಬಿಡುವುದಿಲ್ಲ.”

ಸೊಸೆಯ ಅಚಲ ನಂಬಿಕೆ, ಅನ್ಯಾದೃಶ ಧರ್ಮಶ್ರದ್ಧೆ ಕಂಡು ಪಾರ್ವತಮ್ಮನವರು ಬೆಕ್ಕಸಬೆರಗಾದರು.

ಭಾವನಾ ಪ್ರಪಂಚದಲ್ಲಿ ಹಾರಾಡುತ್ತಿದ್ದ ಇಬ್ಬರೂ ಭೂಮಿಗಿಳಿಯ ಲಿಲ್ಲ. ಸಮಸ್ಯೆಯ ಪರಿಹಾರ ಇಬ್ಬರೂ ಹುಡುಕಲಿಲ್ಲ. ಅವರು ನಿಂತಲ್ಲಿಯೇ ನಿಂತಿದ್ದರು. ಚಿಂತೆ ಮತ್ತಷ್ಟು ಆಳವಾಗಿ ಅವರ ಹೃದಯ ಹೊಕ್ಕಿತು.

## ೨೩

ಶಾಸ್ತ್ರಿಗಳಿಗೂ ಶಂಕರನಿಗೂ ನಡೆದಿದ್ದ ಸಂಭಾಷಣೆಯನ್ನು ಕೇಳುತ್ತ ಶ್ರೀಧರ ಮೂಕಸಾಕ್ಷಿಯಂತೆ ಕುಳಿತಿದ್ದ. ಅವರ ಸಂಭಾಷಣೆಯಲ್ಲಿ ತುಂಬಿ ತುಳುಕುತ್ತಿದ್ದ ಜ್ಞಾನಧಾರೆಗಿಂತಲೂ ಹೆಚ್ಚಾಗಿ ಶಂಕರನ ಹೃದಯದಲ್ಲಿ ಮೊರೆಯುತ್ತಿದ್ದ ಆರ್ತನಾದ ಅವನ ಗಮನವನ್ನು ಸೆಳೆದಿತ್ತು.

ಶಂಕರ ಕೇಳಿದ

"ಜೀವಕ್ಕೆ ಶಾಂತಿಯಿದೆಯೇ ಶಾಸ್ತ್ರಿಗಳೇ ?"

"ಇಲ್ಲ—ಜೀವ ಪ್ರಕೃತಿಯ ಅಧೀನ. ಪ್ರಕೃತಿ ಕ್ರಿಯಾಭಿಮುಖಿ. ಜೀವ ಪ್ರಕೃತಿಯ ಕಟ್ಟಿನಿಂದ ಬಂದು ಈಶ್ವರಾಧೀನವಾದಾಗಲೇ ಅದಕ್ಕೆ ಶಾಂತಿ. ಬೀಸುವ ಕಲ್ಲು ನೋಡಿರುವಿರಷ್ಟೆ-ಕೆಳಗಿರುವ ಕಲ್ಲೇ ಈಶ್ವರ-ಮೇಲೆ ಸದಾ ಸುತ್ತುವ ಕಲ್ಲೇ ಪ್ರಕೃತಿ."

"ಪ್ರಕೃತಿಯ ಕಟ್ಟಿನಿಂದ ಬಿಡುಗಡೆ ಹೊಂದುವುದು ಹೇಗೆ ?"

"ಗೀತೆ ನಿಮ್ಮ ಪ್ರಶ್ನೆಗೆ ಉತ್ತರವೀಯುತ್ತಿದೆ.

ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥"

"ಈ **ಅಹಂ** ಇದೆಯೆಂದು ನಂಬುವುದು ಹೇಗೆ ? ಕಣ್ಣು, ಕಿವಿ, ನಾಲಗೆ, ಮೂಗು, ಚರ್ಮ ಇವುಗಳೊಂದಕ್ಕೂ ನಿಲುಕದ ವಸ್ತು ಇದೆಯೆಂದು ಅರಿಯುವುದು ಹೇಗೆ ?"

"ಪಂಚೇಂದ್ರಿಯಗಳು ಅದನ್ನು ವಶಪಡಿಸಿಕೊಳ್ಳಬಹುದಾದರೆ, ಇಂದ್ರಿಯಗಳೇ ಹೆಚ್ಚು ಪ್ರಭಾವಶಾಲಿಗಳಾದಂತಾಯಿತಲ್ಲವೇ ? ಪಂಚೇಂದ್ರಿಯಗಳಿಗತೀತವಾಗಿರುವ ವಸ್ತುವನ್ನು ನಾವು ಹುಡುಕುತ್ತಿದ್ದೇವೆ. ಅರ್ಥಶಾಸ್ತ್ರದಲ್ಲಿ ಪಾರಂಗತನಾಗಲಿಚ್ಛಿಸುವವನು ಅರ್ಥಶಾಸ್ತ್ರ ಅಭ್ಯಾಸ ಮಾಡಬೇಕು; ಇತಿಹಾಸದಲ್ಲಿ ಪ್ರಾವೀಣ್ಯ ಪಡೆಯಲಿಚ್ಛಿಸುವವನು ಇತಿಹಾಸ ಅಭ್ಯಾಸ ಮಾಡಬೇಕು. ಈಶ್ವರ ಬೇಕೆಂದು ಬಯಸುವವನು ಆ ಜಾಡು ಹಿಡಿದು ಹೋಗಬೇಕು."

"ಆ ಜಾಡು ಯಾವುದು?"

"ಉಪನಿಷತ್ತುಗಳ ತುಂಬ ಈ ಪ್ರಶ್ನೆಯೇ ಆಗಿದೆ ಶಂಕರ್. ಅರುಣಿ, ನಚಿಕೇತ, ಶ್ವೇತಕೇತು, ಸತ್ಯಕಾಮ, ಪ್ರವಾಹಣ ಜೈವಲಿ, ಜಾನುಶ್ರುತಿ ಎಲ್ಲರೂ ಈ ಪ್ರಶ್ನೆ ಕೇಳಿದ್ದಾರೆ. ಅವರ ಗುರುಗಳು ಅವರಿಗೆ ಹೇಳಿದ ಉತ್ತರವನ್ನೇ ನಿಮಗೆ ನಾನು ಹೇಳಲೇ?"

"ಆ ಉತ್ತರ ಯಾವುದು?"

"ಕೆಲವು ವರ್ಷ ಚೆನ್ನಾಗಿ ದನ ಕಾಯುವುದನ್ನು ಕಲಿತುಕೋ!"

"ದನ ಕಾಯುವುದನ್ನೇ!"

"ಹೌದು—ಚಿತ್ತವೃತ್ತಿ ನಿರೋಧವನ್ನೇ ಉಪನಿಷತ್ತಿನ ಋಷಿ ದನ ಕಾಯುವುದೆಂದು ಹೇಳಿದ್ದಾನೆ. ಚಿತ್ತ ಪುಂಡು ದನವಿದ್ದ ಹಾಗೆ! ಅದನ್ನು ಪಳಗಿಸಬೇಕು. ಮರ್ಕಟದಂತೆ ಮರದಿಂದ ಮರಕ್ಕೆ ಹಾರುವ ಅದರ ಸ್ವಭಾವವನ್ನು ತಿದ್ದಬೇಕು."

"ಚಿತ್ತವೃತ್ತಿಯನ್ನು ನಿರೋಧಿಸುವುದು ಹೇಗೆ?"

"ಚಿತ್ತೈಕಾಗ್ರತೆಯಿಂದ—ಧ್ಯಾನದಿಂದ—ಸಂಯಮದಿಂದ. ಕಣ್ಣು ಮುಚ್ಚಿ ಮೂಗು ಹಿಡಿದು ಕೂಡುವುದೇ ಧ್ಯಾನವಲ್ಲ. ಮಾಡುವ ಕೆಲಸದಲ್ಲಿ ಸಂಪೂರ್ಣವಾಗಿ ಮನಸ್ಸಿಡಬೇಕು—ಫಲಾಫಲಗಳನ್ನು ನಿರ್ಲಕ್ಷಿಸಿ ಆ ಕೆಲಸ ಸಾಧಿಸಬೇಕು. ಕರ್ಮ ಕೌಶಲ್ಯವೇ ಯೋಗವೆಂದು ಹೇಳಿ ಶ್ರೀಕೃಷ್ಣ ಈ ಮಾತಿಗೆ ಆಕಾಶದಷ್ಟು ವಿಸ್ತಾರ ಕಲ್ಪಿಸಿಕೊಟ್ಟಿದ್ದಾನೆ."

"ಫಲಾಪೇಕ್ಷೆಯಿಲ್ಲದೆ ಕಾರ್ಯನಿರತನಾಗುವುದು ಸಾಧ್ಯವೇ ಶಾಸ್ತ್ರಿಗಳೇ? ಪರೀಕ್ಷೆಯಲ್ಲಿ ತೇರ್ಗಡೆಯಾಗುವ ಅಪೇಕ್ಷೆ ನನಗಿಲ್ಲದಿದ್ದರೆ ನಾನು ಓದಲು ಉತ್ತೇಜನವೆಲ್ಲಿಂದ ದೊರೆಯಬೇಕು."

"ಇದು ಬಹಳ ಮಹತ್ವದ ಪ್ರಶ್ನೆ ಶಂಕರ್. ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕು—ತೇರ್ಗಡೆಯಾಗಬೇಕು ಎಂದು ಜಪ ಮಾಡಿದರೆ ನೀವು ತೇರ್ಗಡೆಯಾಗುತ್ತೀರಾ?"

"ಇಲ್ಲ–ಕಷ್ಟಪಟ್ಟು ಓದಬೇಕು."

"ಇಲ್ಲಿ ಓದಿಗೆ ಪ್ರಾಧಾನ್ಯವೇ ವಿನಾ ತೇರ್ಗಡೆಗಲ್ಲವಲ್ಲ. ಓದಿನ ಸಹಜ ಫಲವಾಗಿ ತೇರ್ಗಡೆ ಸಿಕ್ಕೇ ಸಿಕ್ಕುತ್ತದೆ."

"ನಿಜ ನಿಜ."

"ಒಂದು ವೇಳೆ ತೇರ್ಗಡೆಯಾಗಲಿಲ್ಲವೆಂದು ಇಟ್ಟುಕೊಳ್ಳೋಣ. ನನ್ನ ಕರ್ತವ್ಯ ನಾನು ಮಾಡಿದ್ದೇನೆಂಬ ತೃಪ್ತಿಯಾದರೂ ಇರುತ್ತದಲ್ಲವೆ?"

"ಹೌದು—ಇರುತ್ತದೆ."

"ನಿಮ್ಮ ಮನಸ್ಸೇಕೋ ಇಂದು ತುಂಬ ವಿಹ್ವಲವಾಗಿದೆ ಶಂಕರ್."

"ಹೌದು ಸಾರ್. ತಮ್ಮ ಮಾತು ಕೇಳಿದ ಮೇಲೆ ಸಮಾಧಾನಕ್ಕೆ ಬಂದಿದೆ. ಅಧೀರತೆಯೂ ಹೋಗುತ್ತಿದೆ."

"ಮನೆಯಲ್ಲಿ ಏನಾದರೂ ಅಚಾತುರ್ಯವಾಗಿದೆಯೇ?"

"ಆಗಿರುವ ಹಾಗೆ ಕಾಣುತ್ತದೆ. ಕನ್ನಡಿ ಚೌಕಟ್ಟಿನಿಂದ ಸಿಡಿಯದಂತೆ ಏನು ಮಾಡಬೇಕೆಂಬುದೇ ದೊಡ್ಡ ಯೋಚನೆಯಾಗಿದೆ."

"ಕನ್ನಡಿಯನ್ನು ಬೆಂಕಿಯಿಂದ ದೂರವಿಟ್ಟರಾಯಿತು."

"ಸಾಧ್ಯವಾಗಿಲ್ಲ. ಸುತ್ತಲೂ ಆವರಿಸಿಕೊಂಡು ಬಂದ ಬೆಂಕಿ ಕನ್ನಡಿಯನ್ನು ಕಬಳಿಸಲು ಹವಣಿಸುತ್ತಿದೆ."

"ಬೆಂಕಿಯ ಪರಮ ಶತ್ರು ನೀರಲ್ಲವೇ?"

"ನೀರೂ ಕಾದು ಮರಳುತ್ತಿದೆ ಶಾಸ್ತ್ರಿಗಳೇ."

"ನೀರಿನ ಮೇಲೆ ತಂಗಾಳಿ ಬೀಸಲು ಅವಕಾಶ ಮಾಡಿಕೊಡಬೇಕು. ಕಿಟಕಿ, ಬಾಗಿಲುಗಳನ್ನು ವಿಶಾಲವಾಗಿ ತೆರೆಯಬೇಕು."

"ಕಿಟಕಿ ಬಾಗಿಲುಗಳನ್ನು ವಿಶಾಲವಾಗಿ ತೆರೆಯಬೇಕು."

ಎಂದುಕೊಂಡ ಶಂಕರನ ಮನಸ್ಸಿಗೆ ಅವ್ಯಕ್ತ ಆನಂದವಾಗಿತ್ತು. ಪ್ರಫುಲ್ಲವಾದ ಅವನ ಮುಖ ಕಂಡು ಶಾಸ್ತ್ರಿಗಳಿಗೆ ಸಂತೋಷವಾಯಿತು.

"ನಿಮ್ಮ ಮುಖ ನೋಡಿ ನನಗೆ ತುಂಬ ವ್ಯಸನವಾಗಿತ್ತು ಶಂಕರ್. ಸದ್ಯ ನಕ್ಕಿರಲ್ಲಾ."

"ಎಲ್ಲರ ಜೀವಕ್ಕೂ ಹೀಗೇ ಸದಾ ನಗೆ ತುಂಬಿ ಸಾರ್."

"ಭಗವದ್ಸಂಕಲ್ಪ ಹಾಗೇ ಇದ್ದರೆ ಏಕಾಗಬಾರದು."

ಎಂದು ಶಾಸ್ತ್ರಿಗಳು ಶ್ರೀಧರನ ಕಡೆ ತಿರುಗಿ

"ನೀವು ಸುಮ್ಮನೆ ಕುಳಿತುಬಿಟ್ಟಿರಲ್ಲಾ ಶ್ರೀಧರ್" ಎಂದರು.

"ನಾನೇನು ಮಾತಾಡಲಿ ಸಾರ್. ಯಮ, ನಚಿಕೇತರ ಸಂಭಾಷಣೆ ಕೇಳುತ್ತ ಕೇಳುತ್ತ ಮುಗ್ಧನಾಗಿಬಿಟ್ಟೆ."

"ನನ್ನನ್ನು ಯಮನಿಗೆ ಹೋಲಿಸುವಿರಾ?"

"ಉಪನಿಷತ್ತಿನ ಯಮ ಕೋಣಾರೂಢನಲ್ಲ ಸಾರ್."

"ಅವನೆಲ್ಲಿ—ನಾನೆಲ್ಲಿಯಪ್ಪ."

ಎಂದು ಶಾಸ್ತ್ರಿಗಳು ಮೃದುವಾಗಿ ಶಿಷ್ಯನ ಸ್ತುತಿಹಾರವನ್ನು ನಿರಾಕರಿಸಿದರು.

# ೨೪

ಮನೆಯ ವಾತಾವರಣ ಗಭೀರವಾಗುತ್ತ ಬಂತು. ತೃಪ್ತಿ, ಶಾಂತಿ, ಸಂತೋಷ ಎಲ್ಲರ ಮನಸ್ಸಿನಿಂದಲೂ ಅಳಿಸಿ ಹೋಗಿತ್ತು. ಒಬ್ಬರನ್ನು ಕಂಡರೆ ಒಬ್ಬರು ಸಿಡಿಗುಟ್ಟುವ ಸ್ಥಿತಿಗೆ ಬಂದಿದ್ದರು. ಘರ್ಷಣೆಗೆ ಅವಕಾಶ ಕೊಡಬಾರದೆಂದು ಎಲ್ಲರೂ ತಮ್ಮ ತಮ್ಮ ಭಾವನಾ ಪ್ರಪಂಚದ ಎಲ್ಲೆಯೊಳಗೆ ಅಡಗಿಕೊಂಡರು.

ಗೌರಿ ಬಾಣಂತನ ಮುಗಿಸಿಕೊಂಡು ಕೋಣೆಯಿಂದ ಹೊರಗೆ ಬಂದಳು. ಅವಳ ನಿರಂತರ ಚಿಂತೆಗೆ ಸ್ವಲ್ಪ ಪರಿಹಾರ ಸಿಕ್ಕಲೆಂದು ಪಾರ್ವತಮ್ಮನವರು ಮನೆಗೆಲಸಗಳನ್ನು ವಹಿಸಿಕೊಟ್ಟರು.

ರವಿ ಎತ್ತಿಕೊಳ್ಳುವವರ ಕೈಕೂಸಾಗಿ ಬೆಳೆಯುತ್ತಿದ್ದ. ನಿಂಗವ್ವ ಅವನ ಲಾಲನೆ ಪಾಲನೆಯಲ್ಲಿ ಪ್ರಪಂಚವನ್ನೇ ಮರೆತುಬಿಟ್ಟಳು.

ರವಿಯನ್ನು ನೋಡಿದವರು ಯಾರೂ ಅವನು ಏಳು ತಿಂಗಳ ಮಗುವೆಂದು ಹೇಳಲು ಸಾಧ್ಯವಿರಲಿಲ್ಲ. ಅವನ ದಷ್ಟಪುಷ್ಟ ಬೆಳವಣಿಗೆಯೂ ಪಾರ್ವತಮ್ಮನವರಿಗೂ ನಿಂಗವ್ವನಿಗೂ ನೂರೆಂಟು ಚಿಂತೆಗಳನ್ನು ತಂದೊಡ್ಡುತ್ತಿತ್ತು. ಕಮಲಮ್ಮನೋ ನರ್ಮದನೋ ಬಂದು ಹೋದ ಕೂಡಲೆ ಮಗುವಿಗೆ ಇಳಿ ತೆಗೆದು ದೃಷ್ಟಿಪರಿಹಾರ ಮಾಡುತ್ತಿದ್ದರು.

ಒಂದು ಸಲ ಸುಬ್ರಹ್ಮಣ್ಯ ಊರಿಗೆ ಬಂದವನು ಇಪ್ಪತ್ತು ನಾಲ್ಕು ಗಂಟೆಗಳು ಪ್ರಯಾಣ ಬೆಳಸುವ ಚಿಹ್ನೆಯನ್ನೇ ತೋರಲಿಲ್ಲ. ಗೌರಿಯ ನಿಷ್ಕಲ್ಮಷ ಮನಸ್ಸಿಗೆ ಹಾಲೆರೆದಂತಾಗಿತ್ತು. ಗಂಡನಿಗೆ ಊಟಕ್ಕೆ ಬಡಿಸಿ, ತಾನೂ ಬೇಗ ಊಟ ಮುಗಿಸಿಕೊಂಡು, ತಾಂಬೂಲದ ತಟ್ಟೆ ಕೈಯಲ್ಲಿ ಹಿಡಿದು ರೂಮು ಪ್ರವೇಶಿಸಿದಳು. ಹಾಸಿಗೆಯ ಮೇಲೆ ಅಡ್ಡಾಗಿದ್ದರೂ ಸುಬ್ರಹ್ಮಣ್ಯನಿಗೆ ನಿದ್ದೆ ಬಂದಿರಲಿಲ್ಲ.

"ಎಲೆ ಮಡಿಸಿಕೊಡಲೇ" ಎಂದು ಗೌರಿ ಕೇಳಿದಳು.

"ಕೊಡು."

ಗೌರಿ ಗಂಡನಿಗೆ ಎಲೆ ಮಡಿಸಿಕೊಟ್ಟು, ತಾನೂ ಎರಡೆಲೆ ಹಾಕಿಕೊಂಡು, ಅವನ ಪಕ್ಕದಲ್ಲಿ ಮಂಚದ ಮೇಲೆ ಕುಳಿತಳು.

ಅವಳ ಕಂಗಳಲ್ಲಿ ಆಸೆ ತುಂಬಿತ್ತು. ಮನಸ್ಸು ಏನನ್ನೋ ನಿರೀಕ್ಷಿಸುತ್ತಿತ್ತು. ಸುಬ್ರಹ್ಮಣ್ಯ ಅವಳ ಕಡೆ ತಿರುಗಿ ನೋಡಲಿಲ್ಲ. ಅವನ ದೇಹ ಅಲ್ಲಿದ್ದರೂ ಮನಸ್ಸು ಎಲ್ಲಿಯೋ ಹರಿದಾಡುತ್ತಿತ್ತು,

ಗಂಡನ ಅನಾದರ ಕಂಡು ಗೌರಿಯ ದುಃಖ ಉಕ್ಕಿಬಂತು. ಮುಖವನ್ನು ಒಂದೆಡೆಗೆ ತಿರುಗಿಸಿದಳು. ಗೌರಿ ಅಳುತ್ತಿದ್ದುದನ್ನು ಕಂಡ ಸುಬ್ರಹ್ಮಣ್ಯ ಹಾವು ತುಳಿದವನಂತೆ ಮೆಟ್ಟಿ ಎದ್ದು ಕುಳಿತು

"ಅಳುವುದೊಂದು ಬಿಟ್ಟು ನಿನಗಿನ್ನೇನೂ ಬರುವುದಿಲ್ಲವೆಂದು ಕಾಣುತ್ತದೆ."

ಎಂದ. ಅವನ ಧ್ವನಿಯಲ್ಲಿದ್ದ ಗಡಸು ಗೌರಿಯ ದುಃಖವನ್ನು ಇಮ್ಮಡಿಸಿತು.

"ಯಾವಾಗಲೂ ಇದೇ ಗೋಳಾಯಿತು."

ಎಂದುಕೊಂಡು ಸುಬ್ರಹ್ಮಣ್ಯ ಎದ್ದು ಕೈಗೆ ಕೋಟು ತೆಗೆದುಕೊಂಡ. ಗೌರಿ ಅವನ ಕಡೆ ತಿರುಗಿ ತೀಕ್ಷ್ಣನೋಟ ಬೀರಿ

"ಸ್ವಲ್ಪ ನಿಲ್ಲಿ" ಎಂದಳು.

ಅವಳ ಧ್ವನಿಯಲ್ಲಿ ಮಾರ್ದವತೆಯಾಗಲಿ ದೈನ್ಯವಾಗಲಿ ಇರಲಿಲ್ಲ. ಅಸಹಜವಾದ ಗಡಸು ಮೂಡಿತ್ತು.

"ಏಕೆ ನಿಲ್ಲಬೇಕು?"

"ಸ್ವಲ್ಪ ಮಾತನಾಡಬೇಕಾಗಿದೆ."

"ಬೇಗ ಹೇಳು. ನನಗೆ ತುಂಬ ಕೆಲಸವಿದೆ."

"ನಿಮಗೆ ಯಾವಾಗಲೂ ಕೆಲಸವಿದ್ದೇ ಇರುತ್ತದೆ."

"ಹೇಳುವುದನ್ನು ಬೇಗ ಹೇಳಿ ಮುಗಿಸು. ಅನಾವಶ್ಯಕ ಚರ್ಚೆ ಬೇಕಾಗಿಲ್ಲ."

"ಆವಶ್ಯಕವಾದುದನ್ನೇ ಮಾತನಾಡಬೇಕಾಗಿದೆ."

"ಆಗಬಹುದು ಎಂದು ಹೇಳಿದೆನಲ್ಲ."

"ನಿಮಗೂ ಹೆಂಡತಿ, ಮಗ ಇದ್ದಾರೆಂದು ಜ್ಞಾಪಿಸಬೇಕಾಗಿದೆ."

................................

"ಊರಿನಲ್ಲಿ ಏನು ಮಾತನಾಡಿಕೊಳ್ಳುತ್ತಿರುವರು ಬಲ್ಲಿರಾ ?"

"ಬಲ್ಲೆ."

"ನಾವು ಯಾರೂ ತಲೆಯೆತ್ತಿಕೊಂಡು ತಿರುಗಲು ಸಾಧ್ಯವಿಲ್ಲ."

"ಊರಿನವರ ಹೊಲಸು ಬಾಯಿಗೆ ನಾನು ಶ್ರೀಗಂಧ ಬಳಿಯಲೇ ?"

"ತಪ್ಪು ನಮ್ಮದಾಗಿರುವಾಗ ಊರಿನವರನ್ನು ಆಕ್ಷೇಪಿಸಿ ಏನು ಪ್ರಯೋಜನ ?"

"ಊರಿನವರು ಯಾರೂ ನನಗೆ ಅನ್ನ ಬಟ್ಟೆ ಕೊಟ್ಟು ಕಾಪಾಡುತ್ತಿಲ್ಲ."

"ಅನ್ನ ಬಟ್ಟೆ ಅಧಿಕವಾಗಿದೆಯೆಂದು ಅದನ್ನು ಮನಸ್ವೀ ಖರ್ಚು ಮಾಡಬಹುದೇನು?"

"ನನ್ನ ಖರ್ಚುವೆಚ್ಚದ ಬಗ್ಗೆ ತನಿಖೆ ಮಾಡುವುದಕ್ಕೆ ನೀನು ಯಾರು ?"

"ನಿಮ್ಮ ಕೈಹಿಡಿದ ಹೆಂಡತಿ."

"ನೀನಲ್ಲ ನನ್ನ ಕೈ ಹಿಡಿದಿರುವುದು. ನಾನು ನಿನ್ನ ಕೈ ಹಿಡಿದಿದ್ದೇನೆ. ಬೇಡವಾದರೆ ಬಿಡಲೂ ಬಲ್ಲೆ."

"ನನಗಿಂತ—ನಿಮ್ಮ ಮಗನಿಗಿಂತ—ನಿಮ್ಮ ತಾಯಿಗಿಂತ ಆ ತಿರುಪೆಯವನ ಮಗಳು ನಿಮಗೆ ಹೆಚ್ಚಾದಳೇ?"

"ಅವಳ ಸುದ್ದಿ ಎತ್ತಬೇಡ. ಅದು ನಿನಗೆ ಸಂಬಂಧಪಟ್ಟ ವಿಷಯವಲ್ಲ."

"ನನ್ನ ಸಂಸಾರ ಛಿದ್ರ ಮಾಡುತ್ತಿರುವ ವಿಷಯ ನನಗೆ ಸಂಬಂಧಪಟ್ಟುದಲ್ಲವೇ?"

"ನಿನ್ನ ಸಂಸಾರದಲ್ಲಿ ನಿನಗೇನು ಕಡಿಮೆಯಾಗಿದೆ?."

"ಅನ್ನ ಬಟ್ಟೆ ಎರಡೇ ಅಲ್ಲ ನನಗೆ ಬೇಕಾದುದು."

"ಇನ್ನೇನು ಬೇಕು ನಿನಗೆ?"

"ನಿಮ್ಮ ಗೌರವ—ವಿಶ್ವಾಸ; ಮನೆತನದ ಮರ್ಯಾದೆ."

"ನನ್ನ ವಿಶ್ವಾಸವನ್ನು ನೀನು ಬಲವಂತದಿಂದ ದೊರಕಿಸಲಾರೆ."

"ಅದನ್ನು ಬಲ್ಲೆ. ಅದಕ್ಕೇ ಸೆರಗೊಡ್ಡಿ ನಿಮ್ಮನ್ನು ಬೇಡಿಕೊಳ್ಳುತ್ತಿದ್ದೇನೆ. ಕೆಲವೇ ತಿಂಗಳ ಹಿಂದೆ ನೀವು ಹೇಗಿದ್ದಿರಿ ಜ್ಞಾಪಿಸಿಕೊಳ್ಳಿ.

ನನಗಾಗಿ, ನಿಮ್ಮ ತಾಯಿಗಾಗಿ, ನಿಮ್ಮ ತಮ್ಮನಿಗಾಗಿ ಎಷ್ಟು ಮರುಗುತ್ತಿದ್ದಿರಿ. ನಿಮ್ಮ ದಿವ್ಯ ಸ್ವಭಾವವನ್ನು ಒಬ್ಬ ಬೀದಿಯ ಹೆಣ್ಣಿಗಾಗಿ ನಾಶಮಾಡುವಿರಾ?"

"ಅವಳು ಬೀದಿಯ ಹೆಣ್ಣಲ್ಲ."

"ಇಂದ್ರಲೋಕದ ರಂಭೆಯೇ ಆಗಿರಬಹುದು."

"ತಲೆಯೆಲ್ಲಾ ಮಾತನಾಡಬೇಡ."

"ಹೋಗಲಿ–ಅವಳ ಸಹವಾಸದಲ್ಲಿ ನೀವು ಸುಖವಾಗಿರುವಿರಾ?"

"ಅದು ನನಗೆ ಸೇರಿದ ಪ್ರಶ್ನೆ–ನಿನಗೂ ಅದಕ್ಕೂ ಸಂಬಂಧವಿಲ್ಲ."

"ಸಂಬಂಧವಿದೆ. ನಿಮ್ಮ ಸೌಖ್ಯದ ಮೇಲೆ ನನ್ನ ಸೌಖ್ಯ ಅವಲಂಬಿಸಿದೆ–ನನ್ನ ಮಗನ ಸೌಖ್ಯ ಅವಲಂಬಿಸಿದೆ–ನಿಮ್ಮ ತಾಯಿ, ತಮ್ಮನ ಸೌಖ್ಯ ಅವಲಂಬಿಸಿದೆ."

"ನಿನ್ನ ನಾಲಗೆ ಇಷ್ಟು ಉದ್ದವೆಂದು ನನಗೆ ತಿಳಿದಿರಲಿಲ್ಲ."

"ಅದನ್ನು ಉದ್ದ ಮಾಡಿದವರು ಯಾರು?"

"ನಾನು."

"ಹೌದು ನೀವು."

"ಅನಿಷ್ಟಕ್ಕೆಲ್ಲಾ ಶನೇಶ್ವರ ಗುರಿ."

"ಶನೇಶ್ವರನನ್ನು ಮನಸ್ಸಿನಿಂದ ಹೊರದೂಡಬಾರದೇಕೆ?"

ಎಂದವಳೇ ಅವನ ಪಾದಗಳ ಮೇಲೆ ಮುಖವಿಟ್ಟು, ಕಂಬನಿಯಿಂದ ಅದನ್ನು ತೊಳೆಯುತ್ತಾ,

"ಬೇಡ ಸ್ವಾಮಿ–ಆ ಸಹವಾಸ ಬಿಟ್ಟುಬಿಡಿ. ನಂದ ಗೋಕುಲದ ಹಾಗಿರುವ ಈ ಮನೆಯನ್ನೇಕೆ ನರಕ ಮಾಡುವಿರಿ. ಊರಿನ ಜನ ನಿಮ್ಮ ಬಗ್ಗೆ ಆಡುವ ಸಣ್ಣ ಮಾತುಗಳನ್ನು ಕೇಳಿ ಹೇಗೆ ಸಹಿಸಲಿ–ನನ್ನ ಪಾಡು ಹಾಗಿರಲಿ—ಇದೇ ಲೋಕಕ್ಕೆ ಬಂದು ಕಣ್ಣು ಬಿಡುತ್ತಿರುವ ಮಗು ನಿಮಗೆ ಯಾವ ಅಪರಾಧ ಮಾಡಿದೆ—ದುಃಖದಲ್ಲಿ ನೊಂದು ಬೆಂದು, ನಿಮ್ಮ ಮೇಲ್ಮೆಯಲ್ಲಿಯೇ ಜೀವವಿಟ್ಟುಕೊಂಡಿರುವ ಅತ್ತೆ ಯಾವ ಅಪರಾಧ ಮಾಡಿದ್ದಾರೆ—ಅಣ್ಣನೆಂದರೆ ಸಾಕ್ಷಾತ್ ದೇವರು ಎಂದು ತಿಳಿದಿರುವ ನಿಮ್ಮ ತಮ್ಮ ಯಾವ ಅಪರಾಧ ಮಾಡಿದ್ದಾನೆ?"

ಸುಬ್ರಹ್ಮಣ್ಯನ ಅಂತಃಕರಣ ಕಲಕಿ ಹೋಯಿತು. ಗೌರಿಯ ಮಾತುಗಳಲ್ಲಿನ ನಿಷ್ಠುರ ಸತ್ಯ ತನ್ನ ಪ್ರಖರ ಕಿರಣಗಳಿಂದ ಸುಬ್ರಹ್ಮಣ್ಯನ ಅಂತಃಕರಣವನ್ನು ಹೊಕ್ಕಿರಿಯಿತು. ಗಭೀರವೃಕ್ಷದಂತಿದ್ದ ಅವನ ದೇಹ ಎಳೆತಳಿರಿನಂತೆ ಅಲುಗಾಡಿತು. ಅಂತರಂಗದಲ್ಲಿದ್ದ ತುಮುಲ ವಿಪ್ಲವ ಅವನನ್ನು ದುರ್ಬಲನನ್ನಾಗಿ ಮಾಡಿತು.

ಕರುಣೆ ಕಂಬನಿಯ ರೂಪ ತಳೆದಿತ್ತು. ಅದನ್ನು ತಡೆಗಟ್ಟಲು ಅವನು ಮಾಡಿದ್ದ ಪ್ರಯತ್ನ ವಿಫಲವಾಗಿತ್ತು.

ಗೌರಿಯ ತಲೆಯನ್ನೊಮ್ಮೆ ನೇವರಿಸಿ "ಅಳಬೇಡ ಗೌರಿ" ಎಂದ.

ಗೌರಿ ಅಳುವುದನ್ನು ನಿಲ್ಲಿಸಲಾಗಲಿಲ್ಲ. ಆಸೆ ತುಂಬಿದ ಕಂಗಳಿಂದ ಗಂಡನನ್ನೊಮ್ಮೆ ನೋಡಿದಳು.

"ನಿಮಗೆ ಅನ್ಯಾಯ ಮಾಡಬೇಕೆಂದು ನಾನು ಬಯಸುವುದಿಲ್ಲ ಗೌರಿ. ದುರ್ವಿಧಿ ನನ್ನನ್ನು ಕಾಡುತ್ತಿದೆ. ಪಂಜರದಲ್ಲಿ ಸಿಕ್ಕಿ ಬಿದ್ದಿರುವ ಸಿಂಹದಂತಾಗಿದೆ ನನ್ನ ಪಾಡು.—ನನ್ನ ಮನೆಯನ್ನೊಡೆಯಲು ನಾನು ಇಚ್ಛೆಪಡುವುದಿಲ್ಲ ಗೌರಿ....ಸ್ವಲ್ಪ ದಿನ ನನ್ನನ್ನು ನನ್ನ ದಾರಿಗೇ ಬಿಟ್ಟುಬಿಡು— ತರುವಾಯ ಎಲ್ಲವೂ...."

"ರೋಗ ಬಲಿತ ಮೇಲೆ ಚಿಕಿತ್ಸೆ ಸಾಧ್ಯವೇ?"

"ರೋಗ ಬಲಿಯದಂತೆ ನಾನು ಎಚ್ಚರವಾಗಿರಬಲ್ಲೆ ಗೌರಿ."

"ಸಾಧ್ಯವಿಲ್ಲ ಸ್ವಾಮಿ–ಸಾಧ್ಯವಿಲ್ಲ."

"ನೀನು ತಾಳ್ಮೆಗೆಟ್ಟರೆ ಏನೂ ಪ್ರಯೋಜನವಾಗುವುದಿಲ್ಲ."

"ನಿಮ್ಮ ದಾರಿಗೇ ನಿಮ್ಮನ್ನು ಬಿಡಬೇಕು."

"ಕಟ್ಟಿಹಾಕುವುದಕ್ಕೆ ನಾನು ದನವೆಂದು ಭಾವಿಸಿರುವೆಯಾ?"

ಎಂದವನೇ ಕಾಲು ಕೊಡಹಿಕೊಂಡು, ಕೋಟನ್ನೆಳೆದು ಕೈಯಲ್ಲಿ ಹಿಡಿದು ಹೊರಟುಬಿಟ್ಟ.

ಗೌರಿ 'ಅಯ್ಯೋ' ಎಂದು ಚೀರಿ ಮೂರ್ಛಿತಳಾಗಿ ಬಿದ್ದುಬಿಟ್ಟಳು.

# ೨೫

ಶಂಕರನ ಪರೀಕ್ಷೆ ಮುಗಿದಿತ್ತು.

ತನ್ನ ಪರೀಕ್ಷೆ ಮುಗಿಯುವ ವರೆಗೂ ಅಲ್ಲಿಯೇ ಇರಬೇಕೆಂದು ಶ್ರೀಧರ ಹಟ ಹಿಡಿದ.

ಶ್ರೀಧರನ ಪರೀಕ್ಷೆ ಮುಗಿಯುತ್ತಲೇ ಶಂಕರನನ್ನೂ ತನ್ನ ಊರಿಗೆ ಕರೆದುಕೊಂಡು ಹೋಗಲು ಪ್ರಯತ್ನಿಸಿದ. ತಾವರೆಕೆರೆಗೆ ಮೊದಲು ಹೋಗಲೇಬೇಕೆಂದು ಶಂಕರ ಖಡಾಖಂಡಿತವಾಗಿ ಹೇಳಿಬಿಟ್ಟ. ಶಾಸ್ತ್ರಿಗಳು ಮಧ್ಯಸ್ಥಿಕೆ ಮಾಡಿ ಗೆಳೆಯರಿಗೆ ಒಪ್ಪಂದ ಮಾಡಿಸಿದರು. ಸದ್ಯಕ್ಕೆ ಶಂಕರ ಊರಿಗೆ ಹೋಗಿ, ರಜಾ ಮುಗಿಯುವುದರೊಳಗೆ ಕೃಷ್ಣರಾಜನಗರಕ್ಕೆ ಬಂದು ಶ್ರೀಧರನ ಜತೆ ಒಂದು ವಾರವಿರುವುದೆಂದು ಇತ್ಯರ್ಥವಾಯಿತು.

ಶಂಕರ ಅಂಜುತ್ತ ಅಂಜುತ್ತಲೇ ಮನೆಯೊಳಗೆ ಕಾಲಿಟ್ಟ. ಅವನನ್ನು ಸ್ವಾಗತಿಸಿದ ಪಾರ್ವತಮ್ಮನವರು, ಗೌರಿ ಇಬ್ಬರ ಮುಖವೂ ಕಳಾಹೀನವಾಗಿತ್ತು. ನಿಂಗವ್ವನೂ ತೇಜೋಹೀನಳಾಗಿದ್ದಳು.

ಶಂಕರ ಊರು ತಲುಪಿದ ಮೂರು ದಿನಗಳ ಮೇಲೆ ಸುಬ್ರಹ್ಮಣ್ಯನ ಸ್ವಾರಿ ಚಿತ್ತೈಸಿತು.

"ಯಾವಾಗ ಬಂದೆ ಶಂಕರ" ಎಂದು ಕೇಳಿದ.

"ಮೂರು ದಿವಸವಾಯಿತು."

"ಪರೀಕ್ಷೆಯಲ್ಲಿ ಹೇಗೆ ಮಾಡಿದ್ದೀ?"

"ಚೆನ್ನಾಗಿ ಮಾಡಿದ್ದೇನೆ."

"ಶ್ರೀಧರ ಚೆನ್ನಾಗಿದ್ದಾನೆಯೇ?"

"ಚೆನ್ನಾಗಿದಾನೆ."

"ಅವರನ್ನೇಕೆ ಕರೆದುಕೊಂಡು ಬರಲಿಲ್ಲ?"

"ತಾಯಿತಂದೆ ಕಾಯುತ್ತಿರುತ್ತಾರೆಂದು ಊರಿಗೆ ಹೋದ."

"ಶಾಸ್ತ್ರಿಗಳನ್ನು ಕರೆದುಕೊಂಡು ಬರಬೇಕಾಗಿತ್ತು."

"ಅವರು ಓರಿಯಂಟಲ್ ಕಾನ್‌ಫರೆನ್ಸ್‌ಗೆ ಹೋಗಬೇಕಾಗಿತ್ತು."

ಅಲ್ಲಿಗೆ ಮಾತು ಮುಗಿದುಹೋಯಿತು. ಅಣ್ಣನೂ ಪರಕೀಯರನ್ನು ಮಾತನಾಡಿಸುವಂತೆ ಶಂಕರನನ್ನು ಮಾತನಾಡಿಸಿದ್ದ. ಪ್ರೇಮದ ವಿದ್ಯುಚ್ಛಕ್ತಿಯನ್ನೊದಗಿಸುತ್ತಿದ್ದ ತಂತಿ ಕಡಿದುಹೋಗಿತ್ತು.

ಈ ನಿರ್ಜೀವ ನಿಶ್ಚೇತನ ವಾತಾವರಣದಲ್ಲಿ ಶಂಕರನಿಗಿದ್ದ ಒಂದೇ ಸಮಾಧಾನವೆಂದರೆ ರವಿಯ ಸಹವಾಸ. ರವಿಯ ಗಿಲಿಕಿ, ತುತ್ತೂರಿ, ಚೆಂಡುಗಳೇ ಅವನಿಗೆ ಆಧಾರವಾಯಿತು.

ಒಂದು ದಿನ ಮನಸ್ಸು ಗಟ್ಟಿ ಮಾಡಿಕೊಂಡು ತಾಯಿಯ ಬಳಿ ಕುಳಿತು "ನಮ್ಮ ಮನೆಯನ್ನು ಯಾವ ಗ್ರಹ ಕಾಡುತ್ತಿದೆಯಮ್ಮ ?" ಎಂದು ಕೇಳಿದ.

"ಏಕೆ ಶಂಕ್ರೂ?"

"ಏಕೆ ಎಂದು ನಾನು ಬಾಯಿ ಬಿಟ್ಟು ಹೇಳಬೇಕೆ? ಅಣ್ಣನೂ ಹೊರಗಿನವರ ಹಾಗೆ ವರ್ತಿಸುತ್ತಾನೆ. ಅತ್ತಿಗೆ ಮಾತೇ ಆಡಲ್ಲ. ನೀನು ತುಳಸೀಕಟ್ಟೆಯಲ್ಲಿ ಲೀನವಾಗುತ್ತೀ. ನಿಂಗಜ್ಜಿ ಮನೆಯಲ್ಲಿಯೇ ಇರುವುದಿಲ್ಲ. ಹೀಗೆ ಎಲ್ಲರೂ ತಮ್ಮ ತಮ್ಮ ವ್ಯೂಹ ಕಟ್ಟಿಕೊಂಡು ಕುಳಿತರೆ ಮನೆ ಕಟ್ಟುವವರು ಯಾರು?"

"ಪರೀಕ್ಷೆಗೆ ಕುಳಿತು ಸಾಕಾಗಿ ಬಂದಿದ್ದೀ ಶಂಕ್ರೂ—ನಾಲ್ಕು ದಿವಸ ಹಾಯಾಗಿರು."

"ಈ ವಾತಾವರಣದಲ್ಲಿ ನಾನು ಹಾಯಾಗಿರಲು ಸಾಧ್ಯವೇ?"

"ನೀನು ಊಹಿಸಿದ ಮನೆಯನ್ನೊಂದು ಗ್ರಹ ಕಾಡುತ್ತಿದೆ."

"ಯಾವ ಗ್ರಹ?"

"ಶುಕ್ರ ಗ್ರಹ."

"ಅಣ್ಣಯ್ಯನ ವಿಷಯವೇ?"

"ಅದು ನಿನಗೂ ಗೊತ್ತಿದೆ!"

"ಬಹಳ ದಿವಸಗಳಿಂದ ಗೊತ್ತಿದೆ."

"ಗೌರೀಗೂ ಅವನಿಗೂ ಮಾತು ಕೂಡ ಇಲ್ಲ."

"ಏಕೆ?"

"ಗೌರಿ ಬಾಯಿಬಿಟ್ಟು ಕೇಳಿಬಿಟ್ಟಳು."

“ಅಣ್ಣಯ್ಯ ಒಪ್ಪಿಕೊಂಡನೇ ?”

“ಒಪ್ಪಿಕೊಂಡುದು ಮಾತ್ರವೇ ಅಲ್ಲ–ಅವಳನ್ನು ಮನೆಗೆ ಕರೆದು ಕೊಂಡು ಬಂದರೇನು ಮಾಡುವೆ, ಎಂದು ಕೇಳಿದ.”

“ಕೋಪದ ಭರದಲ್ಲಿ ಅವನು ಹಾಗೆ ಹೇಳಿರಬೇಕು. ಅಣ್ಣಯ್ಯ ತೀರ ಅಷ್ಟು ಅವಿವೇಕಿಯಲ್ಲ.”

“ಅವನೆಂಥ ಅವಿವೇಕಿಯಾಗಿದ್ದಾನೆಂಬುದು ನಿನಗೆ ಗೊತ್ತಿಲ್ಲ.”

“ಅತ್ತಿಗೆಯನ್ನು ಹೊಡೆಯುತ್ತಾನೆಯೇ?”

“ಯಾವುದೂ ಉಳಿಸಿಲ್ಲವೆಂದು ಕಾಣುತ್ತದೆ. ಗೌರಿಯನ್ನು ಕೇಳಿದರೆ ಇಲ್ಲವೆನ್ನುತ್ತಾಳೆ.”

“ಅಣ್ಣಯ್ಯನ ಜತೆ ಈ ವಿಷಯ ಮಾತನಾಡಿದೆಯಾ?”

“ಅದೂ ಮುಗಿದುಹೋಯಿತು.”

“ಅವನು ಏನು ಹೇಳಿದ?”

“ಈ ಮಾತಿಗೆ ನೀನು ಬರಬೇಡಮ್ಮ, ಎಂದು ಹೇಳಿದ.”

“ನಾನು ಅವನ ಹತ್ತಿರ ಮಾತನಾಡಲೇ?”

“ಅದರಿಂದೇನು ಸಾರ್ಥಕ. ನಿಮ್ಮ ನಿಮ್ಮಲ್ಲಿ ಇಲ್ಲದ ವಿರಸ ಹುಟ್ಟುತ್ತದೆ.”

“ಎಲ್ಲರೂ ಹೀಗೆ ಅವನನ್ನು ದೂರಮಾಡಿದರೆ............”

“ಅವನೇ ಎಲ್ಲರನ್ನೂ ದೂರಮಾಡಿದ್ದಾನೆ.”

“ಎಂಥ ಅಸಹಾಯ ಸ್ಥಿತಿ ಇದು.”

“ಹಗಲು ಕಂಡ ಭಾವಿಯಲ್ಲಿ ಇರುಳು ಬೀಳುವವರನ್ನು ಯಾರು ರಕ್ಷಿಸುವವರು?”

“ಭಗವಂತ.”

“ನಮ್ಮನ್ನು ಅವನು ಮರೆತಿದ್ದಾನೆ. ನಮ್ಮ ಕೂಗು ಅವನ ಕಿವಿಯ ಮೇಲೆ ಬೀಳುವುದಿಲ್ಲ.”

“ಅವನು ಯಾರನ್ನೂ ಮರೆಯುವುದಿಲ್ಲ. ಇರುವೆಯ ಕಾಲು ಸಪ್ಪಳ ಕೂಡ ಅವನಿಗೆ ಕೇಳಿಸುತ್ತದೆ.”

“ಓದಿದ ಪುಸ್ತಕಗಳ ಮಾತು ಆಡುತ್ತಿರುವೆಯಾ ಶಂಕರ.”

"ಇಲ್ಲಮ್ಮ. ನನ್ನ ಹೃದಯದಲ್ಲಿ ದೃಢವಾಗಿ ಮೂಡಿರುವ ನಂಬಿಕೆಯೇ ಈ ಮಾತು ಆಡುತ್ತಿದೆ. ಆ ನಂಬಿಕೆ ನನಗೆ ಕೊಟ್ಟವಳು ನೀನು—ನೀನೇ ಅದನ್ನು ಕತ್ತರಿಸಿಹಾಕುವೆಯಾ?"

"ನನ್ನ ಮನಸ್ಸೂ ಸಂಶಯಗ್ರಸ್ತವಾಗುತ್ತದೆ. ಭಗವಂತ ಇದ್ದಾನೆಯೋ ಇಲ್ಲವೋ? ಇದುವರೆಗೆ ನಾನು ನಂಬಿದುದೆಲ್ಲವೂ ಭ್ರಮೆಯೇ ಮೋಸವೇ ಎಂದು ಯೋಚಿಸುತ್ತೇನೆ."

"ನಿಂಗಜ್ಜಿ ಏನು ಹೇಳುತ್ತಾಳೆ?"

"ಅವಳು ನಿನ್ನ ಪಂಥಕ್ಕೆ ಸೇರಿದವಳು. ಅವಳ ಮನಸ್ಸು ಸ್ಫಟಿಕದಂತೆ ಪರಿಶುದ್ಧವಾದುದು."

"ನಿನ್ನ ಮನಸ್ಸೂ ಪರಿಶುದ್ಧವಾದುದಮ್ಮ."

"ಅವಳ ಶ್ರದ್ಧೆ, ನಂಬಿಕೆ ನನಗಿಲ್ಲ ಶಂಕರ. ಯಾರೂ ಮಾಡದ ಯಾವ ಪಾಪ ನಾನು ಮಾಡಿದ್ದೇನೆಂದು ಇಷ್ಟೊಂದು ಕಷ್ಟ ಅನುಭವಿಸಬೇಕಾಗಿದೆಯೋ! ಭಗವಂತ ದಯಾಮಯನೆಂಬುದು ನಿಜವಾದರೆ ನನ್ನ ವಿಷಯದಲ್ಲೇಕೆ ಅವನು ನಿರ್ದಯನಾಗಿ ವರ್ತಿಸುತ್ತಿದ್ದಾನೆ. ನನ್ನ ಮಕ್ಕಳು ಚೆನ್ನಾಗಿರಬೇಕೆಂದು ನಾನು ಬಯಸುವುದೂ ತಪ್ಪೇ? ಇವರಲ್ಲಿಯೂ ಸ್ವಾರ್ಥವಿದೆಯೇ?"

"ತಾಯಿಗೆ ಸ್ವಾರ್ಥವನ್ನು ಆರೋಪಿಸುವುದಾದರೆ ಭಗವಂತನಿಗೆ ಲೋಭವನ್ನು ಆರೋಪಿಸಬೇಕಾದೀತು."

"ನಿನ್ನ ತಾಯಿಯೂ ಒಬ್ಬ ಸಾಮಾನ್ಯ ಮನುಷ್ಯಳು."

"ಇರಬಹುದು—ನನಗವಳು ಸಾಕ್ಷಾತ್ ಜಗದ್ಧಾತ್ರಿ. ಅವಳ ಚರಣ ಕಮಲಗಳೇ ನನ್ನ ಕೈಲಾಸ. ಅವಳ ನುಡಿಯೇ ನನಗೆ ಗಾಯಿತ್ರಿ."

ಪಾರ್ವತಮ್ಮನವರು ಮಗನನ್ನಪ್ಪಿಕೊಂಡು ಮುದ್ದಾಡಿ, "ಲೋಕವನ್ನರಿಯದ ನನ್ನ ಕಂದನ ಬಾಯಲ್ಲಿ ಎಂಥ ದಿವ್ಯ ಮಾತುಗಳು" ಎಂದು ಅಚ್ಚರಿಗೊಂಡರು.

ಪರಿಸ್ಥಿತಿಯನ್ನು ಹೀಗೆಯೆ ಬೆಳೆಯ ಬಿಟ್ಟರೆ ಅದು ಹಿಡಿತಕ್ಕೆ ಸಿಕ್ಕದೆ ದುರಂತದಲ್ಲಿ ಪರಿಣಾಮ ಹೊಂದಬಹುದೆಂದು ಶಂಕರ ಹೆದರಿದ.

ದೂಗದ ಸಾಕ್ಷಿಯಾಗಿ ನಿಂತು, ನಡೆಯುವುದನ್ನು ನೋಡಿ ವ್ಯಥೆಪಡುವುದ ಕ್ಕಿಂತಲೂ ಕೈಯಲ್ಲಾದ ಪ್ರಯತ್ನಮಾಡುವುದೇ ಲೇಸೆಂದು ಅವನು ನಿರ್ಧರಿಸಿದ.

ಒಂದು ದಿನ ಸುಬ್ರಹ್ಮಣ್ಯನೇ ತಮ್ಮನನ್ನು ಆಹ್ವಾನಿಸಿ, ಅವನನ್ನು ಕರೆದೊಯ್ದು ಹೊಲ, ಗದ್ದೆ, ತೋಟಗಳನ್ನು ತೋರಿಸಿಕೊಂಡು ಬಂದು ದನ್ನು ನೋಡಿ ಮನೆಯಲ್ಲಿ ಎಲ್ಲರೂ ಪರಮಾಶ್ಚರ್ಯಕ್ಕೆ ಒಳಗಾದರು.

"ಸುಬ್ಬೂ ಏನು ಹೇಳಿದ ಶಂಕರ?"

ಎಂದು ತಾಯಿಯ ಪ್ರಶ್ನೆಗೆ ಶಂಕರ,

"ಏನೂ ಇಲ್ಲಮ್ಮ, ಹೊಲ ಗದ್ದೆ ತೋಟ ತೋರಿಸಿ, ಅಪ್ಪ ಬಿಟ್ಟು ಹೋಗಿರುವ ಆಸ್ತಿಯನ್ನು ನಾನು ಕೈಲಾದಷ್ಟು ಅಭಿವೃದ್ಧಿ ಮಾಡುತ್ತಿದ್ದೇನೆ ಶಂಕರ, ಎಂದು ಹೇಳಿದ."

ಪಾರ್ವತಮ್ಮನವರು ಕೆದಕಿ ಮಗನ ಬಾಯಿಂದ ಎಲ್ಲ ವಿಷಯ ಗಳನ್ನೂ ಹೊರಡಿಸುವ ಪ್ರಯತ್ನ ಮಾಡಲಿಲ್ಲ. ಆದರೂ ಮನಸ್ಸು ತಡೆಯದೆ, "ಈ ವಿಷಯ ಬಂತೇ?" ಎಂದು ಕೇಳಿದರು.

"ಇಲ್ಲಮ್ಮ. ಅವನು ಆ ಸುದ್ದಿಯೆತ್ತಲಿಲ್ಲ—ನಾನೂ ಎತ್ತಲಿಲ್ಲ." ಎಂದು ಹೇಳಿ ಶಂಕರ ಜಾರಿಕೊಂಡ.

ನಾಲ್ಕು ದಿನ ಕಳೆದ ಮೇಲೆ ಒಂದು ದಿನ ಸುಬ್ರಹ್ಮಣ್ಯ 'ಕೆಲಸ ವಿದೆ' ಎಂದು ಹೇಳಿ ಊರು ಬಿಟ್ಟು ಹೋದ. ಅಂದೇ ರಾತ್ರಿ ರವಿಯ ಮೈ ಬೆಚ್ಚಗಾಯಿತು. ಶೀತದ ಜ್ವರವೆಂದು ಹಣೆಗೆ ಅರಿಸಿನದ ಪಟ್ಟು ಹಾಕಿ, ಮೈ ಕಾಸಿ ಮಗುವನ್ನು ಮಲಗಿಸಿದರು.

ಜ್ವರದ ತಾಪ ಸಹಿಸಲಾರದೆ ಮಗು ರಾತ್ರಿಯೆಲ್ಲಾ ಎದ್ದು ಅಳು ತಿತ್ತು. ಪಾರ್ವತಮ್ಮ, ಸಿಂಗನ್ನ ಸರದಿಯ ಮೇಲೆ ಮಗುವಿನ ಬಳಿ ಕುಳಿತಿದ್ದು ಗೌರಿಗೆ ವಿಶ್ರಾಂತಿ ಕೊಟ್ಟರು. ಶಂಕರನ ಮನಸ್ಸಿಗೂ ಆತಂಕವಾಗಿತ್ತು. ಎಷ್ಟು ಪ್ರಯತ್ನಿಸಿದರೂ ನಿದ್ದೆ ಹತ್ತಲಿಲ್ಲ. ಅವನೂ ಎದ್ದು ಬಂದು ರವಿಯ ತೊಟ್ಟಿಲ ಬಳಿ ಕುಳಿತ.

ಪಾರ್ವತಮ್ಮನವರು ಆಯಾಸದಿಂದ ತೂಕಡಿಸಲಾರಂಭಿಸಿದರು. ಶಂಕರ ಅವರ ಅವಸ್ಥೆ ನೋಡಿ,

"ನೀನು ಮಲಗಿಕೊಳ್ಳಮ್ಮ. ರವಿಯನ್ನು ನಾನು ನೋಡಿಕೊಳ್ಳುತ್ತೇನೆ" ಎಂದ.

"ನಿನ್ನ ಕಾವಲು ಕೂಡಿಸಿ ನಾನು ಮಲಗುವುದೆಂದರೆ ಯಾವ ನ್ಯಾಯವೋ ಶಂಕರ."

"ಬೆಳಗಾದರೆ ನಿನಗೆ ಕೈತುಂಬ ಕೆಲಸ ಇದೆ. ನನಗೆ ದಿನವೆಲ್ಲಾ ಪುರಸತ್ತು. ಸುಖವಾಗಿ ಮಲಗಿ ನಿದ್ರೆ ಮಾಡಬಹುದು."

ಎಂದು ತಾಯಿಯನ್ನು ಬಲವಂತವಾಗಿ ಮಲಗಲು ಕಳಿಸಿಕೊಟ್ಟ.

ಗೌರಿಯೂ ಜಾಗರಣೆ ಮಾಡುತ್ತಿದ್ದಳು.

"ನೀನೂ ಮಲಗಿಕೋ ಅತ್ತಿಗೆ. ರವಿ ಚಂಡಿ ಹಿಡಿದರೆ ನಾನೇ ಎಬ್ಬಿಸುತ್ತೇನೆ" ಎಂದ.

ಗೌರಿ ಮಲಗಲು ಒಪ್ಪಲಿಲ್ಲ. ತಲೆಯ ಮೇಲೆ ಕೈ ಹೊತ್ತು ಕುಳಿತುಬಿಟ್ಟಳು. ರವಿಗೆ ಚೆನ್ನಾಗಿ ನಿದ್ದೆ ಹತ್ತಿದ ಮೇಲೆ ಶಂಕರ, "ನೀನು ಹೀಗೆ ಕೊರಗಿದರೆ ಯಾವ ದೇವರಿಗೆ ಪ್ರೀತಿ ಅತ್ತಿಗೆ"ಎಂದ.

"ಇನ್ನೇನು ಮಾಡಲಪ್ಪಾ. ನಾನು ಕೇಳಿಕೊಂಡು ಬಂದದ್ದು. ಪಾಪಿ ಸಮುದ್ರ ಹೊಕ್ಕರೂ ಮೊಳಕಾಲುದ್ದ ನೀರೇ."

"ನೀನು ಇಲ್ಲದ ವ್ಯಸನ ಮನಸ್ಸಿಗೆ ಹಚ್ಚಿಕೊಂಡಿದ್ದಿ ಅತ್ತಿಗೆ."

"ನನ್ನ ಸಂಕಟ ನಿನಗೆ ಅರ್ಥವಾಗುವುದಿಲ್ಲ ಶಂಕರ. ನೀನಿನ್ನೂ ಶುದ್ಧ ಮಗು."

"ಅರ್ಥವಾಗುತ್ತದೆ ಅತ್ತಿಗೆ. ನಾನು ತೀರ ಅಷ್ಟು ಅಪ್ರಬುದ್ಧನಲ್ಲ."

"ಮುಖ್ಯ ನಾನು ಬದುಕಿರಬಾರದು ಶಂಕರ. ದೇವರು ಈ ಕಂದನನ್ನು ನನ್ನ ಕೊರಳಿಗೆ ಕಟ್ಟಿ ಕಾಡಿಸುತ್ತಿದ್ದಾನೆ."

"ಕಾಡಿಸುತ್ತಿಲ್ಲ—ನಿನ್ನ ಸಮಸ್ಯೆ ಪರಿಹಾರ ಮಾಡುತ್ತಿದ್ದಾನೆ."

"ಗಂಡನಿಗೆ ಬೇಡವಾದ ಹೆಣ್ಣಿನ ಜನ್ಮ ನಾಯಿಯ ಜನ್ಮಕ್ಕಿಂತ ಕಡೆ ಶಂಕರ."

"ಇರಬಹುದು—ನೀನು ನಿನ್ನ ಗಂಡನಿಗೆ ಬೇಡವಾಗಿಲ್ಲವಲ್ಲ."

"ಅದಕ್ಕೇ ನಿನಗೊಂದೂ ಅರ್ಥವಾಗುವುದಿಲ್ಲ ಎಂದು ನಾನು ಹೇಳಿದ್ದು."

"ನೀನು ಹಾಗೆ ಭಾವಿಸಿದರೆ ಅಣ್ಣಯ್ಯನಿಗೆ ಅನ್ಯಾಯವಾಗುತ್ತದೆ."

"ಅಣ್ಣನ ಪಕ್ಷ ಹಿಡಿದಿರುವಿಯೇನು?"

"ಇಲ್ಲ. ಸತ್ಯದ ಪಕ್ಷ ಹಿಡಿದಿದ್ದೇನೆ. ಈಗ ನಿಮ್ಮಿಬ್ಬರ ಕಣ್ಣಿಗೂ ಮಂಕು ಕವಿದಿದೆ. ಕಣ್ಣು ಮುಚ್ಚಿಕೊಂಡು 'ಕತ್ತಲೆ, ಕತ್ತಲೆ' ಎಂದು ಚೀರುತ್ತಿದ್ದೀರಿ. ಕಣ್ಣು ಬಿಟ್ಟು ನೋಡಿದರೆ ಝಗಝಗಿಸುತ್ತಿರುವ ಸೂರ್ಯನ ದರ್ಶನವಾಗುತ್ತದೆ—ಸತ್ಯಸೂರ್ಯನ ದರ್ಶನ!"

"ನಾನು ಕಣ್ಣು ಮುಚ್ಚಿಕೊಂಡಿದ್ದೇನೆಯೇ! ಕಣ್ಣು ಮುಚ್ಚಿ ಕೊಂಡಿದ್ದುದೇ ನಾನು ಮಾಡಿದ ದೊಡ್ಡ ತಪ್ಪು."

"ಒಬ್ಬರ ಮೇಲೊಬ್ಬರು ತಪ್ಪು ಹೊರಿಸಲೇಕೆ ಇಷ್ಟು ಆತುರರಾಗಿ ರುವಿರಿ?"

"ನಿನ್ನ ಬಾಯಿಂದಲೂ ಈ ಮಾತು ಬರುತ್ತದೆಂದು ನಾನು ನಿರೀ ಕ್ಷಿಸಲಿಲ್ಲ ಶಂಕರ."

"ದಯಮಾಡಿ ನನ್ನನ್ನು ತಪ್ಪು ತಿಳಿದುಕೊಳ್ಳಬೇಡ ಅತ್ತಿಗೆ. ಅಣ್ಣಯ್ಯನ ಅಪರಾಧ ಮುಚ್ಚಲು ನಾನು ಯತ್ನಿಸುತ್ತಿಲ್ಲ. ಅವನ ನಡತೆಯನ್ನು ನಾನು ಖಂಡಿತವಾಗಿ ಅನುಮೋದಿಸುವುದಿಲ್ಲ. ಈ ಸಂದರ್ಭದಲ್ಲಿ ನಾನು ಯಾರದಾದರೂ ಪಕ್ಷ ಹಿಡಿಯಬೇಕಾದರೆ ನಿನ್ನ ಪಕ್ಷ ಹಿಡಿಯುತ್ತೇನಲ್ಲದೆ ಅಣ್ಣಯ್ಯನ ಪಕ್ಷ ಸೇರುವುದಿಲ್ಲ."

"ಹಾಗಾದರೆ ನನ್ನದೇನು ತಪ್ಪು?"

"ನಿನ್ನ ತಪ್ಪು ನಾನು ತೋರಿಸಿಕೊಟ್ಟರೆ ಒಪ್ಪಿಕೊಳ್ಳುವೆಯಾ?"

"ಆಗಲಿ ತೋರಿಸು."

"ನಾನು ಒಂದೆರಡು ವಿಷಯ ಹೇಳಬೇಕಾಗಿದೆ. ನಿನಗೆ ಸಮಾ ಧಾನ ಹೇಳಲು ಸುಳ್ಳಿನ ಮಾಲೆ ನೇಯುತ್ತಿದ್ದೇನೆಂದು ನೀನು ಭಾವಿಸ ಬಾರದು. ನಾನು ಹೇಳುವ ಮಾತುಗಳಲ್ಲಿ ಎಳ್ಳುಕಾಳಷ್ಟೂ ಸಟೆಯಿಲ್ಲ."

"ನೀನು ಸುಳ್ಳು ಹೇಳುವವನಲ್ಲ ಎಂದು ನನಗೆ ನಂಬಿಕೆ ಇದೆ."

"ಹಾಗಾದರೆ ನನ್ನ ಕೆಲಸ ಹಗುರವಾಗುತ್ತದೆ. ಈಗ ನಾಲ್ಕೈದು ದಿವಸಗಳ ಕೆಳಗೆ ನಾನು ಅಣ್ಣಯ್ಯ ಗದ್ದೆಯ ಕಡೆ ಹೋದೆವು, ಜ್ಞಾಪಕ ವಿದೆಯೇ?"

"ಇದೆ. ನಿನ್ನ ಮರುಳುಮಾಡಿ ತಮ್ಮ ಕಡೆ ಸೇರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆಂದು ಭಾವಿಸಿದೆ."

"ಅವನು ಅಂಥ ಪ್ರಯತ್ನ ಮಾಡಲಿಲ್ಲ ಅತ್ತಿಗೆ."

"ಮುಂದಕ್ಕೆ ಹೇಳು."

"ಹೊಲ ಗದ್ದೆಗಳನ್ನು ತೋರಿಸುತ್ತಾ, ತಾನು ಕರ್ತವ್ಯ ವಿಮುಖನಾಗಿಲ್ಲವೆಂಬುದನ್ನು ಪರ್ಯಾಯವಾಗಿ ಸೂಚಿಸಿದ. ಲೋಕಾಭಿರಾಮವಾಗಿ ಮಾತು ಹೊರಟರೂ ಪ್ರತಿಶಬ್ದವೂ ಅವನ ಒಳತೋಟಿಯನ್ನೇ ಬಯಲು ಮಾಡುತ್ತಿತ್ತು."

"ಹಾಗೆಂದರೇನು ಶಂಕರ?"

"ನಮ್ಮ ಸಂಭಾಷಣೆಯನ್ನೇ ವರದಿ ಮಾಡುತ್ತೇನೆ. ದೇವರು ಧರ್ಮ, ಸಾತ್ವಿಕ ಜೀವನದ ಬಗ್ಗೆ ಮಾತು ಹೊರಟಿತು. ನನ್ನ ಗುರುಗಳು ಶ್ರೀ ಶಾಸ್ತ್ರಿಗಳ ಬಗ್ಗೆ ಹೆಚ್ಚು ತಿಳಿಯಲು ಆಸಕ್ತನಾದ. ನಾನೂ, ಉತ್ಸಾಹಗೊಂಡು ಎಲ್ಲವನ್ನೂ ಕೂಲಂಕಷವಾಗಿ ವಿವರಿಸಿದೆ.—

'ಅವರಲ್ಲಿ ನಿನಗಿಷ್ಟು ಭಕ್ತಿ ಹುಟ್ಟಲೇನು ಕಾರಣ ಶಂಕರ' ಎಂದು ಕೇಳಿದ.

'ಅವರ ವ್ಯಕ್ತಿತ್ವ.' ಎಂದು ಉತ್ತರವಿತ್ತೆ.

'ಅವರು ದೊಡ್ಡ ಪಂಡಿತರೆಂದು ಗೌರವಿಸುವೆಯಾ?'

'ಅದಕ್ಕೂ ಗೌರವಿಸುತ್ತೇನೆ. ಅದಕ್ಕಿಂತ ಹೆಚ್ಚಾಗಿ ಅವರಲ್ಲಿ ಮೂರ್ತೀಭವಿಸಿರುವ ಆತ್ಮಶಾಂತಿಗಾಗಿ ಗೌರವಿಸುತ್ತೇನೆ.'

'ಆತ್ಮಶಾಂತಿಯೆಂದರೇನು?'

'ಬಯಕೆಗಳೇ ಜೀವನದ ತೊಳಲಾಟಕ್ಕೆ ಕಾರಣ. ಕಾಮಿನಿ ಕಾಂಚನ, ಕೀರ್ತಿ, ಪದವಿ ಬೇಕೆಂದು ಮನುಷ್ಯ ಸದಾ ಹಾತೊರೆಯುತ್ತಾನೆ. ಅವು ದೊರೆತರೆ ಹೆಚ್ಚು ದೊರೆಯಲಿಲ್ಲವೆಂದು ಅತೃಪ್ತನಾಗುತ್ತಾನೆ. ದೊರೆಯದೆ ಹೋದರೆ ಅಸಂತುಷ್ಟನಾಗುತ್ತಾನೆ. ಈ ಬಗೆಯ ಬಯಕೆಗಳನ್ನು ದೂರವಿಟ್ಟು ತನ್ನ ನಿರ್ದಿಷ್ಟ ಗುರಿಯನ್ನೇ ಯಾವನು ಅರಸಿಕೊಂಡು ಹೋಗುತ್ತಾನೋ ಅವನಿಗೆ ಆತ್ಮಶಾಂತಿ ಲಭಿಸುತ್ತದೆ.'

'ನೀನು ಹೇಳುವುದು ಅಭಾವ ವೈರಾಗ್ಯವಾಯಿತು.'

'ಅಲ್ಲ—ಅದು ಸ್ವಭಾವ ವೈರಾಗ್ಯ. ಬಯಸಿದ ವಸ್ತು ದೊರೆಯುವು ದಿಲ್ಲವೆಂದು ಅವನು ಅದನ್ನು ನಿರಾಕರಿಸುವುದಿಲ್ಲ, ದೊರೆತರೆ ನಿರಾಕರಿಸು ತ್ತಾನೆ—ಮಾಣಿಕ್ಯದ ಒಡೆಯ ಗಾಜಿನ ಚೂರನ್ನು ನಿರಾಕರಿಸುವಂತೆ!'

'ಶಾಸ್ತ್ರಿಗಳಿಗೆ ಈ ಆತ್ಮಶಾಂತಿ ಹೇಗೆ ಲಭಿಸಿತೆಂದು ಹೇಳ ಬಲ್ಲೆಯಾ?'

'ಪ್ರಯತ್ನಮಾಡಿ ನೋಡುತ್ತೇನೆ. ಅವರದು ದೊಡ್ಡ ಸಂಸಾರ. ತೃಪ್ತ ಜೀವನ. ಅವರ ಸಂಪಾದನೆ ಎಷ್ಟೋ ಬಾರಿ ಮನೆಯ ಖರ್ಚು ಪೂರೈಸುವುದಿಲ್ಲ. ಆ ದಿನಗಳಲ್ಲಿಯೂ ಅವರ ಮುಖ ಗೆಲುವಾಗಿಯೇ ಇರುತ್ತದೆ. ಕಾಫಿಪುಡಿ, ಸಕ್ಕರೆ ತರಲು ಕೈಯಲ್ಲಿ ಹಣವಿಲ್ಲದಿದ್ದರೆ ಮನೆಯಲ್ಲಿ ಬೆಲ್ಲದ ಪಾನಕ ಮಾಡಿಸಿ ಅಷ್ಟೇ ಸಂತೋಷವಾಗಿ ಕುಡಿಯು ತ್ತಾರೆ.'

'ನಾನೂ ದುರಾಶೆಗೊಳಗಾಗಿ ಕಂಡವರ ಆಸ್ತಿಯನ್ನು ಬಾಚಿಕೊ ಳ್ಳುವ ಪ್ರಯತ್ನ ಮಾಡಿಲ್ಲವಲ್ಲ.'

'ಹಾಗಾದರೆ ನಿನಗೂ ಆತ್ಮಶಾಂತಿ ಇದ್ದೇ ಇರಬೇಕು.'

'ನೀನೂ ಹಾಸ್ಯ ಮಾಡುವೆಯಾ ಶಂಕರ.'

'ನಿನಗೆ ಶಾಂತಿಯಿಲ್ಲವೆಂದು ಬಲ್ಲೆ—ಶಾಂತಿಭಂಗ ಏಕಾಯಿತೆಂದು ನೀನೇ ಯೋಚಿಸಬೇಕು.'

'ಮನೆಯಲ್ಲಿ ಯಾರೂ ನನ್ನನ್ನು ಅರ್ಥಮಾಡಿಕೊಳ್ಳುವುದಿಲ್ಲ.'

'ನೀನು ಅವರಿಗೆ ಅವಕಾಶ ಕೊಟ್ಟಿಲ್ಲ.'

'ಆ ಮಾತು ನಾನು ಒಪ್ಪಲಾರೆ. ಗೌರಿಯೂ ನನ್ನನ್ನು ಪಾಪಿ ಎಂದು ತಿಳಿದಿದ್ದಾಳೆ.'

'ಅತ್ತಿಗೆ ಎಂದಿಗೂ ಹಾಗೆ ತಿಳಿಯುವುದಿಲ್ಲ ಸುಬ್ಬಣ್ಣ.'

'ನಾನು ಆಕ್ಷೇಪಿಸುತ್ತಿಲ್ಲ. ಪ್ರಾಯಶಃ ಅವಳ ಸ್ಥಾನದಲ್ಲಿ ನಾನಿ ದ್ದಿದ್ದರೆ ನಾನೂ ಹಾಗೆಯೇ ಆಡುತ್ತಿದ್ದೆ. ಆದರೆ ತಾಳ್ಮೆಗೆಟ್ಟು ಅಲಾಬಿ ಹಬ್ಬದ ಹುಲಿಯ ಹಾಗೆ ಆಡಿದರೆ ಏನು ಪ್ರಯೋಜನ?'

'ಹೆಣ್ಣಿನ ಮನಸ್ಸು ಭಾವನೆಗಳ ಮುದ್ದೆ. ಗಂಡು ವಿಚಾರ ಮಾಡು ವಷ್ಟು ಆಳವಾಗಿ ಹೆಣ್ಣು ವಿಚಾರ ಮಾಡಲಾರದು. ಹೆಣ್ಣಿನ ಪ್ರಪಂಚ

ವೆಲ್ಲಾ ಸಂಸಾರದಲ್ಲಿ ಮುಗಿದುಹೋಗುತ್ತದೆ. ಮನೆಯ ಹಿತ ಗೌರವವನ್ನು ಕುರಿತು ಹೆಣ್ಣು ವಿಚಾರ ಮಾಡುವಷ್ಟು ಕೂಲಂಕಷವಾಗಿ ಗಂಡು ವಿಚಾರ ಮಾಡಲಾರ. ಅವನ ಕ್ಷೇತ್ರ ದೊಡ್ಡದು. ಅವನ ಅನಂತ ಆಸಕ್ತಿಗಳಲ್ಲಿ ಮನೆಯೂ ಒಂದು. ಹೆಣ್ಣಿಗಿರುವುದೊಂದೇ ಕ್ಷೇತ್ರ ಮನೆ—ಒಂದೇ ಆಸಕ್ತಿ ತನ್ನ ಗಂಡ, ಮಕ್ಕಳು. ಹೆಣ್ಣಿನ ಈ ಇತಿಮಿತಿಯಲ್ಲಿಯೇ ಜೀವನ ರಹಸ್ಯ ಹುದುಗಿದೆ. ಹೆಣ್ಣಿನ ಪರಿಪೂರ್ಣ ಲಕ್ಷ್ಯ ಆಸಕ್ತಿ ಇಲ್ಲದಿದ್ದರೆ ಮನೆ ಬೆಳೆಯುವುದು ಸಾಧ್ಯವೇ? ಆ ತನ್ನ ಆದರ್ಶ ಸಾಧನೆಗಾಗಿ ಅವಳು ಮಾಡುವ ತ್ಯಾಗಕ್ಕೆ ಸರಿಹೋಲುವಂಥದು ಜಗತ್ತಿನಲ್ಲಿ ಬೇರೆ ಯಾವುದಾದರೂ ಇದೆಯೇ?'

'ನಿಜ ಶಂಕರ. ಈಚೆಗೆ ಗೌರಿ ಅಸಹನೆ, ಅನಾವಶ್ಯಕ ಉದ್ವೇಗ ತೋರುತ್ತಿದ್ದಾಳೆಂದಷ್ಟೇ ನನ್ನ ಆಕ್ಷೇಪಣೆ. ಅವಳ ಕರುಣಾರ್ದ್ರ ಪ್ರಾರ್ಥನೆ ನನ್ನ ಕರುಳು ಸುಡುತ್ತದೆ. ಅವಳಿಗೆ ನಾನು ಅನ್ಯಾಯ ಮಾಡುತ್ತಿರುವೆನೆಂಬ ಅರಿವು ನನಗಿಲ್ಲದಿಲ್ಲ. ಯಾವುದೋ ಹುಚ್ಚು ಹೊಳೆಗೆ ನನ್ನ ದೇಹ, ಮನಸ್ಸುಗಳನ್ನೊಪ್ಪಿಸಿರುವೆನೆಂಬ ತಪ್ಪು ಭಾವನೆ ಅವಳ ಮನಸ್ಸಿನಲ್ಲಿ ಮೂಡಿಬಿಟ್ಟಿದೆ. ಅದನ್ನವಳು ಕಿತ್ತೆಸೆಯುವವರೆಗೂ ಯಾರಿಗೂ ನೆಮ್ಮದಿಯಿಲ್ಲ, ಶಾಂತಿಯಿಲ್ಲ, ಸುಖವಿಲ್ಲ.'

'ಆ ಭಾವನೆ ತಳೆದು, ಅದನ್ನೇ ಪೋಷಿಸುವುದರಿಂದ ಅತ್ತಿಗೆಗೆ ಸುಖವಿದೆಯೇ?'

'ಇಲ್ಲವೆಂದು ತಿಳಿದಿದ್ದೆ. ಈಚಿನ ಅವಳ ವರ್ತನೆ ನೋಡಿ ಹುತಾತ್ಮಪಟ್ಟಕ್ಕಾಗಿ ಅವಳು ಹಾತೊರೆಯುತ್ತಿರುವಳೇನೋ ಎಂಬ ಸಂಶಯ ಹುಟ್ಟಿದೆ.'

'ನಿನ್ನ ವಿಚಾರ ಲಹರಿ ವಿಚಿತ್ರವಾಗಿದೆ.'

'ಹೆಣ್ಣು ಮಮತಾಮಯಿಯಲ್ಲವೇ?'

'ಹೌದು.'

'ಅವಳಲ್ಲಿ ಮಾತೃ ಅಂಶವೇ ಪ್ರಧಾನವಲ್ಲವೇ?'

'ಹೌದು.'

'ಹೆಂಡತಿ ಗಂಡನನ್ನು ತನ್ನ ಮೊದಲನೆಯ ಮಗನೆಂದು ಭಾವಿಸ

ಬೇಕು—ಹೀಗೆಂದು ವೇದ ಹೇಳಿದೆ ಎಂದು ಜೋಯಿಸರು ಒಮ್ಮೆ ಹೇಳಿದ್ದರು.'

'ಹೌದು—ವೇದ ಹಾಗೆ ನುಡಿದಿದೆ.'

'ಗಂಡ ತಪ್ಪುಹಾದಿಯನ್ನೇ ಹಿಡಿದಿದ್ದಾನೆಂದು ಭಾವಿಸಿಕೊಳ್ಳೋಣ. ಒಲವಿನಿಂದ ಹೆಂಡತಿ ಅವನನ್ನು ತಿದ್ದದಿದ್ದರೆ ಮತ್ತೆ ಯಾರು ತಿದ್ದಲು ಸಾಧ್ಯ? ಒಲವು ಮಾಡಬಲ್ಲ ಕೆಲಸವನ್ನು ಕೋಪ ರೋಷಗಳು ಮಾಡ ಬಲ್ಲವೇ?'

'ಮಾಡಲಾರದು. ಆದರೆ ಹೆಣ್ಣೂ ಮಾನವಿಯಲ್ಲವೆ? ಅವಳಿಗೂ ರಾಗದ್ವೇಷಗಳು, ಕೋಪತಾಪಗಳು, ಸುಖದುಃಖಗಳು ಇರುವುದಿಲ್ಲವೇ? ಅನುಭವದಲ್ಲಿ ಹಿರಿಯನಾದ ಗಂಡು ಹೆಣ್ಣಿಗೇಕೆ ಸ್ವಲ್ಪ ಸೋತು ನಡೆಯಬಾರದು?'

'ನಿನಗೆ ಲೋಕಾನುಭವವಿಲ್ಲವೆನ್ನುವುದು ಸ್ಪಷ್ಟವಾಗುತ್ತದೆ ಶಂಕರ. ತನಗೆ ಸೋಲುವ ಗಂಡನ್ನು, ತನ್ನ ಇಚ್ಛೆಗೆ ಅಡಿಯಾಳಾಗಿ ಬಾಳುವ ಗಂಡನ್ನು, ತನ್ನ ವಿಶ್ವಾಸವನ್ನು ಯಾಚಿಸುವ ಗಂಡನ್ನು ಹೆಣ್ಣು ಎಂದಿಗೂ ಗೌರವಿಸುವುದಿಲ್ಲ—ಪ್ರೀತಿಸುವುದಿಲ್ಲ. ಪರಂಪರಾಗತವಾಗಿ ಬಂದಿರುವ ರೂಕ್ಷತೆ ಗಂಡಿಗಿಂತ ಹೆಣ್ಣಿನಲ್ಲಿ ಹೆಚ್ಚು ಜೀವಂತವಾಗಿದೆ. ನಾಗರಿಕತೆ ಗಂಡಿನ ಮನಸ್ಸಿಗೆ ಸಾಣೆ ಕೊಟ್ಟಿದೆ—ಹೆಣ್ಣನ್ನು ಸ್ಪರ್ಶಿಸಲೂ ಸಾಧ್ಯವಾಗಿಲ್ಲ.'

'ದಂಡ ಹಿಡಿದೇ ಆಳಬೇಕು ಎನ್ನುವ ವಾದವನ್ನೇ ನೀನು ಸಮರ್ಥಿಸುತ್ತಿರುವೆ.'

'ಆ ವಾದದಲ್ಲಿ ತುಂಬ ಸತ್ಯವಿದೆ ಶಂಕರ.'

—ಮುಂದೆ ನಾನು ಅವನ ಜತೆ ವಾದಮಾಡಲಿಲ್ಲ."

"ನೋಡಿದೆಯಾಪ್ಪಾ, ಇನ್ನು ಮೇಲೆ ದಂಡ ಧರಿಸ ಬೇಕಾಗುತ್ತದೆ, ಎಂದವರು ಸ್ಪಷ್ಟವಾಗಿ ಹೇಳಿದ್ದಾರೆ."

"ತಾತ್ವಿಕವಾಗಿ ಅವನು ಹೇಳಿದ ಮಾತಿಗೆ ವಿಪರೀತಾರ್ಥ ಕಲ್ಪನೆ ಮಾಡಬಾರದು ಅತ್ತಿಗೆ."

"ಗಂಡಸರು ನೀವೆಲ್ಲಾ ಒಂದೇ ಶಂಕರ. ಹೆಣ್ಣಿನ ಮನಸ್ಸು ನಿಮಗೆ ಅರ್ಥವಾಗುವುದಿಲ್ಲ."

ಎಂದು ಗೌರಿ ನಿಷ್ಠುರವಾಗಿ ನುಡಿದಳು.

ಶಂಕರನ ಹೂ ಮನಸ್ಸಿಗೆ ಕೊಳ್ಳಿಯಿಟ್ಟಂತಾಯಿತು. ಅಲ್ಲಿಂದೆದ್ದು ಬಂದು ತನ್ನ ಕೋಣೆಯಲ್ಲಿ ಕುಳಿತ.

ದುಃಖತಪ್ತವಾಗಿದ್ದ ಶಂಕರನ ಹೃದಯಕ್ಕೆ ಶಾಂತಿ ನೀಡಲು ಅರುಣಚ್ಛಾಯೆ ಕಿಟಕಿಯಿಂದ ಒಳನುಗ್ಗಿತು. ಭಾಸ್ಕರನ ಹರಿಕಾರ ಸುವರ್ಣ ಕಿರಣಗಳನ್ನು ಚೆಲ್ಲುತ್ತ ಹೊರಟಿದ್ದ. ಪ್ರಕೃತಿಯಲ್ಲಿದ್ದ ಆ ಚೆಲುವು ಚಿರಂತನವಾಗಿ ಮಾನವ ಹೃದಯದಲ್ಲಿ ಬೆಳಗಬಾರದೇಕೆ, ಎಂದು ಶಂಕರನ ಅಂತರಂಗ ಕೇಳಿತು.

# ೧೬

ಬೇಸಿಗೆಯ ರಜವನ್ನೆಲ್ಲಾ ತಾವರೆಕೆರೆಯಲ್ಲಿ ಕಳೆಯುವ ಯೋಚನೆಯನ್ನು ಶಂಕರ ದೂರ ಮಾಡಿದ.

ಕೃಷ್ಣರಾಜನಗರಕ್ಕೆ ಬರಬೇಕೆಂದು ಶ್ರೀಧರನಿಂದ ಕಾಗದಗಳು ಬರುತ್ತಲೇ ಇದ್ದುವು.

ನಾಲ್ಕು ವಾರ ಊರಿನಲ್ಲಿ—ಮನೆಯಲ್ಲಿ ಕಳೆಯುವಲ್ಲಿ ಶಂಕರನಿಗೆ ಸಾಕುಸಾಕಾಗಿಹೋಯಿತು. ತನ್ನಿಂದ ಯಾರಿಗೂ ಪ್ರಯೋಜನವಿಲ್ಲ ವೆಂಬ ಅರಿವಿನೊಂದಿಗೆ, ಮನೆಯ ರುದ್ರ ವಾತಾವರಣದ ಸಹಿಸಲಾಗದ ಸಂಕಟ.

ಕೃಷ್ಣರಾಜನಗರಕ್ಕೆ ಹೋಗಿ ಒಂದೆರಡು ವಾರ ಶ್ರೀಧರನೊಂದಿಗಿದ್ದು, ಮೈಸೂರಿಗೆ ಹೋಗುವುದೆಂದು ಶಂಕರ ನಿರ್ಧರಿಸಿದ.

ಶಂಕರನ ನಿರ್ಧಾರ ಕೇಳಿ ಪಾರ್ವತಮ್ಮನವರು ಮಮ್ಮಲ ಮರುಗಿದರು.

"ಇಷ್ಟು ದೊಡ್ಡ ಮನೆಯಲ್ಲಿ ನಿನಗೆ ಸ್ಥಳವಿಲ್ಲವಾಯಿತೇ ಶಂಕ್ರೂ" ಎಂದರು.

"ಸ್ಥಳವಿಲ್ಲವೆಂದರೇನಮ್ಮ—ಮನೆಯೆಲ್ಲಾ ನನ್ನದೇ ಆಗಿದೆ."

"ಬೇಸಿಗೆ ರಜಾ ಇನ್ನೂ ಇದೆಯಲ್ಲ!"

"ಇದೆ. ಶ್ರೀಧರನ ಊರಿಗೆ ಬರುತ್ತೇನೆಂದು ಹೇಳಿದ್ದೇನೆ. ನಾನು ಹೋಗದಿದ್ದರೆ ಅವನಿಗೆ ಬಹಳ ಅಸಮಾಧಾನವಾಗುತ್ತದೆ."

"ಅವನ ಊರಿನಲ್ಲಿ ಸ್ವಲ್ಪ ದಿನವಿದ್ದು, ಅವನನ್ನೂ ಕರೆದುಕೊಂಡು ಇಲ್ಲಿಗೆ ಬಾ."

"ಇಲ್ಲಮ್ಮ, ಈ ವರ್ಷ ನಾನು ಪರೀಕ್ಷೆಗೆ ಕಟ್ಟಬೇಕಾಗಿದೆ. ಇಂಗ್ಲಿಷ್ ನಾನು ಚೆನ್ನಾಗಿ ಓದಿಕೊಳ್ಳದಿದ್ದರೆ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವುದು ದುಸ್ಸಾಧ್ಯವಾಗುತ್ತದೆ. ಶಾಸ್ತ್ರಿಗಳ ಸಹಾಯದಿಂದ ಉಪನಿಷತ್ತುಗಳನ್ನು ಓದಬೇಕೆಂದು ಆಸೆಯಾಗಿದೆ."

"ನೀನೇನು ಸನ್ಯಾಸಿಯಾಗುವುದಕ್ಕೆ ಸಿದ್ಧತೆಮಾಡಿಕೊಳ್ಳುತ್ತಿರುವೆಯಾ ಶಂಕ್ರೂ?"

"ಯಾಕಮ್ಮಾ ಹಾಗೆ ಕೇಳುತ್ತಿ?"

"ಯಾವಾಗ ನೋಡಿದರೂ ಗೀತೆ, ಉಪನಿಷತ್ತು ಎನ್ನುತ್ತಿರುವೆ. ನಿನ್ನ ಸ್ನೇಹಿತ ಶ್ರೀಧರನೂ ಗೀತೆಗೇ ಗಂಟುಬಿದ್ದಿದ್ದಾನೆ. ವಯಸ್ಸಿನ ಹುಡುಗರು ಚೆನ್ನಾಗಿ ತಿಂದುಕೊಂಡು, ಆಡಿಕೊಂಡಿರುವುದನ್ನು ಬಿಟ್ಟು ವೇದಾಂತ ಓದುವುದೇ ?"

"ತಾಯಿಯ ಅಪ್ಪಣೆ ಪಡೆಯದೆ ಸನ್ಯಾಸ ಸ್ವೀಕರಿಸಬಾರದಂತೆ !"

"ನಿನ್ನ ತಾಯಿ ನಿನಗೆಂದಿಗೂ ಅಪ್ಪಣೆ ಕೊಡುವುದಿಲ್ಲ."

"ಸಂತೋಷ. ತಾಯಿಯ ಮಾತೆನ್ನು ಈ ಮಗ ಮೀರುವುದಿಲ್ಲ."

"ಹೋಗೋ ಶಂಕ್ರೂ—ನೀನೊಬ್ಬ ನನ್ನ ಪ್ರಾಣಕ್ಕೆ...." ಎಂದು ಪಾರ್ವತಮ್ಮನವರು ಬಹು ಪ್ರಯಾಸದಿಂದ ನುಡಿದರು.

ತಾಯಿಯನ್ನು ಹಾಗೂ ಹೀಗೂ ಒಪ್ಪಿಸಿದ್ದಾಗಿತ್ತು. ಕಾಲೇಜ್ ಪಾಠದ ವ್ಯಾಜ ಅವನ ರಕ್ಷಣೆಗೆ ಬಂದಿತ್ತು. ಆದರೆ ನಿಂಗವ್ವನನ್ನೊಪ್ಪಿಸುವುದು ಹೇಗೆಂಬುದೇ ಅವನ ಸಮಸ್ಯೆಯಾಯಿತು.

ಪಾರ್ವತಮ್ಮನವರೇ ಸೂಕ್ಷ್ಮವಾಗಿ ಶಂಕರ ಪ್ರಯಾಣಮಾಡುವ ವಿಷಯವನ್ನು ನಿಂಗವ್ವನಿಗೆ ತಿಳಿಸಿದರು.

"ಇದೇನಪ್ಪಯ್ಯಾ! ಈಗಲೇ ಒಂಟುಬುಟ್ಟಿ?" ಎಂದು ನಿಂಗವ್ವನೇ ಬಂದು ಕೇಳಿದಳು.

"ಹೋಗಬೇಕಾಗಿದೆ ನಿಂಗಜ್ಜಿ. ದೊಡ್ಡ ಕ್ಲಾಸಿಗೆ ಹೋಗುತ್ತೇನೆ–ಪಾಠಗಳು ತುಂಬ ಕಷ್ಟ."

"ಪುಸ್ತ್ಕ ಇಲ್ಲೇ ತರಿಸ್ಕೊಂಡು ಓದು."

"ಗುರುಗಳ ಸಹಾಯವಿಲ್ಲದೆ ಓದುವುದಕ್ಕಾಗುವುದಿಲ್ಲ ನಿಂಗಜ್ಜಿ."

ನಿಂಗವ್ವ ಕ್ಷಣಕಾಲ ಸುಮ್ಮನಿದ್ದು "ಓಗಿ ಬಾ ಅಪ್ಪಯ್ಯ. ಶಿವ ಒಳ್ಳೇದು ಮಾಡಲಿ. ಇಲ್ಲಿ ಯಾವ ಸುಕ ಐತೇಂತ ನೀನಿರಬೇಕು" ಎಂದಳು.

"ಅಮ್ಮನ ಯೋಗಕ್ಷೇಮ ನೀನೇ ನೋಡಿಕೊಳ್ಳಬೇಕು ನಿಂಗಜ್ಜಿ."

"ಅವರು ಯಾರಿಗೂ ತೊಂದ್ರೆ ಕೊಡೋರೇ ಅಲ್ಲ ಸಂಕ್ರಪ್ಪ."

"ಅತ್ತಿಗೆಗೆ ಸಮಾಧಾನ ಹೇಳು—ಸ್ವಲ್ಪ ವಿವೇಕವನ್ನೂ ಹೇಳು. ನನ್ನ ಮಾತುಗಳು ಅವಳಿಗೆ ಅಪಥ್ಯವಾಗಿದೆ."

"ಈ ಅಳ್ಳೀಮುಕ್ಕನ ಮಾತು ಗೌರವ್ವ ಕೇಳಬೇಕಲ್ಲ."

"ನಿನ್ನ ಮಾತು ಎಲ್ಲರೂ ಕೇಳುತ್ತಾರೆ ನಿಂಗಜ್ಜಿ."

"ಸುಬ್ಬಪ್ಪ ಊರ್ನಾಗೇ ಇಲ್ಲ."

"ಹೌದು. ಅವನು ಯಾವಾಗ ಬರುತ್ತಾನೆಯೋ?"

"ಅವನಿಗೆ ಏಳ್ದೀನೇ ಒಂಟೋಗುತ್ತೀಯಾ?"

"ಅವನು ಬರುವ ವರೆಗೆ ನಾನು ಕಾದರೆ, ಹೋಗಲು ಅವನು ಅಪ್ಪಣೆ ಕೊಡುವುದಿಲ್ಲ. ಈಗಲೇ ಜಾರಿಕೊಳ್ಳುವುದು ಒಳ್ಳೆಯದು."

"ಅಣ್ಣಂಗೆ ನಿನ್ನ ಮ್ಯಾಕೆ ಭೊ ಇಸ್ವಾಸ ಇದ್ದಂಗೆ ಮಾತಾಡ್ತೀಯಲ್ಲ ಸಂಕ್ರಪ್ಪ."

"ನಿಜವಾದ ವಿಷಯವನ್ನೇ ಹೇಳಿದೆ. ಸುಬ್ಬಣ್ಣನಂಥ ಅಣ್ಣ ನನಗೆ ಸಿಕ್ಕಿರುವುದು ಪೂರ್ವಾರ್ಜಿತ ಪುಣ್ಯ."

ಶಂಕರನ ಅಭಿಪ್ರಾಯವನ್ನು ನಿಂಗವ್ವ ಒಪ್ಪಿಕೊಳ್ಳದಿದ್ದರೂ, ಮರುನುಡಿಯಲಿಲ್ಲ—ಪ್ರತಿಭಟಿಸಲಿಲ್ಲ.

ರವಿಯನ್ನು ಬಿಟ್ಟು ಹೋಗುವುದೇ ಶಂಕರನಿಗೆ ಕಷ್ಟವಾಯಿತು. ಪ್ರಯಾಣ ಒಂದು ದಿನ ಮುಂದಕ್ಕೆ ತಳ್ಳಿದ. ಈ ಮೋಹವೂ ತಪ್ಪು ಎಂದು ತರ್ಕಿಸಿಕೊಂಡು ಮನಸ್ಸು ಗಟ್ಟಿ ಮಾಡಿಕೊಂಡು ಕೃಷ್ಣರಾಜ ನಗರಕ್ಕೆ ಪ್ರಯಾಣ ಬೆಳಸಿದ.

ಬಸ್‌ಸ್ಟ್ಯಾಂಡಿನಲ್ಲಿ ಶಂಕರನ ಕಣ್ಣುಗಳು ಸುಬ್ಬಣ್ಣನನ್ನರಸಿದುವು.

ಆದರೆ ಅಲ್ಲಿದ್ದವನು ಸುಬ್ಬಣ್ಣನಲ್ಲ—ಶ್ರೀಧರ.

ಶ್ರೀಧರನ ತಾಯಿ, ತಂದೆ ತಮ್ಮ ನಿತ್ಯ ದಾರಿದ್ರ್ಯವನ್ನು ಕ್ಷಣಕಾಲ ಮರೆಯಲು—ಮರೆಸಲು ಪ್ರಯತ್ನಿಸಿದ್ದರು. ಶಂಕರನನ್ನು ಹಾರ್ದಿಕವಾಗಿ ಸ್ವಾಗತಿಸಿ ಅವನಿಗೆ ಷೋಡಶೋಪಚಾರ ಮಾಡಿದರು.

ತನಗೆ ದೊರೆಯುತ್ತಿದ್ದ ಅಳತೆ ಮೀರಿದ ಉಪಚಾರಕ್ಕೆ ಬೇಸತ್ತು ಶಂಕರ ಒಂದು ದಿನ

"ಇದೆಲ್ಲಾ ಏನು ಶ್ರೀಧರ್" ಎಂದು ಕೇಳಿದ.

"ಯಾವುದು?"

"ಈ ಉಪಚಾರ! ನಾನೇನು ಸ್ವರ್ಗದಿಂದ ಇಳಿದು ಬಂದಿರುವೆನೇನು? ನಮ್ಮ ಮನೆಯಲ್ಲಿ ನಿನಗೇನಾದರೂ ಉಪಚಾರ ಮಾಡಿದೆವೇನು? ಇದೂ ನನ್ನ ಮನೆ ಎಂದುಕೊಂಡು ಬಂದೆನಪ್ಪಾ!"

"ನನಗೊಂದು ಉಪಕಾರ ಮಾಡುವೆಯಾ ಶಂಕರ್?"

"ಏನು ಹೇಳು."

"ಇಲ್ಲಿ ನಡೆಯುವ ಉಪಚಾರಕ್ಕೆ ಬೇಸರಪಟ್ಟುಕೊಳ್ಳಬೇಡ. ನೀನು ಬರುವುದನ್ನು ಕೇಳಿದ ನನ್ನ ತಾಯಿ ಹದಿನೈದು ದಿನಗಳಿಂದ ಸಿದ್ಧತೆ ಮಾಡಿಕೊಂಡಿದ್ದಾರೆ. ಶಾಮಿಗೆ ಹೊಸೆದಿಟ್ಟಿದ್ದಾರೆ; ಕಡುಬಿನ ಹಿಟ್ಟು, ಒತ್ತು ಶಾಮಿಗೆ ಹಿಟ್ಟು ಮಾಡಿಟ್ಟುಕೊಂಡಿದ್ದಾರೆ. ಹುರಿಗಾಳು ಮಾಡಿಟ್ಟಿದ್ದಾರೆ. ಹುರುಳಿ ಹಪ್ಪಳ ಮಾಡಿಸಿಟ್ಟಿದ್ದಾರೆ. ನೀನು ಬೇಸರ ಪಟ್ಟುಕೊಂಡರೆ ಅವರು ಕುಸಿದುಹೋಗುತ್ತಾರೆ."

"ಕ್ಷಮಿಸು ಶ್ರೀಧರ್. ಎಂದೆಂದಿಗೂ ಅಂಥ ಘೋರ ಅಪರಾಧ ಮಾಡುವುದಿಲ್ಲ. ಇಲ್ಲಿ ಈ ತಾಯಿಯ ಮನಸ್ಸು ನೊಂದರೆ ಅಲ್ಲಿ—ಆ ತಾಯಿಯ ಮನಸ್ಸೂ ನೋಯುವುದೆಂದರಿಯೆನೆ?"

"ಊರಿನ ವಿಷಯವೇನು?"

"ಏನೆಂದು ಹೇಳಲಿ. ಮನೆ ದುಃಖದ ಹೊಂಡವಾಗಿದೆ."

"ರವಿ ಹೇಗಿದ್ದಾನೆ?"

"ನಾಲ್ಕು ದಿವಸ ಸ್ವಲ್ಪ ಜ್ವರ ಬಂತು—ಈಗ ಚೆನ್ನಾಗಿದ್ದಾನೆ."

"ಮನೆಯೇಕೆ ದುಃಖದ ಹೊಂಡವಾಗಿದೆ?"

"ನನ್ನ ಮನೆಯ ಒಂದು ವಿಷಯ ಈವರೆಗೆ ನಿನಗೆ ಹೇಳದೆ ಮರೆ ಮಾಚಿದೆ ಶ್ರೀಧರ್, ಕ್ಷಮಿಸು."

"ಈಗಲೂ ಹೇಳಬೇಡ ಶಂಕರ್."

"ಇಲ್ಲ–ಹೇಳಲೇಬೇಕು. ನಿನ್ನಲ್ಲಿ ತೋಡಿಕೊಳ್ಳದಿದ್ದರೆ ನನಗೆ ಸ್ವಲ್ಪವೂ ಸಮಾಧಾನವಿಲ್ಲ." ಎಂದು ಸುಬ್ರಹ್ಮಣ್ಯನ ಪ್ರಕರಣವನ್ನು ಕೂಲಂಕಷವಾಗಿ ವರ್ಣಿಸಿದ.

"ಅಣ್ಣ ಅತ್ತಿಗೆ ಮಧ್ಯೆ ಎದ್ದಿರುವ ಈ ದಳ್ಳುರಿ ಹೇಗೆ ಉಪಶಮನ ವಾಗುತ್ತದೋ ಕಾಣೆ" ಎಂದ.

"ನಿನ್ನ ಅಣ್ಣ, ಅತ್ತಿಗೆಗೆ ನೀನು ಹೇಳಿರುವ ಮಾತುಗಳಿಗಿಂತ ತೂಕವಾದ ಮಾತುಗಳನ್ನು ಇನ್ನು ಯಾರೂ ಹೇಳಲಾರರು.—ದಾಸರಿ ಸಂಬಂಧ ಶಾಶ್ವತವಾಗಿ ನಡೆಯುವ ಸಂಬಂಧವಲ್ಲ. ಸ್ವಲ್ಪ ಕಾಲ ಕಳೆದ ಮೇಲೆ ಪರಿಸ್ಥಿತಿ ಹತೋಟಿಗೆ ಬರುತ್ತದೆ."

"ಆ ವೇಳೆಗೆ ಇವರಿಬ್ಬರೂ ಕದನವಾಡಿ ಶತ್ರುಗಳಾಗಿಬಿಡುತ್ತಾರಲ್ಲಾ ಎಂಬುದೇ ನನ್ನ ಭಯ."

"ನಿನ್ನ ಅಣ್ಣಂದಿರು ಅಷ್ಟು ದೂರ ಹೋಗಲಾರರು."

"ಕಾದು ನೋಡೋಣ" ಎಂದು ಶಂಕರ ನಿರುತ್ಸಾಹದಲ್ಲಿ ನುಡಿದ.

ಒಂದು ವಾರ "ಕಮುಕ್ ಕಿಮುಕ್" ಅನ್ನದೆ ಶಂಕರ ಶ್ರೀಧರನ ಮನೆಯ ಆತಿಥ್ಯವನ್ನು ಅನುಭವಿಸಿದ. ನಿತ್ಯಾತೇಣ ಉಂಡು ಉಂಗು ಅವನಿಗೆ ಕಟ್ಟರೆಯಾಗಿತ್ತು.

ವಾರ ಕಳೆದ ಕೂಡಲೆ ಮೈಸೂರಿಗೆ ಹೊರಡುವ ಸೂಚನೆಯಿತ್ತ. ಶ್ರೀಧರನ ತಾಯಿತಂದೆ ಶಂಕರನನ್ನು ನಾಲ್ಕು ದಿವಸ ಉಳಿಸಿಕೊಳ್ಳಲೆತ್ನಿಸಿ ವಿಫಲರಾದರು. ಶ್ರೀಧರ ಕೇಳಿದ,

"ಮೈಸೂರಿನಲ್ಲಿ ಒಬ್ಬನೇ ಕುಳಿತುಕೊಂಡು ಏನು ಮಾಡುತ್ತೀ?"

"ನೀನೂ ಬರಬಾರದೇಕೆ?"

"ಅಪ್ಪ ಅಮ್ಮ ಸುಮ್ಮನಿರುವರೇ?"

"ರಜಾ ಮುಗಿಯುವ ವರೆಗೂ ನೀನು ಊರೇ ಬಿಡುವುದಿಲ್ಲವೇ?"

"ಇಲ್ಲ. ಮೈಸೂರಿನಲ್ಲಿ ಎಲ್ಲಿರುತ್ತೀ? ಹಾಸ್ಟೆಲುಗಳು ಇನ್ನೂ ತೆರೆದಿರುವುದಿಲ್ಲ."

"ಹಾಸ್ಟೆಲ್ ಬಾಗಿಲು ತೆಗೆಯುವ ವರೆಗೆ 'ಮಾಡರ್ನ್ ಹಿಂದೂ ಹೋಟಲಿ' ನಲ್ಲಿರುತ್ತೇನೆ."

"ನೀನು ಹೋಗಲೇ ಬೇಕೇ?"

"ಹೋಗಲೇ ಬೇಕಾಗಿದೆ. ನಿನ್ನ ರಿಸಲ್ಟ್ ತಿಳಿದು ಕೂಡಲೆ ವೈರ್ ಮಾಡುತ್ತೇನೆ."

"ಆಗಬಹುದು. ನಾರಾಯಣಸ್ವಾಮಿ ಮೈಸೂರಿನಲ್ಲಿ ನಿನಗೆ ಸಿಕ್ಕಬಹುದು."

"ನನ್ನಂಥ ಬಡವನನ್ನು ಅವನು ಕಣ್ಣೆತ್ತಿ ನೋಡುತ್ತಾನೇನಯ್ಯ.

"ನೀನು ಬಡವ ಅಲ್ಲವೆನ್ನುವುದು ಅವನಿಗೆ ಗೊತ್ತಾಗಿದೆ."

"ಈಗ ಮಾತನಾಡಿಸುವನಲ್ಲವೇ ?"

"ಆಡಿಸಬಹುದು."

"ನಾನು ಅವನನ್ನು ಮಾತನಾಡಿಸಲು ಸಿದ್ಧವಾಗಿಲ್ಲ."

"ಹೋಗಲಿ ಬಿಡು."

ಶಂಕರನನ್ನು ಬೀಳ್ಕೊಡಲು ರೈಲ್ವೆ ನಿಲ್ದಾಣಕ್ಕೆ ಶ್ರೀಧರ ಬಂದ. ಶಂಕರ ಅವನ ಕೈ ಹಿಡಿದು,

"ನನ್ನ ಮೇಲೆ ಕೋಪವೇ ಶ್ರೀಧರ್?"

"ಏಕೆ ?"

"ನಿನ್ನ ಮಾತು ನಿರಾಕರಿಸಿ ಹೊರಡುತ್ತಿದ್ದೇನೆಂದು."

"ನನ್ನ ಮಾತು ಗೌರವಿಸಿ ಬಂದೆಯಲ್ಲಾ."

"ರಜಾ ಮುಗಿಯುವ ವರೆಗೂ ಕಾಯಬೇಡ–ಬೇಗ ಬಂದುಬಿಡು."

"ಪ್ರಯತ್ನಿಸುತ್ತೇನೆ—ಶಾಸ್ತ್ರಿಗಳವರಿಗೆ ನನ್ನ ನಮಸ್ಕಾರ ಹೇಳು." ಎನ್ನುತ್ತಿದ್ದಂತೆ ಗಾಡಿ ಪ್ಲಾಟ್‌ಫಾರ್ಮಿಗೆ ಬಂದಿತು.

# ೨೭

ದಾಸರಿ ಕಂಪೆನಿಗೆ ಮಂಡ್ಯದ ಕ್ಯಾಂಪು ಭರ್ಜರಿಯಾಗಿ ನಡೆದಿತ್ತು. ಕ್ಯಾಂಪು ಮುಗಿಸಿಕೊಂಡು ಅವರು ಹಿರೋಡೆಗೆ ಹೋಗುವ ಮುನ್ನ ಊರಿನವರು ಸತ್ಕಾರ ಸಮಾರಂಭ ಮಾಡಿ ಮಂಗಳೆಗೆ, ಪರಮಾನಂದಯ್ಯನಿಗೆ, ಭೀಮಾಚಾರೀಗೆ, ಭಾಷ್ಯಂ ಅಯ್ಯಂಗಾರೀಗೆ, ಸ್ವರ್ಣಪದಕಗಳನ್ನಿತ್ತಿದ್ದರು. ಮೊದಲೇ 'ಗುರಂಘಾತಕ'ನಾದ ಭೀಮಾಚಾರಿಯನ್ನು ಈಗ ಯಾರೂ ಹಿಡಿಯುವವರೇ ಇರಲಿಲ್ಲ.

ಕಂಪೆನಿ ಮ್ಯಾನೇಜ್‌ಮೆಂಟ್ ವಹಿಸಿಕೊಂಡ ಮೇಲೆ ಭೀಮಾಚಾರಿ ವೇಷವೇ ಬದಲಾಯಿಸಿತು. ತಲೆಯ ಮೇಲಿದ್ದ ಪಿಳ್ಳೆಜುಟ್ಟು ಹೋಗಿ ಕ್ರಾಪು ಬಂದಿತು. ಸರಿಗೆ ಪಂಚೆ, ಸಿಲ್ಕ್‌ಷರ್ಟು, ಸರ್ಜ್‌ಕೋಟು, ತಲೆಯ ಮೇಲೆ ಜರತಾರಿ ರುಮಾಲು, ಕೈಯಲ್ಲಿ ಚಿನ್ನದ ಸರಪಳಿ ಹಾಕಿದ ಗಡಿಯಾರ, ಬೆರಳಲ್ಲಿ ವಜ್ರಕೆಂಪಿನ ಎರಡು ಉಂಗುರಗಳು.

ಕ್ಯಾಂಪು ಮಂಡ್ಯದಲ್ಲಿ ನಡೆಯುತ್ತಿದ್ದಾಗ ಸ್ವಂತ ಕೆಲಸದ ಮೇಲೆ ಬಂದಿದ್ದ ಚಿನ್ನಪ್ಪಾಚಾರಿ ನಾಟಕ ನೋಡುವುದಕ್ಕೆ ಬಂದಿದ್ದ. ನಾಟಕ ಮುಗಿದ ಮೇಲೆ ಆಚಾರಿ ಒಬ್ಬನೇ ಇದ್ದಾಗ ಚಿನ್ನಪ್ಪ,

"ನಿನ್ನ ಗುರುತೇ ಸಿಕ್ಕದ ಹಾಗಾಗಿದೆ ಭೀಮಣ್ಣ" ಎಂದ.

"ಯಾಕಯ್ಯಾ?"

"ಮೊದಲಿದ್ದ ಜೋಬದ್ರ ಕಳೆ ಹೋಗಿ ಈಗ ಲಕ್ಷ್ಮೀ ಕಳೆ ಬಂದು ಬಿಟ್ಟಿದೆ."

"ಲಕ್ಷ್ಮೀ ತಾಂಡವವಾಡುತ್ತಿರುವಾಗ ಲಕ್ಷ್ಮೀಕಳೆ ಬರದೆ ಇರುತ್ತದೆಯೇ ಚಿನ್ನಪ್ಪ?"

"ತಾಂಡವವಾಡುತ್ತಿರುವವಳು ಲಕ್ಷ್ಮಿಯಲ್ಲ, ಮಂಗಳೆ."

"ಪರವಾಗಿಲ್ಲ ಆಚಾರಿ— ನೀನೂ ರಸಿಕನಾದೆ!"

"ನಿನ್ನ ಶಿಷ್ಯನಾದ ಮೇಲೆ ರಸಿಕನಾಗದಿದ್ದರೆ ಗುರುದ್ರೋಹ ಮಾಡಿದಂತಾಗುವುದಿಲ್ಲವೇ?"

"ಪರಮ ಗುರುಭಕ್ತ! ನಿನ್ನಂಥ ಶಿಷ್ಯರಿದ್ದರೆ ಗುರುಗಳ ಅವಸ್ಥೆ ಮುಗಿದೇ ಹೋಗುತ್ತದೆ."

"ನಾನೇನಯ್ಯಾ ನಿನಗೆ ಅನ್ಯಾಯ ಮಾಡಿರುವುದು."

"ಈಚೆಗೆ ಗುರುಕಾಣಿಕೆ ಒಂದು ದುಗ್ಗಾಣಿ ಕೊಟ್ಟಿದ್ದೀಯಾ ?"

"ಈಗ ಗುರುವೇ ಶಿಷ್ಯನಿಗೆ ಕೊಡಲು ಸಮರ್ಥನಾಗಿದ್ದಾನೆ—ನಿಜ ಹೇಳು, ಭೀಮಣ್ಣ—ಕಂಪೆನಿಯಲ್ಲಿ ಎಷ್ಟು ಗಿಟ್ಟಿಸಿದ್ದೀ?"

"ಗಿಟ್ಟಿಸುವುದೆಲ್ಲಿಂದ ಬಂತು ಚಿನ್ನಪ್ಪ. ಸಂಪಾದನೆ ಚೆನ್ನಾಗಿದೆ. ಐದು ನೂರಕ್ಕೆ ಕಮ್ಮಿ ಕಲೆಕ್ಷನ್ನೇ ಆಗಿಲ್ಲ. ಆದರೂ ಖರ್ಚೂ ಹಾಗೇ ಇದೆ. ಈ ಆಕ್ಟರುಗಳನ್ನು ಸಾಕುವುದೂ ರಾಕ್ಷಸರನ್ನು ಸಾಕುವುದೂ ಎರಡೂ ಒಂದೇ........ಮಕ್ಕಳ ಪೀಡೆ ತಪ್ಪಿದ ದಿನವೇ ಇಲ್ಲ."

"ದಾಸರಿ ಚೆನ್ನಾಗಿ ಕಾಸು ಮಾಡಿಕೊಂಡಿರಬೇಕು."

"ನಗದೇನೂ ಹಣ ಮಾಡಿಕೊಂಡಿಲ್ಲ. ಜಯ, ಮಂಗಳಾ ಸ್ವಲ್ಪ ಒಡವೆ ಮಾಡಿಸಿಕೊಂಡಿದ್ದಾರೆ."

"ನನಗೆ ಹೇಳದೇನೆ?"

"ಹೊಳೆ ಕಾಯುವುದಕ್ಕೆ ದೊಣ್ಣೆನಾಯಕನ ಅಪ್ಪಣೆ........"

"ಹಳಬರನ್ನು ಮರೆಯ ಬೇಡಪ್ಪ."

"ನಾಳೆ ಇರುತ್ತೀಯಾ?"

"ಇಲ್ಲಪ್ಪ—ನಾಳೆ ಊರು ಸೇರಲೇ ಬೇಕು. ಮನೆ ಪಿಶಾಚಿ ಬಡ್ಕೊಳ್ಳುತ್ತೆ."

"ಕಂಪೆನಿ ಬಡಾಯಿಸಿ, ಹಿರೋಡೆ ಕ್ಯಾಂಪು ಮುಗಿಸಿಕೊಂಡು ಮೈಸೂರಿಗೋ ಬೆಂಗಳೂರಿಗೋ ಹೋಗಬೇಕೆಂದಿದ್ದೇವೆ."

"ಹೊಡೀ ಭೀಮಣ್ಣ. ನಿನಗೆ ಈಗ ಶುಕ್ರಮಹಾದೆಸೆ."

"ನನ್ನ ದೆಸೆಯಿರಲಿ—ನಿನ್ನ ದೆಸೆ ಹೇಗಿದೆ ಹೇಳು."

"ಏನೂ ಬಿಜಿನೆಸ್ಸೇ ಇಲ್ಲ ಭೀಮಣ್ಣ. ಜನರ ಕೈಲಿ ಕಾಸೇ ಇಲ್ಲ —ಒಡವೆ ಯಾರು ಮಾಡಿಸುತ್ತಾರೆ ಹೇಳು."

"ಕಾಸು ಎಂದರೆ ನಿನಗೆ ಪ್ರಾಣವೇ ಹೋಗುತ್ತಲ್ವೇನೋ ಆಚಾರಿ. ಪೋಲೀಸಿನವರು ಒಬ್ಬರಿಗೇ ನೀನು ಕಾಸು ಬಿಚ್ಚೋದು."

"ನೀನೂ ಹೀಗೇ ಅನ್ನುತ್ತೀಯಲ್ಲಾ ಭೀಮಣ್ಣ. ನಿನಗೇ ಎಷ್ಟು ಕೊಟ್ಟಿದ್ದೀನೆ ಯೋಚನೆ ಮಾಡು."

"ಬಹಳ ಕೊಟ್ಟಿದ್ದೀ—ಅದಿರಲಿ, ಈಗ ಕಂಪೆನಿ ಬಡಾಯಿಸ್ಬೇಕು ಸ್ವಲ್ಪ ಬಂಡವಾಳ ಹಾಕುತ್ತೀಯೇನು? ಶೇಕಡ ಆರರ ಹಾಗೆ ಬಡ್ಡೀ ತೆಗೆದುಕೋ."

"ಎಷ್ಟು ಬೇಕಾಗುತ್ತೆ?"

"ಐದು ಸಾವಿರ."

"ನಿನ್ನ ಧಣಿ ಸುಬ್ರಹ್ಮಣ್ಯ ಇದ್ದಾನಲ್ಲಾ."

"ಅವನು ಸುಸ್ತಾಗಿದ್ದಾನೆ. ಮನೆಯಲ್ಲಿ ಅವನಿಗೆ ಮೊಹರಂ ಷುರುವಾಗಿದೆ."

"ಮಂಗಳೆಯನ್ನೇನು ಮಾಡುತ್ತಾನೆ."

"ಬಿಟ್ಟುಬಿಡುತ್ತಾನೆ."

"ಹಾಗೆಂದು ಹೇಳಿದನೇ?"

"ಹೇಳಿದ ಹಾಗೇ. ಈಗ ಕ್ಯಾಂಪಿಗೂ ಮೊದಲಿನಷ್ಟು ಬರುವುದಿಲ್ಲ."

"ತುಂಬ ಹಣ ಸುರಿದನಲ್ಲಯ್ಯ."

"ಎಷ್ಟು ಸುರಿದಿದ್ದಾನೋ ಮಹಾ!—ನೀನೇನು ಮಾಡುತ್ತಿ ಹೇಳು."

"ಹಿರೋಡೆ ಕ್ಯಾಂಪಿನಲ್ಲಿ ಬಂದು ಕಾಣುತ್ತೇನೆ."

"ಹಣ ತಂದರೇ ಫ್ರೀಪಾಸು—ಬರಿಗೈಯಲ್ಲಿ ಬಂದರೆ ಟಿಕೆಟ್ ಕೊಂಡೇ ಒಳಕ್ಕೆ ಬರಬೇಕು. ಭೀಮಾಚಾರಿ ಮ್ಯಾನೇಜ್‌ಮೆಂಟ್ ತುಂಬ ಸ್ಟ್ರಿಕ್ಟು."

"ಸಾಕು ಬಿಡೋ ನಿನ್ನ ಬಡಾಯಿ." ಎಂದ.

ತಾನಾಗಿಯೇ ಒದಗಿ ಬಂದ ಯಜ್ಞಪಶುವನ್ನು ಕಂಡು ಭೀಮಾಚಾರೀಗೆ ಆದ ಸಂತೋಷ ಅಷ್ಟಿಷ್ಟಲ್ಲ.

"ನೀನು ಹಿರೋಡೆಗೆ ಬರುವ ಮೊದಲು ಒಂದು ಕಾಗದ ಬರಿ ಚಿನ್ನಪ್ಪ."

"ಯಾಕೆ?".

"ಯಾಕೆ, ಏನು—ಒಳ್ಳೆಯ ಪಂಚಾಯಿತಿ. ಮೊದಲೇ ನೀನು ಬರೆದು ತಿಳಿಸಿದರೆ ನಾಟಕಕ್ಕೆ ನಿನ್ನನ್ನೇ ಅಧ್ಯಕ್ಷನನ್ನಾಗಿ ಮಾಡಿ, ನಿನ್ನ ಕೊರಳಿಗೆ ಹೊರಲಾರದ ಹಾರ ಹಾಕಿಸುತ್ತೇನೆ."

ಚಿನ್ನಪ್ಪನಿಗೆ ಸ್ವರ್ಗ ಒಂದೇ ಗೇಣು ದೂರದಲ್ಲಿ ಉಳಿಯಿತು.

'ಶ್ರೀ ಮಂಗಳಾಂಬಾ ಪ್ರಾಸಾದಿಕ ನಾಟಕ ಮಂಡಳಿ' ಜನ್ಮತಾಳಿದ ಮೇಲೆ ಪರಮಾನಂದಯ್ಯನನ್ನು ಗುರುತಿಸುವುದೇ ಕಷ್ಟವಾಯಿತು. ಪರಮಾನಂದಯ್ಯನ ಸತತ ಪ್ರಯತ್ನದಿಂದಲೇ ಕಂಪೆನಿ ರೂಪಗೊಂಡಿತ್ತು. ಅದೃಷ್ಟವಶಾತ್ ಮೊದಲನೆಯ ಕ್ಯಾಂಪು ಫಲಕಾರಿಯಾಗಿತ್ತು. ಪರಮಾನಂದಯ್ಯ ಗೌರೀಶಂಕರದ ಕೋಡುಗಲ್ಲಿನ ಮೇಲೆ ಸ್ವರ್ಣಸಿಂಹಾಸನ ಹಾಕಿಕೊಂಡು ಕುಳಿತುಕೊಂಡ. ಅವನ ವೇಷ ಭೂಷಣಗಳು ಬದಲಾಯಿಸಿದುದಲ್ಲದೆ ಆಚಾರ ವಿಚಾರಗಳೂ ಬದಲಾದುವು. ಎಲ್ಲರಿಂದಲೂ "ಯಜಮಾನರು—ಯಜಮಾನರು" ಎಂದು ಕರೆಸಿಕೊಂಡು ಪರಮಾನಂದಯ್ಯ ಕಂಪೆನಿಯ ಯಜಮಾನನೇ ಆಗಿಬಿಟ್ಟಿದ್ದ. ಮಂಗಳೆ ಕಂಪೆನಿಯ ಅಸ್ತಿಭಾರವಾಗಿದ್ದಳು.—ಪರಮಾನಂದಯ್ಯ ಮಂಗಳೆಯ ತಂದೆ. ಅವನ ಅಧಿಕಾರಕ್ಕೆ ಇತಿಮಿತಿಯುಂಟೇ?

ಆದರೆ ಪರಮಾನಂದಯ್ಯನನ್ನು ಪ್ರಬಲವಾದೊಂದು ಕೊರಗು ಬಾಧಿಸುತ್ತಿತ್ತು. ಭೀಮಾಚಾರಿ ಎದುರಿನಲ್ಲಿ ಅವನ ಆಟವೇನೂ ಸಾಗುತ್ತಿರಲಿಲ್ಲ. ಸರ್ವಾಧಿಕಾರಿಯಾಗಿದ್ದ ಭೀಮಾಚಾರಿ ತನ್ನ ಅಧಿಕಾರಕ್ಕೆ ಸ್ವಲ್ಪವೂ ಚ್ಯುತಿ ಬರದಂತೆ ಸದಾ ಜಾಗರೂಕನಾಗಿರುತ್ತಿದ್ದ. ಈ ಶನಿಯನ್ನು ಏಕೆ ಕಟ್ಟಿಕೊಂಡೆನೋ ಎಂದು ಪರಮಾನಂದಯ್ಯ ಯೋಚಿಸುವನು. ಆದರೆ ಆ 'ಶನಿ'ಯನ್ನು ಕಟ್ಟಿಕೊಳ್ಳದೆ ಮಾರ್ಗವೇ ಇರಲಿಲ್ಲ. ಕಂಪೆನಿಯ ವ್ಯವಸ್ಥೆ, ಅಧಿಕಾರಿಗಳನ್ನು ಬುಟ್ಟಿಗೆ ಹಾಕಿಕೊಳ್ಳುವುದು, ಪೋಲೀಸಿನವರನ್ನು ಕೈ ಹಿಡಿತದಲ್ಲಿಟ್ಟುಕೊಳ್ಳುವುದು, ಪುಂಡರನ್ನೆದುರಿಸುವುದು, ಹೋಟಲಿನವರು, ಬಟ್ಟೆ ಅಂಗಡಿಯವರು, ಲೈಟಿನವರು, ಜಾಡಮಾಲಿಗಳು, ನಟರು ಮೊದಲಾದವರಿಗೆಲ್ಲಾ ಕಾಸು ಕೊಡದೆ ಸಮಾಧಾನ ಹೇಳುವುದು ಭೀಮಾಚಾರಿ ಒಬ್ಬನಿಗೇ ಸಾಧ್ಯವಾಗಿತ್ತು.

ಭೀಮಾಚಾರಿಯನ್ನು ಬಿಡಲೂ ಆಗದೆ, ಕಟ್ಟಿಕೊಳ್ಳಲೂ ಸಾಧ್ಯವಾಗದೆ ಪರಮಾನಂದಯ್ಯ ಹಲುಬುತ್ತಿದ್ದ.

ಮಂಡ್ಯದ ಕ್ಯಾಂಪು ಮುಗಿದ ಮೇಲೆ ಹಿರೋಡೆಯಲ್ಲಿ ಕ್ಯಾಂಪು ಆರಂಭವಾಯಿತು. ಕಂಪೆನಿ ಮಂಡ್ಯದಲ್ಲಿ ಗಳಿಸಿಕೊಂಡಿದ್ದ ಖ್ಯಾತಿ ಹಿರೋಡೆಯಲ್ಲಿಯೂ ಪ್ರಭಾವ ಮೂಡಿತ್ತು. ಊರಿನ ಜನಗಳಲ್ಲದೆ ಸುತ್ತ ಮುತ್ತಲಿನ ಹಳ್ಳಿಗಳ ಜನರೂ ನಾಟಕಗಳಿಗೆ ಕಿಕ್ಕಿರಿದು ತುಂಬುತ್ತಿದ್ದರು.

ಪ್ರತಿ ನಾಟಕಕ್ಕೂ ಎಂಟು ನೂರು ಒಂಭೈನೂರು ರೂಪಾಯಿ ಕಲೆಕ್ಷನ್ ಆಗುತ್ತಿದ್ದರೂ ಭೀಮಾಚಾರಿ ಗೋಣಗಾಟ ತಪ್ಪಿರಲಿಲ್ಲ. 'ಖರ್ಚು ಕೂಡ ಹುಟ್ಟುತ್ತಿಲ್ಲ' ಎನ್ನುವ ಅವನ ಪಲ್ಲವಿಯ ಅಂತರಾರ್ಥ ನಟರಿಗೆ ಗೊತ್ತಾಗಲಿಲ್ಲ; ಪರಮಾನಂದಯ್ಯನಿಗೂ ಅರ್ಥವಾಗಲಿಲ್ಲ.

ಹಿರೋಡೆ ಕ್ಯಾಂಪಿಗೆ ಬಂದ ಸುಬ್ರಹ್ಮಣ್ಯನನ್ನು ಕೂಡಿಸಿಕೊಂಡು ಒಂದು ದಿನ ಭೀಮಾಚಾರಿ ಕಂಪೆನಿಯ ಸ್ಥಿತಿಗತಿಯನ್ನು ವಿವರಿಸುತ್ತಾ

"ಕಂಪೆನಿ ನಡಸೋದು ಏನೋಂತ ಇದ್ದೆ. ಬಹಳ ಕಷ್ಟದ ವಿಷಯ ಸುಬ್ಬಣ್ಣ" ಎಂದ.

"ಕಷ್ಟಪಡದೆ ಸುವರ್ಣವೃಷ್ಟಿಯಾಗುತ್ತದೆಯೇ ಆಚಾರಿ?"

"ಜನ ತುಂಬುವುದು ನೋಡಿ ಸುವರ್ಣವೃಷ್ಟಿಯಾಗುತ್ತಿದೆ ಎಂದು ತಿಳಿದುಕೊಂಡಿರುವೆಯೇನೋ! "

"ಕಲೆಕ್ಷನ್ ಚೆನ್ನಾಗಿಯೇ ಇದೆಯಲ್ಲ."

"ನಷ್ಟವೇನೂ ಆಗಿಲ್ಲ. ಆದಾಯ ಖರ್ಚು ತೂಗುತ್ತಿದೆ. ಆದರೆ ಈ ಸ್ಥಿತಿಯಲ್ಲಿ ನಾವು ಮೈಸೂರು, ಬೆಂಗಳೂರಿಗೆ ಹೋಗುವುದು ಹೇಗೆ ಸುಬ್ಬಣ್ಣ."

"ಅದಕ್ಕೇನು ಮಾಡಬೇಕು ?"

"ಸ್ತ್ರೀಪಾರ್ಟು ಮಾಡುವವರು ಇನ್ನೂ ಕೆಲವರನ್ನು ಸೇರಿಸಿಕೊಳ್ಳಬೇಕು. ಹೊಸ ಬಟ್ಟೆಗಳನ್ನು ಮಾಡಿಸಿಕೊಳ್ಳಬೇಕು. ಹೊಸ ನಾಟಕ ಕೂಡಿಸಿಕೊಳ್ಳಬೇಕು. ಅದಕ್ಕೆ ಬೇಕಾದ ಪರದೆ, ಸೈಡ್‌ವಿಂಗ್ಸ್ ಹೊಂದಿಸಿಕೊಳ್ಳಬೇಕು. ಸ್ವಂತ ಡೈನೆಮೋ, ಲೌಡ್‌ಸ್ಪೀಕರ್ ತೆಗೆದುಕೊಳ್ಳದೆ ಬಾಡಿಗೆ ಪದಾರ್ಥಗಳನ್ನು ಅವಲಂಬಿಸುವುದು ಅಪಾಯಕರ."

"ಇನ್ನೂ ಹತ್ತು ಹದಿನೈದು ಸಾವಿರವಿಲ್ಲದೆ ನಿನ್ನ ತಕ್ಕಡಿ ಮೇಲಕ್ಕೆ ಏಳುವ ಹಾಗೇ ಕಾಣುವುದಿಲ್ಲ."

"ಸದ್ಯಕ್ಕೆ ಅಷ್ಟು ಬೇಕಾಗಿಲ್ಲ ಸುಬ್ಬಣ್ಣ."

"ಆಚಾರಿ, ಈಗಾಗಲೇ ಎಷ್ಟು ಹಣ ನನ್ನ ಕೈ ಬಿಟ್ಟು ಹೋಗಿದೆ ಬಲ್ಲೆಯಾ, ನಿನ್ನ ಕಂಪೆನೀಗೆ?"

"ಬಲ್ಲೆ ಸುಬ್ಬಣ್ಣ."

"ಹತ್ತು ಸಾವಿರ ದಂಡ ಹಾಕಿ ಇನ್ನೂ ಹಣ ಕೊಡು ಎಂದರೆ ನಾನು ಎಲ್ಲಿಂದ ತರಲಯ್ಯಾ."

"ಕಂಪೆನಿ ಕಣ್ಣು ಬಿಡುತ್ತಿರುವಾಗ ಹಣಕ್ಕೆ ಹಿಂದೆ ಮುಂದೆ ನೋಡಿದರೆ ಆಗುತ್ತದೆಯೇ?"

"ಅದಕ್ಕೆ ನಾನೇನು ಮಾಡಬೇಕು."

"ಇನ್ನು ಐದು ಸಾವಿರ ನೀನು ಕೊಟ್ಟುಬಿಡು—ಉಳಿದ ಹಣ ನಾನು ಹೇಗಾದರೂ ಜತೆ ಮಾಡುತ್ತೇನೆ."

"ಇನ್ನು ಬಿಡಿಗಾಸೂ ನಾನು ಕೊಡಲು ಸಾಧ್ಯವಿಲ್ಲ ಆಚಾರಿ. ಮನೆಯಲ್ಲಿ ನನ್ನ ಅವಸ್ಥೆ ಏನಾಗಿದೆಯೆನ್ನುವುದನ್ನು ನೀನು ಕಾಣೆ. ಈ ಸಲ ಶಂಕರ ಊರಿಗೆ ಬಂದವನು ಹೇಳದೆ ಕೇಳದೆ ಹೊರಟು ಹೋದ. ಅಮ್ಮ ಗೌರಿ ಎಲ್ಲರೂ ನನ್ನ ಮೇಲೆ ಗುರುಗುಟ್ಟುತ್ತಿದ್ದಾರೆ."

"ನಿನ್ನ ನಂಬಿದವರ ಕೈ ನೀನೇ ಬಿಟ್ಟರೆ?............"

"ನಾನು ವಾಗ್ದಾನ ಮಾಡಿದುದಕ್ಕಿಂತಲೂ ಹೆಚ್ಚಾಗಿ ಕೊಟ್ಟಿದ್ದೇನೆ."

"ಕೊಟ್ಟಿದ್ದೀ. ಇಲ್ಲವೆಂದು ನಾನು ಹೇಳಲಿಲ್ಲ. ಈಗ ಕಂಪೆನಿ ಊರ್ಜಿತಗೊಳಿಸದಿದ್ದರೆ ನೀನು ಹಾಕಿರುವ ಬಂಡವಾಳವೂ ಹೋಗುವುದಲ್ಲಾ!"

"ಹೋದರೂ ಚಿಂತೆಯಿಲ್ಲ—ಇನ್ನು ನನ್ನ ಹಣ ಕೇಳಬೇಡ ಆಚಾರಿ. ನನ್ನ ಪಾಡು ನಾನು ನೋಡಿಕೊಂಡು ಉಳಿದುಕೊಂಡರೆ ಸಾಕಾಗಿದೆ."

ಭೀಮಾಚಾರಿ ಮಾತು ಬೆಳಸಲಿಲ್ಲ. ಮುಂದಿನ ವ್ಯವಸ್ಥೆಯ ರೂಪರೇಷೆಯನ್ನು ಮನಸ್ಸಿನಲ್ಲಿಯೇ ಕಲ್ಪಿಸಿಕೊಂಡು ಸುಮ್ಮನಾದ.

ಪರಮಾನಂದಯ್ಯ, ಮಂಗಳೆ, ಜಯಮ್ಮ ಸುಬ್ರಹ್ಮಣ್ಯನನ್ನು ದಾರಿಗೆ ತರಲೆತ್ನಿಸಿದರು. 'ಮೈಸೂರು-ಬೆಂಗಳೂರು ಕ್ಯಾಂಪುಗಳಲ್ಲಿ ಹಣವೆಲ್ಲಾ ಹಿಂದಕ್ಕೆ ಬಂದುಬಿಡುತ್ತದೆ' ಎಂದು ಆಸೆ ತೋರಿಸಿದರು. ಸುಬ್ರಹ್ಮಣ್ಯ ತನ್ನ ನಿರ್ಧಾರ ಬದಲಿಸಲಿಲ್ಲ.

ಸುಬ್ರಹ್ಮಣ್ಯ ಊರು ಸೇರುವುದರಲ್ಲಿ ಭೀಮಾಚಾರಿಯ ತಾರು ಚಿನ್ನಪ್ಪನ ಕೈ ಸೇರಿತು.

'ಲಂಕಾದಹನ' ನಾಟಕ ಕಲಾಭಿಮಾನಿಗಳಾದ ಸಾಹುಕಾರ್ ತಾವರೆಕೆರೆ ಶ್ರೀ ಚಿನ್ನಪ್ಪನವರ ಘನ ಅಧ್ಯಕ್ಷತೆಯಲ್ಲಿ ಪ್ರದರ್ಶಿತವಾಯಿತು. ಭೀಮಾಚಾರಿ ಅವನ ಕೊರಳಿಗೆ ದೆವ್ವದಂಥ ಹಾರ ಹಾಕಿ ಅವನ ಔದಾರ್ಯ, ಕಲಾಪ್ರಾವೀಣ್ಯ, ಉದಾರಾಶ್ರಯಗಳನ್ನು ಮುಕ್ತಕಂಠದಿಂದ ಹೊಗಳಿದ. ಚಿನ್ನಪ್ಪನಿಗೆ ಬೇರೆ ಸ್ವರ್ಗದ ಆವಶ್ಯಕತೆಯೇ ಕಂಡು ಬರಲಿಲ್ಲ.

ಮಾರನೆಯ ಬೆಳಿಗ್ಗೆ ಚಿನ್ನಪ್ಪ ಭೀಮಾಚಾರಿಯ ಕೈಗೆ ಮೂರು ಸಾವಿರ ರೂಪಾಯಿ ಎಣಿಸಿ, ಉಳಿದ ಹಣವನ್ನು ಕ್ಯಾಂಪು ಬದಲಾಯಿಸಿದ ಮೇಲೆ ಕೊಡುವುದಾಗಿ ವಾಗ್ದಾನ ಮಾಡಿದ.

## ೨೮

ಸುಬ್ರಹ್ಮಣ್ಯನ ಸಮತೂಕ ಕ್ರಮಕ್ರಮೇಣ ತಪ್ಪುವುದಕ್ಕಾರಂಭ ವಾಯಿತು. ಅವನ ಹತ್ತಿರ ಏನು ಮಾತಾಡಬೇಕು—ಹೇಗೆ ಮಾತನಾಡ ಬೇಕೆಂಬುದು ಮನೆಯಲ್ಲಿ ಯಾರಿಗೂ ಹೊಳೆಯದಾಯಿತು. ಯಾವ ಕಾರಣಕ್ಕೆ ಅವನಿಗೆ ಕೋಪ ಬರುತ್ತದೆಂದು ತಿಳಿಯುವುದೇ ಮನೆಯವ ರಿಗೆ ಕಷ್ಟವಾಯಿತು. ಮಾತು ಮಾತಿಗೆ ಅವನು ರೇಗುತ್ತಿದ್ದುದನ್ನು ಕಂಡು ಪಾರ್ವತಮ್ಮನವರು

"ತಂದೆಯ ಗುಣವೇ ಮಗನಿಗೂ ಬಂದಿದೆ."

ಎಂದು ಪೇಚಾಡಿಕೊಂಡರು.

ಸುಬ್ರಹ್ಮಣ್ಯನ ಅಸ್ಥಿಮಿತ ಮನಸ್ಸಿನ ಹೊಯ್ದಾಟದ ಹೊಡೆತವೆ ಲ್ಲವನ್ನೂ ಗೌರಿ ಸಹಿಸಿಕೊಳ್ಳಬೇಕಾಯಿತು. ಒಂದೆರಡು ಬಾರಿ ಗೌರಿ ಗಂಡನಿಗೆ ಎದುರುತ್ತರ ಕೊಟ್ಟುದನ್ನು ಗಮನಿಸಿದ್ದ ಪಾರ್ವತಮ್ಮನವರು

"ಅವನು ರೇಗಾಡಿದರೆ ರೇಗಾಡಿಕೊಂಡು ಹೋಗಲಿ. ನೀನು ಸುಮ್ಮನಿದ್ದುಬಿಡು ಗೌರಿ. ಮಾತಿಗೆ ಮಾತು ಸೇರಿ ಹಗರಣವಾದೀತು."

"ಕಾರಣವಿಲ್ಲದೆಯೇ ಕೋಪ ಮಾಡಿಕೊಳ್ಳುತ್ತಾರಲ್ಲಾ ಅತ್ತೆ."

"ಹೌದು. ಅವನ ವಿವೇಕಕ್ಕೆ ಮಂಜು ಕವಿದಿದೆಯಮ್ಮ. ಬೇಸಿ ಗೆಯ ಬಿಸಿಲು ಬೀಳುವ ವರೆಗೆ ಕಾಯುವುದೇ ಜಾಣತನ."

ಗೌರಿ ಅತ್ತೆಯ ಸಲಹೆಯನ್ನನುಸರಿಸಲು ಪ್ರಯತ್ನಿಸುತ್ತಿದ್ದಳು. ಅದಕ್ಕೂ ಸುಬ್ರಹ್ಮಣ್ಯ ರೇಗಿ

"ನಾಲಗೆ ಸೇದಿ ಹೋಗಿದೆಯೇನು? ಜವಾಬು ಕೊಡುವುದಕ್ಕೆ ನಿನಗೇನು ಧಾಡಿ" ಎನ್ನುತ್ತಿದ್ದ.

ಚಿನ್ನಪ್ಪನ ಅಧ್ಯಕ್ಷತೆಯಲ್ಲಿ ನಾಟಕವಾದುದನ್ನು ಕೇಳಿದ ಮೇಲಂತೂ ಸುಬ್ರಹ್ಮಣ್ಯನಿಗೆ ಅರೆ ಹುಚ್ಚೇ ಹಿಡಿದಂತಾಯಿತು. ಮನಸ್ಸು ಅತ್ಯುಗ್ರವೇದನೆಗೊಳಗಾಗಿ ಅಶಾಂತವಾಯಿತು.

'ಇದೆಲ್ಲಾ ಭೀಮಾಚಾರಿಯ ಪಿತೂರಿ' ಎಂದುಕೊಂಡ.

'ಈ ಸಹವಾಸ ಮಾಡಿದ್ದೇ ತಪ್ಪಾಯಿತು' ಎಂದು ಮರುಗಿದ.

ಹಿರೋಡೆಯಿಂದ-ನಾಟಕ ಮಂಡಳಿಯವರಿಂದ ಆದಷ್ಟು ದೂರವಿರಬೇಕೆಂದು ವಿಚಾರ ಮಾಡಿದ.

ಅವನ ವಿಚಾರ—ನಿರ್ಧಾರ ತಾತ್ಕಾಲಿಕ ಅತೃಪ್ತಿಯಿಂದ ಹುಟ್ಟಿಕೊಂಡಿದ್ದುವು. ಯಾವುದೋ ಮಧುರ ಭಾವನೆ—ಚಿಂತನೆ ಮನಸ್ಸಿಗೆ ಹೊಳೆದು ಆ ಅತೃಪ್ತಿಯನ್ನು ಅಳಿಸಿಬಿಡುತ್ತಿತ್ತು.

ಮಂಗಳೆಯ ರೂಪ-ಲಾವಣ್ಯ— ಬೆಡಗು ಬಿನ್ನಾಣ, ಅವಳ ನಗುವಿನ ಲಲಿತ ಮನೋಹರ ಮಾಧುರ್ಯ—ವೀಣೆಯ ಇಂಚರದಂತಹ ಅವಳ ಕೊರಳುಲಿ—ಅಕೃತ್ರಿಮವಾದ ಅವಳ ಸ್ನೇಹ ಸೌಜನ್ಯ—ಮುಗ್ಧತೆಯನ್ನು ದಾಟಿ ಪ್ರೌಢಪಂಕ್ತಿಗೆ ಸೇರುತ್ತಿದ್ದ ಅವಳ ಬಾಳ ಬೆಡಗು ಅವನ ಕಣ್ಣಿಗೆ ಕಟ್ಟಿದಂತಾಗುತ್ತಿತ್ತು.

ನಿತ್ಯನೂತನವೂ ಚೇತೋಹಾರಿಯೂ ಆದ ಮಂಗಳೆಯ ಸೌಂದರ್ಯಕ್ಕೆ ತನ್ನ ಸಮಸ್ತ ಸಂಪತ್ತನ್ನೂ ಧಾರೆಯೆರೆಯಲು ನಿರ್ಧರಿಸುವನು. ಮರುಕ್ಷಣವೇ ಅವ್ಯಕ್ತಶಕ್ತಿಯೊಂದು ಸವಾಲು ಹಾಕುತ್ತಿತ್ತು.:

'ನೀನು ಉಪಭೋಗಿಸುತ್ತಿರುವ ಸಂಪತ್ತು ನಿನ್ನದೇ ಸುಬ್ರಹ್ಮಣ್ಯ?'

'ನನ್ನದೆನ್ನುವುದರಲ್ಲಿ ಸಂದೇಹವೇನು ?'

'ಪಿತ್ರಾರ್ಜಿತವಾದ ಈ ಸ್ವತ್ತಿನಲ್ಲಿ ನಿನ್ನ ತಮ್ಮನಿಗೆ—ನಿನ್ನ ಮಗನಿಗೆ ಪಾಲಿದೆ.'

'ಪಾಲು ಕೊಡುವುದೂ ಬಿಡುವುದೂ ನನ್ನ ಇಷ್ಟ.'

'ಕಾಯಿದೆ ಕಾನೂನು ನಿನಗೊಬ್ಬನಿಗಾಗಿಯೇ ವಿರಚಿತವಾಗಿಲ್ಲ.'

'ಕಾಯಿದೆ ಕಾನೂನನ್ನು ನಾನು ಮಾನಿಸುವುದಿಲ್ಲ.'

'ಮೂರ್ಖ—ಶತಮೂರ್ಖ! ಈ ಸಂಪತ್ತಿನಲ್ಲಿ ನಿನ್ನ, ನಿನ್ನ ತಮ್ಮನ ನಿನ್ನ ಮಗನ ಭಾಗವೂ ಅತ್ಯಲ್ಪ, ಅದನ್ನು ಬಲ್ಲೆಯಾ?'

'ಹೇಗೆ ?'

'ನಿನ್ನ ತಂದೆ ಕಷ್ಟಪಟ್ಟು ಸಂಪಾದಿಸಿದುದು ಒಂದು ಭಾಗ. ಆ ಭಾಗದಲ್ಲಿ ಮಾತ್ರ ಪಾಲು ಪಡೆಯುವ ಹಕ್ಕು ನಿಮಗಿದೆ.'

'ಉಳಿದ ಮೂರು ಭಾಗ ?'

'ಈ ಊರಿನ ನೆರೆಹೊರೆ ಊರುಗಳ ನಿರ್ಭಾಗ್ಯರ ಸ್ವತ್ತುಗಳು. ನಿನ್ನ ತಂದೆ ಗಳಿಸಿದುದೆಲ್ಲವೂ ಸತ್ಯ, ಧರ್ಮಮಾರ್ಗದಿಂದ ಬಂದುವಲ್ಲ. ಹಲವರ ಹೊಟ್ಟೆಯ ಮೇಲೆ ಹೊಡೆದೇ ನಿನ್ನ ತಂದೆ ಹಿರಿಯ ಮನುಷ್ಯನಾದುದು.'

'ಅದು ಅವರ ಧರ್ಮ-ಕರ್ಮ. ನನಗೇನು ಸಂಬಂಧ ?'

'ಅವನ ಆಸ್ತಿ ಬೇಕು. ಅವನ ಧರ್ಮ, ಕರ್ಮ ಬೇಡವೇ ?'

'ಮಂಗಳಿಗೆ ಆಸ್ತಿ ಕೊಡಲು ನಾನು ನಿರ್ಧರಿಸಿದರೆ ನನ್ನ ಕೈ ತಡೆಯುವವರು ಯಾರು ?'

'ನಾನು.'

'ನೀನು ಯಾರು?'

'ನಾನು ಯಾರೆಂದು ತಿಳಿಯುವ ಮೊದಲು ನೀನು ಯಾರು ಹೇಳು.'

'ನಾನು ಸುಬ್ರಹ್ಮಣ್ಯ—ತಾವರೆಕೆರೆಯ ಶ್ರೀಮಂತ.'

'ಅಲ್ಲ—ನೀನು ಅವನ ದೈತ್ಯರೂಪ.'

'ನೀನು?'

'ನಾನು ಅವನ ಆತ್ಮಜ್ಯೋತಿ. ನಿಜವಾದ ಸುಬ್ರಹ್ಮಣ್ಯ ರಾಕ್ಷಸನಲ್ಲವೆಂದು ಬಲ್ಲೆಯಾ?'

'ನಾನು ರಾಕ್ಷಸನೇ?'

'ಅಲ್ಲ—ರಾಕ್ಷಸನಾಗಲು ಪ್ರಯತ್ನಿಸುತ್ತಿರುವೆ.'

'ನಾನು ರಾಕ್ಷಸನಾಗುತ್ತಿದ್ದೇನೆಯೇ?' ಎಂದು ಸುಬ್ರಹ್ಮಣ್ಯ ತನ್ನನ್ನೇ ಹಲವು ಸಲ ಕೇಳಿಕೊಂಡ.

ಸುಬ್ರಹ್ಮಣ್ಯನಿಗೆ ಮುಜುಗರ ಹೆಚ್ಚಿದಂತೆ ಗೌರಿಗೂ ಮುಜುಗರ ಹೆಚ್ಚುತ್ತಿತ್ತು. ಗಂಡನೆದುರು ನಿಂತು ವಾದ ಮಾಡುವುದಕ್ಕೆ ಅವಳು ಹೆದರುತ್ತಿರಲಿಲ್ಲ. ಅವನ ನಾಲಗೆ ಬೆಳೆದಂತೆ ಅವಳ ನಾಲಗೆಯೂ ಬೆಳೆಯುತ್ತ ಹೋಯಿತು.

"ನಿನಗೆ ಇಷ್ಟು ಮಾತಾಡುವುದಕ್ಕೆ ಬರುತ್ತದೆಂದು ನನಗೆ ತಿಳಿದಿರಲಿಲ್ಲ."

"ಬರುತ್ತಿರಲಿಲ್ಲ—ನೀವೇ ಹೇಳಿಕೊಟ್ಟಿರಿ."

"ನೀನು ಹೆಣ್ಣು ರೂಪ ಹೊತ್ತಿರುವ ರಾಕ್ಷಸಿ."

"ಇರಬಹುದು—ನೀವು ಸಾಕ್ಷಾತ್ ಧರ್ಮರಾಯರು."

"ಹೀಗೆ ಮಾತಾಡಿದರೆ ಹಲ್ಲು ಕಳೆದುಕೊಳ್ಳುತ್ತೀ ನೋಡು."

"ಹೋಗಲಿ ಬಿಡಿ—ಅದೂ ಆಗಿ ಹೋಗಲಿ."

ಸುಬ್ರಹ್ಮಣ್ಯನಿಗೆ ಮಿತಿಮೀರಿದ ಕೋಪ ಬಂದು ಗೌರಿಗೆ ಪ್ರಹಾರ ಸೇವೆಯಾಗುತ್ತಿತ್ತು.

ಸ್ವಲ್ಪ ಹೊತ್ತಿನಲ್ಲಿಯೇ ಸುಬ್ರಹ್ಮಣ್ಯನ ಕೋಪ ಇಳಿಮುಖವಾಗಿ ಅವನಿಗೆ ಪಶ್ಚಾತ್ತಾಪವಾಗುತ್ತಿತ್ತು.

'ನಾನೆಂಥಾ ಅವಿವೇಕ ಮಾಡಿದೆ. ಸಿಟ್ಟಿನ ಕೈಯಲ್ಲಿ ಬುದ್ಧಿಯನ್ನು ಕೊಡುತ್ತಿರುವೆನಲ್ಲಾ! ಗೌರಿ ಮಾಡಿರುವ ಅಪರಾಧವೇನು?—ಸ್ವಲ್ಪ ಹವಣು ಮೀರಿ ಮಾತನಾಡುತ್ತಾಳೆ. ಅಷ್ಟಕ್ಕೇ ನಾನು ಅವಳ ಮೇಲೆ ಕೈಮಾಡುವುದೇ?'

ಎಂದು ಮರುಗುವನು. ಗೌರಿಯ ಕ್ಷಮೆ ಬೇಡಿ, ಅವಳ ಮನಸ್ಸಿನ ದುಃಖ ಪರಿಹಾರ ಮಾಡಲು ಆತುರಗೊಳ್ಳುತ್ತಿದ್ದ. ತಾನೇ ಸಂಧಾನಕ್ಕೆ ಮುಂದುವರಿದು ಗೌರಿಯ ಬಳಿ ಬಂದು ಮೃದುವಾಗಿ 'ಗೌರಿ' ಎನ್ನುತ್ತಿದ್ದ. ಕೋಪಾಗ್ನಿಯಲ್ಲಿ ಉರಿಯುತ್ತಿದ್ದ ಗೌರಿ ಅವನನ್ನು ಕಣ್ಣೆತ್ತಿ ನೋಡದೆ ಅವನಿದ್ದ ಸ್ಥಳ ಬಿಟ್ಟು ದೂರ ಹೊರಟುಹೋಗುತ್ತಿದ್ದಳು.

ಕೂಡಬೇಕಾಗಿದ್ದ ಮನಸ್ಸುಗಳು ಕೂಡದೆ ಬಿಡಿಬಿಡಿಯಾಗಿ ನಿಲ್ಲುತ್ತಿದ್ದುವು.

ಇಬ್ಬರ ಕೋಪಕ್ಕೂ ಮತ್ತಷ್ಟು ಆಜ್ಯ ಹೊಯ್ದಂತಾಗುತ್ತಿತ್ತು.

ಅವಮಾನ, ಅಸಮಾಧಾನ, ಅತೃಪ್ತಿಯ ಹೊರೆ ಹೊತ್ತುಕೊಂಡು ಸುಬ್ರಹ್ಮಣ್ಯ ಹಿರೋಡೆಗೆ ಹೊರಟುಹೋಗುತ್ತಿದ್ದ.

ಗೌರಿಯ ಶಠತನ ಒಮ್ಮೊಮ್ಮೆ ಪಾರ್ವತಮ್ಮನವರಿಗೆ ಬೇಸರವನ್ನುಂಟುಮಾಡುತ್ತಿತ್ತು.

"ಗಂಡನನ್ನು ತೀರಾ ಅಷ್ಟು ಅಸಡ್ಡೆಮಾಡಬಾರದಮ್ಮ" ಎನ್ನುತ್ತಿದ್ದರು.

"ಇನ್ನೇನು ಮಾಡಬೇಕು ಅತ್ತೆ. ತಲೆಯ ಮೇಲೆ ಕೂಡಿಸಿಕೊಂಡು ಪೂಜೆ ಮಾಡಲೇ?"

"ತೊಡೆಯ ಮೇಲೆ ಕೂಡಿಸಿಕೊಂಡು ಪೂಜೆ ಮಾಡಬೇಕು."

"ಪೂಜೆ ಮಾಡಿಸಿಕೊಳ್ಳುವ ಯೋಗ್ಯತೆ ಇದ್ದರೆ ಪೂಜೆಮಾಡಬಹುದಾಗಿತ್ತು."

"ಪೂಜೆಮಾಡುವವರು ತಮ್ಮ ಆರಾಧ್ಯಮೂರ್ತಿಗೆ ಯೋಗ್ಯತೆ ಇದೆಯೇ ಇಲ್ಲವೇ ಎಂದು ಯೋಚನೆಮಾಡುವುದಿಲ್ಲ. ಕಲ್ಲು, ಕಂಚು, ಮರಕ್ಕೂ ನಾವು ದೈವತ್ವವನ್ನು ಆರೋಪಿಸಿ ಪೂಜೆ ಮಾಡುವುದಿಲ್ಲವೇ—ಕಲ್ಲಿನಲ್ಲಿ, ಮರದಲ್ಲಿ, ಕಂಚಿನಲ್ಲಿ ದೈವತ್ವವಿದೆಯೇ?"

"ನಿಮ್ಮ ಮಗನಲ್ಲಿ ದೈವತ್ವವಿದೆಯೆಂದು ನೀವೇ ಹೇಳಬೇಕು ಅತ್ತೆ."

"ನನ್ನ ಮಗನಲ್ಲಿ ಮಾತ್ರವೇ ಅಲ್ಲ— ಎಲ್ಲರಲ್ಲಿಯೂ ದೈವತ್ವವಿದೆ—ನಿನ್ನಲ್ಲಿಯೂ ಇದೆ."

"ನಾನು ಹೆಣ್ಣುರೂಪ ಹೊತ್ತಿರುವ ರಾಕ್ಷಸಿಯಂತೆ. ನಿಮ್ಮ ಮಕ್ಕಳೇ ಅಪ್ಪಣೆ ಕೊಡಿಸಿದರು."

"ಕೋಪದ ಹೊತ್ತಿನಲ್ಲಿ ಆಡಿದ ಮಾತುಗಳನ್ನು ನೆನಪಿಟ್ಟುಕೊಳ್ಳಬಾರದು."

"ಈ ವಿವೇಕ ನಿಮ್ಮ ಮಗನಿಗೆ ಹೇಳಿ ಅತ್ತೆ. ನನಗೆ ಹೇಳಿದರೆ ಏನು ಪ್ರಯೋಜನ."

"ನನ್ನ ಮಗನ ಜತೆ ಸಂಸಾರ ಮಾಡಬೇಕಾದವಳು ನೀನು. ಅವನನ್ನು ತಿದ್ದಿಕೊಳ್ಳುವುದು ನಿನ್ನ ಭಾರ."

"ನಾಯಿಯ ಬಾಲದ ಡೊಂಕನ್ನು ತಿದ್ದಲು ಯಾರಿಗೆ ಸಾಧ್ಯ?"

"ಅವನ ವಿಷಯ ಇಂಥ ತುಚ್ಛ ಮಾತುಗಳನ್ನಾಡಬೇಡ ಗೌರಮ್ಮ—ಹಡೆದೊಡಲು ಸುಡುವುದು ನ್ಯಾಯವಲ್ಲ."

"ನನ್ನದೂ ಹಡೆದೊಡಲು ಅತ್ತೆ—ನನ್ನ ಸಂಕಟ ನೀವೇನು ಬಲ್ಲಿರಿ. ಸುಖವಾಗಿ ಕುಳಿತು ನನಗೆ ಉಪದೇಶ ಕೊಡುವುದು ಸುಲಭ."

"ನಾನೂ ಕಷ್ಟ ಕಂಡಿದ್ದೀನಿ ಗೌರಿ. ನಿನ್ನ ಸಂಕಟ ನಾನು ಅರ್ಥ

ಮಾಡಿಕೊಳ್ಳಬಲ್ಲೆ—ನಾನೂ ಹೆಣ್ಣು, ಹೆಣ್ಣಿನ ಹೃದಯದಾವೇಗ ನನಗೂ ತಿಳಿಯುತ್ತದೆ. ಹಾಗೇ ನಾನು ತಾಯಿಯೂ ಆಗಿದ್ದೇನೆ. ತಪ್ಪಿ ನಡೆಯುತ್ತಿರುವ ಮಗ—ಅವನ ಮೇಲೆ ಕತ್ತಿ ಹಿರಿದು ನಿಂತಿರುವ ಸೊಸೆ ಇಬ್ಬರನ್ನೂ ನಾನು ಕೈಬಿಡಲಾರೆ. ಇಬ್ಬರೂ ಮೊಂಡುತನ ಮಾಡುವಿರಿ. ಸೋತು ಗೆಲ್ಲುವುದು ನಿಮ್ಮಿಬ್ಬರಿಗೂ ಬೇಡವಾಗಿದೆ. ಜಗಳ ಹೀಗೇ ಮುಂದುವರಿದರೆ ಇದು ಹೇಗೆ ಪರ್ಯವಸಾನ ಹೊಂದುವುದು ಬಲ್ಲೆಯಾ?”

“ಹೇಗಾದರೂ ಪರ್ಯವಸಾನ ಹೊಂದಲಿ—ಎಲ್ಲದಕ್ಕೂ ನಾನು ಸಿದ್ಧಳಾಗಿರುವೆನು. ಮನೆ ಬಿಟ್ಟು ಹೊರಗೆ ಕಳಿಸಿದರೂ ಸಂತೋಷವೇ. ನಾಲ್ಕು ಮನೆ ಕೂಲಿ ಮಾಡಿ ನನ್ನ ಕಂದನನ್ನು ಸಾಕುತ್ತೇನೆ.”

ಪಾರ್ವತಮ್ಮನವರ ಬಾಯಿ ಕಟ್ಟಿಹೋಯಿತು. ಕಣ್ಣು ತುಂಬ ಅಶ್ರುಬಿಂದುಗಳು ಕೂಡಿಕೊಂಡುವು. ತಾಯಿ ತುಳಸಿಯ ಬಳಿ ಬಂದು ‘ಗೌರೀಗೆ ವಿವೇಕ, ಶಾಂತಿ ಕೊಡು ತಾಯೀ’ ಎಂದು ದೈನ್ಯದಿಂದ ಬೇಡಿಕೊಂಡರು.

## ೨೯

ಗೌರಿಯ ಮೇಲಣ ಕೋಪದಿಂದ ಹಿರೋಡೆಗೆ ಬಂದ ಸುಬ್ರಹ್ಮಣ್ಯ ಮಂಗಳಿಯನ್ನು ನೋಡಿದ ಮೇಲೂ ಉಪಶಾಂತವಾಗಲಿಲ್ಲ. ಅವನ ಕ್ರೂರವಾಕ್ಯಗಳಿಗೆ ಮಂಗಳಿಯೂ ತಲ್ಲಣಿಸಿ ತಂದೆಗೆ ದೂರು ಕೊಟ್ಟಳು.

ಪರಮಾನಂದಯ್ಯ, ಜಯಮ್ಮ ತಮ್ಮಲ್ಲಿಯೇ ಚರ್ಚೆ ಮಾಡಿಕೊಂಡು ಭೀಮಾಚಾರೀಗೆ ವಿಷಯ ತಿಳಿಸಿದರು. ಆಚಾರಿ ತಾನು ವಿಚಾರಮಾಡುವುದಾಗಿ ಮಾತುಕೊಟ್ಟ.

ಒಂದು ದಿನ ಸುಬ್ರಹ್ಮಣ್ಯ ಏಕಾಂಗಿಯಾಗಿ ಕಂಪೆನಿಯ ಮನೆಯಲ್ಲಿ ಕುಳಿತಿದ್ದ ಹೊತ್ತು ಸಾಧಿಸಿ ಭೀಮಾಚಾರಿ ಒಳಕ್ಕೆ ಬಂದು,

"ಕಾಫಿ ಆಯಿತೇ ಸುಬ್ರಹ್ಮಣ್ಯ" ಎಂದು ಕೇಳಿದ.

ಸುಬ್ರಹ್ಮಣ್ಯನ ಕೋಪ ನೆತ್ತಿಗೇರಿತು.

ಭೀಮಾಚಾರಿಗೆ ಉತ್ತರಕೊಡಲು ಅವನು ಯತ್ನಿಸಲಿಲ್ಲ.

ಆಚಾರಿ ಅಲ್ಲಿಯೇ ಕುಳಿತು ಕಾಫಿ ತರಿಸಿ

"ಕಾಫಿ ತೆಗೆದುಕೊಳ್ಳಯ್ಯಾ. ಆಮೇಲೆ ನನ್ನ ತರಾಟಿಗೆ ತೆಗೆದುಕೊಳ್ಳುವಿಯಂತೆ"

ಎಂದು ಬಲವಂತ ಮಾಡಿ ಕಾಫಿ ಕುಡಿಸಿದ.

ಕಾಫಿ ತಂದುಕೊಟ್ಟಿದ್ದ ಆಳು ಲೋಟಗಳನ್ನು ತೆಗೆದುಕೊಂಡು ಹೊರಗೆ ಹೋದ ಮೇಲೆ

"ಈಗ ಹೇಳು—ಏಕೆ ಕೋಪಮಾಡಿಕೊಂಡಿರುವೆ ?"

"ಸುಬ್ಬೀ ನಿನ್ನ ಮನೆದೇವರಾಗಿರುವಾಗ ನಿನ್ನ ಹತ್ತಿರ ಮಾತನಾಡಿ ಏನು ಪ್ರಯೋಜನ ಆಚಾರಿ?"

"ನನ್ನ ಬತ್ತಳಿಕೆಯಲ್ಲಿ ಸತ್ಯವನ್ನೂ ಇಟ್ಟುಕೊಂಡಿದ್ದೇನಯ್ಯಾ. ಅದನ್ನೂ ಆಗಾಗ್ಗೆ ಪ್ರಯೋಗಿಸುತ್ತೇನೆ."

"ನನಗೂ ನೀನು ವಂಚನೆ ಮಾಡಬಹುದೇ ?"

"ನಾನೇನು ವಂಚನೆ ಮಾಡಿದೆ ?"

"ಚಿನ್ನಪ್ಪನನ್ನೇಕೆ ಕಂಪೆನಿಗೆ ಬರಮಾಡಿಕೊಂಡೆ?"

"ನಾನು ಬರಮಾಡಿಕೊಂಡೆನೇ! ಅವನೇ ಏನೋ ಕೆಲಸಕ್ಕೆ ಬಂದಿದ್ದ—ನಾಟಕಕ್ಕೆ ಬಾಪ್ಪ ಎಂದೆ. ನಮ್ಮೂರಿನವನು, ಹಳೆಯ ಸ್ನೇಹಿತ ಬಂದನಲ್ಲಾ ಎಂದು ಹಾರ ಹಾಕಿದೆ. ಇದರಲ್ಲಿ ವಂಚನೆಯೇನು ಬಂತು ?"

"ಚಿನ್ನಪ್ಪನಿಂದ ನೀನು ಹಣ ತೆಗೆದುಕೊಂಡಿಲ್ಲವೇ ?"

"ತೆಗೆದುಕೊಂಡಿದ್ದೇನೆ. ಕೈಸಾಲ. ಹಣ ಬೇಕೆಂದು ನಿನ್ನನ್ನೇ ನಾನು ಮೊದಲು ಕೇಳಲಿಲ್ಲವೇ ? ಕಂಪೆನಿ ಹುಟ್ಟುಹಾಕಿ ಅದನ್ನು ಈ ಸ್ಥಿತಿಗೆ ತಂದು—ಅದು ಚೆನ್ನಾಗಿ ನಡೆಯುತ್ತಿರುವಾಗ ಮುಚ್ಚಲು ನನ್ನ ಮನಸ್ಸು ಒಡಂಬಡಲಿಲ್ಲ. ಕಂಪೆನಿಯ ಆಶ್ರಯದಲ್ಲಿ ನಲವತ್ತು ಜನರ ಹೊಟ್ಟೆ ತುಂಬುತ್ತಿದೆ. ಅವರನ್ನೆಲ್ಲಾ ಹೇಗೆ ಬೀದಿಗಟ್ಟಲಿ ?"

"ಚಿನ್ನಪ್ಪ ಎಷ್ಟು ಹಣ ಕೊಟ್ಟಿದ್ದಾನೆ?"

"ಮೂರೇ ಸಾವಿರ ರೂಪಾಯಿ."

"ಅವನ ಹಣ ಅವನಿಗೆ ಹಿಂದಿರುಗಿಸಿಬಿಡು. ನಾನು ಐದು ಸಾವಿರ ಕೊಡಲು ಸಿದ್ಧವಾಗಿದ್ದೇನೆ."

"ಬೇಡವೆಂದವರು ಯಾರಪ್ಪಾ. ಎಂದಿದ್ದರೂ ನೀನೇ ಕಂಪೆನಿಯ ಧಣಿ. ನೀನು ಹಣ ಕೊಡುವ ಹೊತ್ತಿಗಲ್ಲವೇ ಕಂಪೆನಿ ನಿನ್ನ ಮತಾಳಿ ದುದು. ನಿನ್ನ ನಾವು ಮರೆತರೆ ದೇವರು ಒಳ್ಳೆಯದು ಮಾಡು ತ್ತಾನೆಯೇ ?"

"ಈ ಹಣದಿಂದ ಕ್ಯಾಂಪು ಬದಲಾಯಿಸಲು ಸಾಧ್ಯವಷ್ಟೆ?"

"ಸಾಧ್ಯ."

"ಈ ಕ್ಯಾಂಪು ಹೇಗೆ ನಡೆಯಿತು?"

"ಸ್ವಲ್ಪ ಹೊಡೆತವೇ ಬಿತ್ತು. ಮಂಡ್ಯವಾದ ಮೇಲೆ ನಾವು ಸ್ವಲ್ಪ ದೂರ ಹೋಗಬೇಕಾಗಿತ್ತು. ಪಕ್ಕದ ಊರಾದ ಹಿರೋಡೆಗೆ ಬಂದದು ತಪ್ಪಾಯಿತು."

"ಮುಂದಿನ ಕ್ಯಾಂಪು ಎಲ್ಲಿಗೆ?"

"ಮೈಸೂರಿಗೆ."

"ಮೈಸೂರು ಬೇಡ ಬೀಮಣ ."

"ಏಕೆ?"

"ಶಂಕರ ಮೈಸೂರಿನಲ್ಲಿ ಓದುತ್ತಿರುವುದನ್ನು ಮರೆತೆಯೇನು? ನಾನು ಬಂದು ಹೋಗುವುದಕ್ಕೆ ತೊಂದರೆಯಾಗುತ್ತದೆ. ಬೆಂಗಳೂರಿಗೆ ನೀವು ಹೋಗುವುದೊಳ್ಳೆಯದು."

"ಬೆಂಗಳೂರಿನಲ್ಲಿ ಖರ್ಚು ಬಹಳವಾಗುತ್ತದಲ್ಲಯ್ಯಾ."

"ನೋಡಿಕೊಳ್ಳೋಣ. ಸಮಯ ಬಂದರೆ ನಾನಿರುವೆನಲ್ಲಾ."

"ಸರಿ ಹಾಗಾದರೆ."

"ಚಿನ್ನಪ್ಪನ ಹಣ ಹಿಂದಿರುಗಿಸುವೆ ತಾನೆ?"

"ಮಾತು ಕೊಟ್ಟ ಮೇಲೆ ಮುಗಿದುಹೋಯಿತಪ್ಪ. ನನ್ನದು 'ಭೀಮ ಪ್ರತಿಜ್ಞೆ' ಎಂದು ನಿನಗೆ ಗೊತ್ತೇ ಇದೆಯಲ್ಲ."

"ನಿನ್ನ ವಿಷಯವೆಲ್ಲಾ ಗೊತ್ತಿದೆ ಭೀಮಣ್ಣ."

"ಅಷ್ಟು ಧೈರ್ಯವಾಗಿ ಹೇಳಬೇಡ ಸುಬ್ಬಣ್ಣ. ಭೀಮಣ್ಣನ ಆಟ ಭೀಮಣ್ಣನಿಗೇ ಗೊತ್ತಿಲ್ಲ, ನಿನಗೆ ಹೇಗೆ ತಿಳಿಯಬೇಕು."

"ನೀನು ನನ್ನ ಪರಮಾಪ್ತ ಸ್ನೇಹಿತನಲ್ಲವೇ ಭೀಮಣ್ಣ!"

"ಅದರಲ್ಲಿಯೂ ಸಂದೇಹವೇನು?"

"ಇಲ್ಲ—ಸುಮ್ಮನೆ ಕೇಳಿದೆ. ನನಗೆ ನೀನು ವಂಚನೆ ಮಾಡುವುದಿಲ್ಲ ಅಲ್ಲವೇ?"

"ಹುಚ್ಚಪ್ಪಾ—ನಿನಗೆ ನಾನು ವಂಚನೆ ಮಾಡುವುದಕ್ಕೆ ಸಿದ್ಧವಾಗಿದ್ದರೆ ಚಿನ್ನಪ್ಪ ನನ್ನ ಉದ್ದಕ್ಕೂ ಹಣ ಸುರಿಯುತ್ತಿದ್ದ. ಮಂಡ್ಯದ ಗೌಡರು ನನಗೋಸ್ಕರ ಎಷ್ಟು ಬೆಣ್ಣೆ ಖರ್ಚು ಮಾಡಿದ್ದಾರೆ ಗೊತ್ತೇ ನಿನಗೆ?—ಕ್ರಿಯೆ ಬಿಡಬಾರದು ಎಂದು ನಾನು ಒದ್ದಾಡುತ್ತಿದ್ದರೆ ನೀನು ಇಲ್ಲಸಲ್ಲದ ಅನುಮಾನಪಡುತ್ತೀ."

"ಅನುಮಾನ ಬಿಟ್ಟುಬಿಟ್ಟೆ ಭೀಮಣ್ಣ."

ಎಂದು ಭೀಮಾಚಾರಿಯ ಹೆಗಲ ಮೇಲೆ ಕೈಹಾಕಿ ವಿಶ್ವಾಸ ಸೂಚಿಸಿದ. ಆಚಾರಿ ಮನಸ್ಸಿನೊಳಗೇ ಮುಸಿನಗೆ ನಕ್ಕ.

ಹಿರೋಡೆ ಕ್ಯಾಂಪು ಮುಗಿಯಿತು. ಸುಬ್ರಹ್ಮಣ್ಯನ ಸಲಹೆಯಂತೆ ಕಂಪೆನಿ ಬೆಂಗಳೂರಿಗೆ ಪ್ರಯಾಣಮಾಡಿತು.

ಗುಬ್ಬಿ ಕಂಪೆನಿಯ ಥಿಯೇಟರಿನಲ್ಲಿಯೇ ನಾಟಕಗಳು ಆರಂಭ ವಾದುವು. ಸುಬ್ರಹ್ಮಣ್ಯ ಎಂಟು ದಿನ ಬೆಂಗಳೂರಿನಲ್ಲಿ ನಿಂತು ತಾವರೆ ಕೆರೆಗೆ ಬಂದ.

ಮನೆಯ ಪರಿಸ್ಥಿತಿ ಸ್ವಲ್ಪವೂ ಸುಧಾರಿಸಿರಲಿಲ್ಲ. ಗೌರಿಯ ಕೋಪ ತಾಪ ದಿನದಿನಕ್ಕೆ ವೃದ್ಧಿಯಾಗುತ್ತಿತ್ತು. ಸುಬ್ರಹ್ಮಣ್ಯ ಅವಳ ಬಗ್ಗೆ ಹೆಚ್ಚು ಹೆಚ್ಚು ಉದಾಸೀನನಾಗುತ್ತ ಬಂದ.

ಪಾರ್ವತಮ್ಮನವರು ಯಾರನ್ನೂ ತಾನಾಗಿಯೇ ಮಾತನಾಡಿಸಿ ಕೊಂಡು ಹೋಗುತ್ತಿರಲಿಲ್ಲ. ಗೌರಿಯಾಗಲಿ ಸುಬ್ರಹ್ಮಣ್ಯನಾಗಲಿ ಬಂದು ಏನಾದರೂ ಕೇಳಿದರೆ ಉತ್ತರಕೊಟ್ಟು ತೃಪ್ತರಾಗುತ್ತಿದ್ದರು. ರವಿ ಯಾಯಿತು, ಅವರಾಯಿತು. ಮುದ್ದು ಮೊಮ್ಮಗನ ಬಾಲಕ್ರೀಡೆಯಲ್ಲಿ ಅಜ್ಜಿ ಮೈಮರೆಯುತ್ತಿದ್ದರು.

ಈ ಇಬ್ಬರು ಮಕ್ಕಳ ಆಟ ನೋಡುತ್ತಾ ನಿಂಗವ್ವ ಕೂಡುತ್ತಿದ್ದಳು.

ಒಂದು ದಿನ ಸುಬ್ರಹ್ಮಣ್ಯ ತಮ್ಮನಿಂದ ಬಂದಿದ್ದ ಟೆಲಿಗ್ರಾಮ್ ತೆಗೆದುಕೊಂಡು ತಾಯಿಯ ಬಳಿಗೆ ಬಂದು

"ಅಮ್ಮ, ಶಂಕ್ರು ಪಾಸಾಗಿದ್ದಾನಮ್ಮ. ಅವನ ಸ್ನೇಹಿತ ಶ್ರೀಧರನೂ ಪಾಸಾಗಿದ್ದಾನೆ."

ಪಾರ್ವತಮ್ಮನವರ ಮುಖ ಅರಳಿತು.

"ನನ್ನ ಕಂದ ಚೆನ್ನಾಗಿರಲಿ—ಗೌರಿಗೂ ಹೇಳು ಸುಬ್ಬು."

"ನಾನು ಹೇಳಲ್ಲಮ್ಮ—ನೀನೇ ಹೇಳಿಬಿಡು."

"ಸುಬ್ಬು ನೀನು ಒಳ್ಳೆಯ ಮಗ, ಒಳ್ಳೆಯ ಅಣ್ಣ ಆಗಿರುವಂತೆ ಒಳ್ಳೆಯ ಗಂಡ, ಒಳ್ಳೆಯ ತಂದೆಯೂ ಆಗಬೇಕಪ್ಪ."

"ಅವತ್ತು ನಾನು ಗೌರಿಯನ್ನು ಹೊಡೆದದ್ದು ತಪ್ಪಾಯಿತಮ್ಮ. ಇನ್ನುಮೇಲೆ ಎಷ್ಟೇ ಕೋಪ ಬಂದರೂ ಅವಳ ಮೇಲೆ ಕೈಯೆತ್ತುವುದಿಲ್ಲ ವೆಂದು ನಿರ್ಧಾರಮಾಡಿಕೊಂಡಿದ್ದೇನೆ."

"ಹಾಗೇ ಇನ್ನೂ ಒಂದು ನಿರ್ಧಾರಮಾಡಲಾರೆಯಾ?"

"ಏನಮ್ಮಾ ಅದು."

"ಗೌರಿಯ ದುಃಖ ನಿವಾರಿಸಬೇಕು. ಹೆಣ್ಣು ಮಗು ಕಣ್ಣೀರು

ಹಾಕಿದರೆ ಮನೆಗೆ ಶ್ರೇಯಸ್ಸಲ್ಲ. ಹೆಣ್ಣುಮಕ್ಕಳ ತಾಯಾಗುವ ಪುಣ್ಯ ನನಗಿಲ್ಲ. ಒಂದು ವೇಳೆ ಗೌರಿ ನನ್ನ ಮಗಳಾಗಿ–ನಿನ್ನ ತಂಗಿಯಾಗಿದ್ದಿದ್ದರೆ, ಅವಳು ಕಣ್ಣೀರ್ಗರೆಯುವುದನ್ನು ನೋಡಿ ನಿನ್ನ ಕರುಳು ಸುಮ್ಮನಿರುತ್ತಿತ್ತೇ ಸುಬ್ಬೂ?"

"ವಿನಾಕಾರಣ ಅವಳು ದ್ವೇಷ ಸಾಧಿಸಿದರೆ ನಾನೇನು ಮಾಡಲಿ?"

"ವಿನಾಕಾರಣವೆನ್ನಬೇಡ ಸುಬ್ಬೂ—ಕಾರಣವಿದೆ—ಅದನ್ನು ನಿವಾರಿಸುವ ಪ್ರಯತ್ನ ನೀನು ಮಾಡಬೇಕು. ನೀನೂ ಗೌರಿ ಸಂತೋಷವಾಗಿರುವುದನ್ನು ನೋಡಿದಲ್ಲದೆ ನನ್ನ ಆತ್ಮಕ್ಕೆ ಶಾಂತಿಯಿಲ್ಲ."

"ಪ್ರಯತ್ನಿಸುತ್ತೇನಮ್ಮ. ನಿನ್ನ ಮನಸ್ಸನ್ನಾಗಲಿ ಅವಳ ಮನಸ್ಸನ್ನಾಗಲಿ ನೋಯಿಸಲು ನನಗೆ ಸ್ವಲ್ಪವೂ ಇಷ್ಟವಿಲ್ಲ.—ಆದರೆ ಯಾವುದೋ ದುರ್ವಿಧಿ ನನ್ನನ್ನು ಕಾಡುತ್ತಿದೆ."

"ದೇವರನ್ನು ನಂಬು ಸುಬ್ಬು–ನಿನ್ನ ಸಮಸ್ತ ಕಷ್ಟ, ನೋವು, ಚಿಂತೆಯನ್ನೂ ಅವನ ಪಾದಕ್ಕೆ ಒಪ್ಪಿಸಿ 'ನನಗೆ ದಾರಿ ತೋರು ಸ್ವಾಮಿ' ಎಂದು ಬೇಡಿಕೋ. ಶರಣಾಗತರಾದವರನ್ನು ಅವನು ಕೈಬಿಡುವುದಿಲ್ಲ. ಸನ್ಮಾರ್ಗದಲ್ಲಿ ನಡೆಯಬೇಕೆಂದಿರುವವರನ್ನು ಅವನು ದುರ್ಮಾರ್ಗಕ್ಕೆ ತಳ್ಳುವುದಿಲ್ಲ. ಮೂಢ ಹೆಂಗಸಿನ ಮಾತಿದು ಎಂದು ತಾತ್ಸಾರ ಮಾಡಬೇಡ."

"ಅಯ್ಯೋ ನಮ್ಮಮ್ಮ—ನಿನ್ನನ್ನು ತಾತ್ಸಾರ ಮಾಡಲೇ! ನನಗೆ ನೀನೇ ಪ್ರತ್ಯಕ್ಷ ದೇವರು................ಲೋಕವೇ ನನ್ನ ಕೈ ಬಿಟ್ಟರೂ, ಹೆಂಡತಿ ಮಕ್ಕಳು ಕಡೆಗಾಣಿಸಿದರೂ ನನ್ನ ತಾಯಿ ನನ್ನ ಕೈ ಬಿಡುವುದಿಲ್ಲ ಎನ್ನುವ ನಂಬಿಕೆ ನನಗಿದೆ. ನನ್ನ ತಾಯಿದೇವಿಯ ಶ್ರೀ ಚರಣಗಳು ಸದಾ ನನ್ನ ಶಿರಸ್ಸಿನ ಮೇಲಿರಲಿ."

ಎಂದು ತಾಯಿಯ ಪಾದಗಳನ್ನು ಹಿಡಿದು ದೀರ್ಘದಂಡ ಪ್ರಣಾಮ ಮಾಡಿದ. ತಾಯಿಯ ಮೃದು ಮಧುರ ಅಮೃತಹಸ್ತ ಮಗನ ನೆತ್ತಿಯನ್ನು ನೇವರಿಸಿತು.

## ೩೦

ಕಾಲೇಜಿನ ಪಾಠ ಪ್ರವಚನಗಳು ಮತ್ತೆ ಆರಂಭವಾಗಿದ್ದುವು. ಶಂಕರ ಪಾಠಗಳಿಗೆ ಹೆಚ್ಚು ಲಕ್ಷ್ಯಕೊಡಬೇಕಾಗಿದ್ದುದರಿಂದ ಮೇಲಿಂದ ಮೇಲೆ ಶಾಸ್ತ್ರಿಗಳ ಮನೆಗೆ ಹೋಗಿ ಬರಲು ಸಾಧ್ಯವಾಗುತ್ತಿರಲಿಲ್ಲ.

ಆದರೆ ಭಾನುವಾರ ಶಾಸ್ತ್ರಿಗಳಿಗಾಗಿ ಮೀಸಲಾಗಿತ್ತು.

ಶ್ರೀಧರ ಶಂಕರ ಇಬ್ಬರೂ ಬೆಳಿಗ್ಗೆ ಐದು ಗಂಟೆಗೇ ಎದ್ದು ಬೆಟ್ಟದ ಕಡೆ ವಾಕಿಂಗ್ ಹೋಗುತ್ತಿದ್ದರು. ವಾಕಿಂಗ್ ಸಮಯದಲ್ಲಿ ಇಬ್ಬರೂ ಉಪನಿಷತ್ತುಗಳನ್ನು ಅಭ್ಯಾಸ ಮಾಡುವುದೆಂದೂ, ಸಂಶಯಗಳನ್ನು ಭಾನುವಾರ ಶಾಸ್ತ್ರಿಗಳ ಮುಂದಿಟ್ಟು ಪರಿಹಾರ ಮಾಡಿಕೊಳ್ಳುವುದೆಂದೂ ಅವರಲ್ಲಿ ಕರಾರಾಗಿತ್ತು.

ಈಶಾವಾಸ್ಯದಿಂದ ಆರಂಭವಾದ ಅವರ ಉಪನಿಷತ್ ವ್ಯಾಸಂಗ ಸಾವಕಾಶವಾಗಿ ಸಾಗಿತ್ತು. ಶಾಸ್ತ್ರಿಗಳು ಸಂಶಯ ನಿವೃತ್ತಿ ಮಾಡುವುದರ ಜತೆಗೆ ಉಪನಿಷತ್ತುಗಳ ಭೂಮಿಕೆಯನ್ನೂ ಅವುಗಳ ಗೂಢಾರ್ಥವನ್ನೂ ವಿವರಿಸುತ್ತಿದ್ದರು.

ಉಪನಿಷತ್ತುಗಳ 'ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವು' ಅಗೋಚರವಾಗಿ ಗೆಳೆಯರಿಬ್ಬರ ಮೇಲೂ ಪ್ರಭಾವ ಮೂಡಿತ್ತು. ಮನಸ್ಸಿಗೆ ಏನೋ ಒಂದು ಬಗೆಯ ದಿವ್ಯ ಶಾಂತಿ. ಚೇತನಗಳಲ್ಲಿ ವಿಶಿಷ್ಟ ಜಾಗೃತಿ. ಮಾತಿನಲ್ಲಿ ಅನ್ಯೂನವಾದ ಮಾರ್ದವತೆ.

ಹಾಸ್ಟೆಲ್ ವಿದ್ಯಾರ್ಥಿಗಳಿಗೆ ಶಂಕರ, ಶ್ರೀಧರನ ಮೇಲೆ ಜುಗುಪ್ಸೆ ಹುಟ್ಟಿತ್ತು. ಆಟಪಾಟಗಳಲ್ಲಿ ಬೆರೆಯದೆ, ಜತೆಯಲ್ಲಿ ಸಿನೀಮಾಕ್ಕೆ ಹೋಗದೆ ಅಧ್ಯಾಪಕರ ಗುಣಶೀಲ ಚರ್ಚಿಸಲು ತೊಡಗದೆ, ಊರಿನ ಹೊಲಸು ಸುದ್ದಿಗಳಲ್ಲಿ ಆಸಕ್ತಿ ತೋರದೆ ಸಂಘದೂರರಾಗಿದ್ದ ಆ ಗೆಳೆಯರು ಅವರ ಕಣ್ಣುಗಳಿಗೆ 'ವಿಚಿತ್ರ ಮೃಗ'ಗಳಾಗಿ ಕಂಡುಬಂದರು. ಶಂಕರ ಶ್ರೀಧರರ ಪ್ರತಿಕಕ್ಷಿಗಳ ತಂಡದ ನಾಯಕತ್ವವನ್ನು ನಾರಾಯಣಸ್ವಾಮಿ ವಹಿಸಿದ್ದ. ತನ್ನ ಸಂಗ ಬಿಟ್ಟನೆಂದು ಅವನಿಗೆ ಶ್ರೀಧರನ ಮೇಲೆ ಕೋಪ; ತನ್ನ ಸಂಗ ಶ್ರೀಧರನಿಗೆ ಬಿಡಿಸಿದನೆಂದು ಶಂಕರನ ಮೇಲೆ ಕೋಪ.

ಹಾಕಿದರೆ ಮನೆಗೆ ಶ್ರೇಯಸ್ಸಲ್ಲ. ಹೆಣ್ಣುಮಕ್ಕಳ ತಾಯಾಗುವ ಪುಣ್ಯ ನನಗಿಲ್ಲ. ಒಂದು ವೇಳೆ ಗೌರಿ ನನ್ನ ಮಗಳಾಗಿ–ನಿನ್ನ ತಂಗಿಯಾಗಿದ್ದಿದ್ದರೆ, ಅವಳು ಕಣ್ಣೀರ್ಗರೆಯುವುದನ್ನು ನೋಡಿ ನಿನ್ನ ಕರುಳು ಸುಮ್ಮನಿರುತ್ತಿತ್ತೇ ಸುಬ್ಬೂ?"

"ವಿನಾಕಾರಣ ಅವಳು ದ್ವೇಷ ಸಾಧಿಸಿದರೆ ನಾನೇನು ಮಾಡಲಿ?"

"ವಿನಾಕಾರಣವೆನ್ನಬೇಡ ಸುಬ್ಬೂ—ಕಾರಣವಿದೆ—ಅದನ್ನು ನಿವಾರಿಸುವ ಪ್ರಯತ್ನ ನೀನು ಮಾಡಬೇಕು. ನೀನೂ ಗೌರಿ ಸಂತೋಷವಾಗಿರುವುದನ್ನು ನೋಡಿದಲ್ಲದೆ ನನ್ನ ಆತ್ಮಕ್ಕೆ ಶಾಂತಿಯಿಲ್ಲ."

"ಪ್ರಯತ್ನಿಸುತ್ತೇನಮ್ಮ. ನಿನ್ನ ಮನಸ್ಸನ್ನಾಗಲಿ ಅವಳ ಮನಸ್ಸನ್ನಾಗಲಿ ನೋಯಿಸಲು ನನಗೆ ಸ್ವಲ್ಪವೂ ಇಷ್ಟವಿಲ್ಲ.—ಆದರೆ ಯಾವುದೋ ದುರ್ವಿಧಿ ನನ್ನನ್ನು ಕಾಡುತ್ತಿದೆ."

"ದೇವರನ್ನು ನಂಬು ಸುಬ್ಬು–ನಿನ್ನ ಸಮಸ್ತ ಕಷ್ಟ, ನೋವು, ಚಿಂತೆಯನ್ನೂ ಅವನ ಪಾದಕ್ಕೆ ಒಪ್ಪಿಸಿ 'ನನಗೆ ದಾರಿ ತೋರು ಸ್ವಾಮಿ' ಎಂದು ಬೇಡಿಕೋ. ಶರಣಾಗತರಾದವರನ್ನು ಅವನು ಕೈಬಿಡುವುದಿಲ್ಲ. ಸನ್ಮಾರ್ಗದಲ್ಲಿ ನಡೆಯಬೇಕೆಂದಿರುವವರನ್ನು ಅವನು ದುರ್ಮಾರ್ಗಕ್ಕೆ ತಳ್ಳುವುದಿಲ್ಲ. ಮೂಢ ಹೆಂಗಸಿನ ಮಾತಿದು ಎಂದು ತಾತ್ಸಾರ ಮಾಡಬೇಡ."

"ಅಯ್ಯೋ ನಮ್ಮಮ್ಮ—ನಿನ್ನನ್ನು ತಾತ್ಸಾರ ಮಾಡಲೇ! ನನಗೆ ನೀನೇ ಪ್ರತ್ಯಕ್ಷ ದೇವರು................ಲೋಕವೇ ನನ್ನ ಕೈ ಬಿಟ್ಟರೂ, ಹೆಂಡತಿ ಮಕ್ಕಳು ಕಡೆಗಾಣಿಸಿದರೂ ನನ್ನ ತಾಯಿ ನನ್ನ ಕೈ ಬಿಡುವುದಿಲ್ಲ ಎನ್ನುವ ನಂಬಿಕೆ ನನಗಿದೆ. ನನ್ನ ತಾಯಿದೇವಿಯ ಶ್ರೀ ಚರಣಗಳು ಸದಾ ನನ್ನ ಶಿರಸ್ಸಿನ ಮೇಲಿರಲಿ."

ಎಂದು ತಾಯಿಯ ಪಾದಗಳನ್ನು ಹಿಡಿದು ದೀರ್ಘದಂಡ ಪ್ರಣಾಮ ಮಾಡಿದ. ತಾಯಿಯ ಮೃದು ಮಧುರ ಅಮೃತಹಸ್ತ ಮಗನ ನೆತ್ತಿಯನ್ನು ನೇವರಿಸಿತು.

## ೩೦

ಕಾಲೇಜಿನ ಪಾಠ ಪ್ರವಚನಗಳು ಮತ್ತೆ ಆರಂಭವಾಗಿದ್ದುವು. ಶಂಕರ ಪಾಠಗಳಿಗೆ ಹೆಚ್ಚು ಲಕ್ಷ್ಯಕೊಡಬೇಕಾಗಿದ್ದುದರಿಂದ ಮೇಲಿಂದ ಮೇಲೆ ಶಾಸ್ತ್ರಿಗಳ ಮನೆಗೆ ಹೋಗಿ ಬರಲು ಸಾಧ್ಯವಾಗುತ್ತಿರಲಿಲ್ಲ.

ಆದರೆ ಭಾನುವಾರ ಶಾಸ್ತ್ರಿಗಳಿಗಾಗಿ ಮೀಸಲಾಗಿತ್ತು.

ಶ್ರೀಧರ ಶಂಕರ ಇಬ್ಬರೂ ಬೆಳಿಗ್ಗೆ ಐದು ಗಂಟೆಗೇ ಎದ್ದು ಬೆಟ್ಟದ ಕಡೆ ವಾಕಿಂಗ್ ಹೋಗುತ್ತಿದ್ದರು. ವಾಕಿಂಗ್ ಸಮಯದಲ್ಲಿ ಇಬ್ಬರೂ ಉಪನಿಷತ್ತುಗಳನ್ನು ಅಭ್ಯಾಸ ಮಾಡುವುದೆಂದೂ, ಸಂಶಯಗಳನ್ನು ಭಾನುವಾರ ಶಾಸ್ತ್ರಿಗಳ ಮುಂದಿಟ್ಟು ಪರಿಹಾರ ಮಾಡಿಕೊಳ್ಳುವುದೆಂದೂ ಅವರಲ್ಲಿ ಕರಾರಾಗಿತ್ತು.

ಈಶಾವಾಸ್ಯದಿಂದ ಆರಂಭವಾದ ಅವರ ಉಪನಿಷತ್ ವ್ಯಾಸಂಗ ಸಾವಕಾಶವಾಗಿ ಸಾಗಿತ್ತು. ಶಾಸ್ತ್ರಿಗಳು ಸಂಶಯ ನಿವೃತ್ತಿ ಮಾಡುವುದರ ಜತೆಗೆ ಉಪನಿಷತ್ತುಗಳ ಭೂಮಿಕೆಯನ್ನೂ ಅವುಗಳ ಗೂಢಾರ್ಥವನ್ನೂ ವಿವರಿಸುತ್ತಿದ್ದರು.

ಉಪನಿಷತ್ತುಗಳ 'ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವು' ಅಗೋಚರವಾಗಿ ಗೆಳೆಯರಿಬ್ಬರ ಮೇಲೂ ಪ್ರಭಾವ ಮೂಡಿತ್ತು. ಮನಸ್ಸಿಗೆ ಏನೋ ಒಂದು ಬಗೆಯ ದಿವ್ಯ ಶಾಂತಿ. ಚೇತನಗಳಲ್ಲಿ ವಿಶಿಷ್ಟ ಜಾಗೃತಿ. ಮಾತಿನಲ್ಲಿ ಅನ್ಯೂನವಾದ ಮಾರ್ದವತೆ.

ಹಾಸ್ಟೆಲ್ ವಿದ್ಯಾರ್ಥಿಗಳಿಗೆ ಶಂಕರ, ಶ್ರೀಧರನ ಮೇಲೆ ಜುಗುಪ್ಸೆ ಹುಟ್ಟಿತ್ತು. ಆಟಪಾಟಗಳಲ್ಲಿ ಬೆರೆಯದೆ, ಜತೆಯಲ್ಲಿ ಸಿನೀಮಾಕ್ಕೆ ಹೋಗದೆ ಅಧ್ಯಾಪಕರ ಗುಣಶೀಲ ಚರ್ಚಿಸಲು ತೊಡಗದೆ, ಊರಿನ ಹೊಲಸು ಸುದ್ದಿಗಳಲ್ಲಿ ಆಸಕ್ತಿತೋರದೆ ಸಂಘದೂರರಾಗಿದ್ದ ಆ ಗೆಳೆಯರು ಅವರ ಕಣ್ಣುಗಳಿಗೆ 'ವಿಚಿತ್ರ ಮೃಗ'ಗಳಾಗಿ ಕಂಡುಬಂದರು. ಶಂಕರ ಶ್ರೀಧರರ ಪ್ರತಿಕಕ್ಷಿಗಳ ತಂಡದ ನಾಯಕತ್ವವನ್ನು ನಾರಾಯಣಸ್ವಾಮಿ ವಹಿಸಿದ್ದ. ತನ್ನ ಸಂಗ ಬಿಟ್ಟನೆಂದು ಅವನಿಗೆ ಶ್ರೀಧರನ ಮೇಲೆ ಕೋಪ; ತನ್ನ ಸಂಗ ಶ್ರೀಧರನಿಗೆ ಬಿಡಿಸಿದನೆಂದು ಶಂಕರನ ಮೇಲೆ ಕೋಪ.

ಶ್ರೀಧರ ಮತ್ತು ಶಂಕರನನ್ನು ದಿನಕ್ಕೊಂದು ಬಾರಿಯಾದರೂ ಕೆಣಕದಿದ್ದರೆ ನಾರಾಯಣಸ್ವಾಮಿಗೆ ತಿಂದ ಅನ್ನ ಜೀರ್ಣವಾಗುತ್ತಿರಲಿಲ್ಲ. ಭೋಜನ ಶಾಲೆಗೆ ಬರುತ್ತಿದ್ದ ಗೆಳೆಯರನ್ನು ನೋಡಿ,

"ಬಂದರಪ್ಪಾ ಇಬ್ಬರು ದಾರ್ಶನಿಕರು" ಎಂದು ಪರಿಹಾಸ್ಯ ಮಾಡುತ್ತಿದ್ದ.

ಬೆಳಿಗ್ಗೆ ಇಬ್ಬರೂ ವಾಕಿಂಗ್ ಮುಗಿಸಿಕೊಂಡು ಬರುತ್ತಿರುವುದನ್ನು ಬಳಗಕ್ಕೆ ತೋರಿಸುತ್ತಾ,

"ತಪಸ್ಸು ಮುಗಿಸಿಕೊಂಡು ಬರುತ್ತಿದ್ದಾರಪ್ಪಾ. ಒಬ್ಬ ರಮಣ ಮಹರ್ಷಿ–ಇನ್ನೊಬ್ಬ ಯೋಗಿ ಅರವಿಂದ" ಎನ್ನುತ್ತಿದ್ದ.

ನಾರಾಯಣಸ್ವಾಮಿ ಬಳಗದವರು ಅವನ ಪ್ರತಿ ಮಾತಿಗೂ ಪ್ರೋತ್ಸಾಹಕೊಡುತ್ತಿದ್ದರು. ಕಪಿಗೆ ಹೆಂಡ ಕುಡಿಸಿದಂತಾಗಿ ಅವನು ಉತ್ತೇಜಿತನಾಗುತ್ತಿದ್ದ.

ಒಮ್ಮೊಮ್ಮೆ ನಾರಾಯಣಸ್ವಾಮಿಯ ಭರ್ತ್ಸನೆ ಶಂಕರನ ಮನಶ್ಶಾಂತಿಗೆ ಭಂಗ ತಂದು ಅವನಲ್ಲಿ ಕೋಪವನ್ನುದ್ರೇಕಿಸುತ್ತಿತ್ತು.

"ಎಂದೋ ಈ ನಾರಾಯಣಸ್ವಾಮಿಯ ಕೈಕಾಲು ಮುರಿದುಬಿಡುತ್ತೇನೆ" ಎಂದು ಶಂಕರ ಹೇಳಿದ.

ಶ್ರೀಧರ ಅವನನ್ನು ಸಮಾಧಾನಗೊಳಿಸುತ್ತ

"ಮೂರ್ಖನ ಜತೆ ಗುದ್ದಾಡುವವನನ್ನು ಮೂರ್ಖನೆನ್ನುತ್ತಾರಲ್ಲದೆ ಜಾಣ ಎಂದು ಯಾರೂ ಹೇಳುವುದಿಲ್ಲ."

"ಇವನ ಹುಚ್ಚಾಟ ಸಹಿಸಲಸಾಧ್ಯವಾಗುತ್ತಿದೆ ಶ್ರೀಧರ್."

"ಹುಚ್ಚನ ಮಾತಿಗೆ ನಾವೂ ನಕ್ಕು ಸುಮ್ಮನಾಗೋಣ."

ಶ್ರೀಧರ, ಶಂಕರ ಇವರ 'ಅಹಿಂಸಾವ್ರತ'ವನ್ನು ಕಂಡ ಹಾಸ್ಟೆಲಿನ ಕೆಲವು ವಿದ್ಯಾರ್ಥಿಗಳೇ ನಾರಾಯಣಸ್ವಾಮಿಯ ಅಲ್ಪತನ ಕಂಡು ಜುಗುಪ್ಸೆಗೊಂಡರು. ಒಂದು ದಿನ ಭೋಜನ ಶಾಲೆಯಲ್ಲಿ ಸೀನಿಯರ್ ಕ್ಲಾಸಿನ ವಿದ್ಯಾರ್ಥಿ ಭರತರಾಜ್ ಪ್ರತಿಭಟನೆ ತೋರಿಸಿದ.

ಶ್ರೀಧರ, ಶಂಕರ ಭೋಜನಶಾಲೆ ಪ್ರವೇಶಿಸಿದ ಕೂಡಲೇ ಯಥಾಕ್ರಮದಂತೆ ನಾರಾಯಣಸ್ವಾಮಿ,

"ಎದ್ದು ನಿಂತುಕೊಂಡು ವೆಲ್‌ಕಂ ಹೇಳಿರಪ್ಪಾ–ಇಬ್ಬರು ಮಹರ್ಷಿಗಳು ಬರುತ್ತಿದ್ದಾರೆ" ಎಂದ.

ಅವನ ಬಳಗ ಕಿಸಕ್ಕನೆ ನಕ್ಕಿತು.

ಅವರ ಸಾಲಿನಲ್ಲೇ ಕುಳಿತಿದ್ದ ಭರತರಾಜ್,

"ಹಾಸ್ಟೆಲ್ ವಿದ್ಯಾರ್ಥಿಗಳ ಮೊರೇಲ್ ತೀರ ಕೆಟ್ಟುಹೋಯಿತು. ಮರ್ಯಾದಸ್ಥರು ಇಲ್ಲಿ ಇರುವುದೇ ಕಷ್ಟವಾಗಿದೆ."

ಎಂದ. ನಾರಾಯಣಸ್ವಾಮಿ ಅವನ ಕಡೆ ತಿರುಗಿ,

"ಯಾರ ವಿಷಯ ನೀವು ಹೇಳುತ್ತಿರುವುದು ಭರತರಾಜ್!"

ಎಂದು ಕೇಳಿದ.

"ನಿಮ್ಮ ವಿಷಯವೇ ಹೇಳುತ್ತಿದ್ದೇನೆ ನಾರಾಯಣಸ್ವಾಮಿ."

"ನನ್ನ ವಿಷಯಕ್ಕೂ ನಿಮಗೂ ಏನು ಸಂಬಂಧ?"

"ಶ್ರೀಧರ್—ಶಂಕರ್ ವಿಷಯಕ್ಕೂ ನಿಮಗೂ ಏನು ಸಂಬಂಧ?"

"ನಾನು ಅವರ ವಿಷಯ ಮಾತನಾಡಲಿಲ್ಲ."

"ಈಗ ತಾನೆ ಅವರನ್ನು 'ಇಬ್ಬರು ಮಹರ್ಷಿಗಳು' ಎಂದು ಹಾಸ್ಯ ಮಾಡಿದಿರಿ—ಸುಳ್ಳೇಕೆ ಹೇಳುವಿರಿ ನಾರಾಯಣಸ್ವಾಮಿ?"

"ಸುಳ್ಳು—ಗಿಳ್ಳು ಅನ್ನಬೇಡಿರಿ."

"ಇನ್ನೇನು ಹೇಳಬೇಕು?"

"ಷಟ್ ಅಪ್ ಅಂಡ್ ಮೈಂಡ್ ಯುವರ್ ಓನ್ ಬಿಸಿನೆಸ್!"

ಭರತರಾಜ್ ಕುಳಿತಿದ್ದಲ್ಲಿಂದ ಚಂಗನೆ ಹಾರಿ ನಾರಾಯಣಸ್ವಾಮಿಯ ಷರಟು ಹಿಡಿದುಕೊಂಡ.

ಶ್ರೀಧರ, ಶಂಕರ ಇಬ್ಬರೂ ಅಲ್ಲಿಗೆ ಬಂದು ಭರತರಾಜನನ್ನು ಕೈ ಹಿಡಿದುಕೊಂಡು ಹೊರಗೆ ಕರೆದುಕೊಂಡು ಹೋದರು. ವಾರ್ಡನ್ನಿಗೆ ಕಂಪ್ಲೇಂಟ್ ಮಾಡುತ್ತೇನೆಂದು ನಾರಾಯಣಸ್ವಾಮಿ ಕೂಗಾಡಿದ.

ಅಂದಿನಿಂದ ಹಾಸ್ಟೆಲ್ಲಿನಲ್ಲಿ ನಾರಾಯಣಸ್ವಾಮಿಯ ಸೊಲ್ಲು ಅಡಗಿ ಹೋಯಿತು.

ಬೆಂಗಳೂರಿನಲ್ಲಿ ನಾಟಕವಾಡುತ್ತಿದ್ದ ತಾವರೆಕೆರೆ ಸಾಹುಕಾರರ ಕಂಪೆನಿಯ ವಿಷಯ ಆಗಾಗ್ಗೆ ಶಂಕರನ ಕಿವಿ ಮುಟ್ಟುತ್ತಿತ್ತು.

ಹಾಸ್ಟೆಲಿನ ಕೆಲವು ವಿದ್ಯಾರ್ಥಿಗಳು ಬೆಂಗಳೂರಿಗೆ ಹೋದಾಗ ನಾಟಕಗಳನ್ನು ನೋಡಿ ಬಂದಿದ್ದರು. ಅವರು ಕಂಪನಿಯ ವಿಷಯ, ರಾಣೀ ಪಾರ್ಟು ಮಾಡುವ ಮಂಗಳೆ ವಿಷಯ, ಮ್ಯಾನೇಜರ್ ಭೀಮಾಚಾರಿ ವಿಷಯ—ಜತೆಗೆ ತಾವರೆಕೆರೆ ಸಾಹುಕಾರನ ವಿಷಯ ಕೇಳಿ ಶಂಕರನಿಗೆ ತಲ್ಲಣವಾಗುತಿತ್ತು.

ಶಂಕರ ಖಿನ್ನನಾಗುತ್ತಿದ್ದುದನ್ನು ಕಂಡು ಶ್ರೀಧರ ಮೆಲ್ಲನೆ,

"ನಾರಾಯಣಸ್ವಾಮಿಯ ಹೊಲಸು ಮಾತುಗಳಿಗೆ ನಾವು ಕಿವಿಗೊಡದಿದ್ದುದೇ ಒಳ್ಳೆಯದಾಯಿತಲ್ಲವೇ ಶಂಕರ್?" ಎಂದು ಕೇಳಿದ.

"ಹೌದು. ಭರತರಾಜ್ ಅವನ ಬಾಯಿ ಮುಚ್ಚಿಸಿದ."

"ಹಾಗೇ ಬೆಂಗಳೂರು ಸುದ್ದಿಗಳಿಗೂ ನಾವು ಕಿವಿಗೊಡಬಾರದು."

"ಅವೇ ಬಂದು ಕಿವಿಗೆ ಅಪ್ಪಳಿಸುವುದಲ್ಲಾ ಶ್ರೀಧರ್?"

"ಗಾಂಧೀಜಿಯವರ ಮೂರು 'ವಾನರಗುರುಗಳ' ಚಿತ್ರ ನೋಡಿರುವೆಯಲ್ಲವೇ?"

"ನೋಡಿದ್ದೇನೆ."

"ಪಾಪ ನೋಡಬೇಡ—ಪಾಪ ಕೇಳಬೇಡ—ಪಾಪ ಮೂಸಿ ನೋಡಬೇಡ ಎನ್ನುವುದಲ್ಲವೇ ಅವರ ಸಂದೇಶ."

"ಅಣ್ಣ ನಾಶದ ಹಾದಿ ಹಿಡಿದಿದ್ದಾನೆ ಶ್ರೀಧರ್."

"ಗಾಳಿ ಮಾತನ್ನೆಲ್ಲಾ ಸತ್ಯವೆಂದು ನಂಬುವೆಯಾ?"

"ಇಲ್ಲ—ಆದರೆ ಈ ವಿಷಯದಲ್ಲಿ ಗಾಳಿ ಮಾತೆಲ್ಲಾ ಅಸತ್ಯವಾದುದಲ್ಲ."

"ಅದಕ್ಕೆ ನೀನೇನು ಮಾಡಬಲ್ಲೆ?"

"ಏನೂ ಮಾಡಲಾರೆನಲ್ಲಾ ಎಂಬುದೇ ನನ್ನ ವ್ಯಥೆ. ತಾಯಿ, ಅತ್ತಿಗೆಯರನ್ನು ಸ್ಮರಿಸಿಕೊಂಡರೆ ಕರುಳು ಕತ್ತರಿಸುತ್ತದೆ."

"ಒಮ್ಮೆ ಅಣ್ಣನೊಂದಿಗೇ ಈ ವಿಷಯ ನೀನೇಕೆ ಚರ್ಚಿಸಬಾರದು?"

"ಅಮ್ಮ ಬೇಡವೆನ್ನುತ್ತಾಳೆ. ಅಣ್ಣನಿಗೂ ನನಗೂ ಇರುವ ಸೌಹಾರ್ದ ಎಲ್ಲಿ ತಪ್ಪಿ ಹೋಗುವುದೋ ಎಂದವಳು ಭಯಪಡುತ್ತಾಳೆ."

"ಅದೂ ನಿಜವೇ."

"ಈ ಸಮಸ್ಯೆ ಕೊನೆಗಾಣುವುದೆಂತು?—ಎಂದಿಗೆ ಶ್ರೀಧರ್?"

"ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ."

"ಮಾನವ ಪ್ರಯತ್ನಕ್ಕೆ ಅವಕಾಶವೇ ಇಲ್ಲವೇ?"

"ಇದೆ—ಭಗವಂತನ ಇಚ್ಛೆಯಾದಾಗ."

"ಅವನ ಇಚ್ಛೆಯಾಗುವುದು ಯಾವಾಗ?"

"ಅವನ ಲೀಲೆಯನ್ನು ಭೇದಿಸಲು ನಾವು ಸಮರ್ಥರೇ!"

"ನಿನ್ನ ಮಾತು ನಾನು ಒಪ್ಪಲಾರೆ ಶ್ರೀಧರ್; ಆದರೆ ಒಪ್ಪದಿರಲೂ ಸಾಧ್ಯವಿಲ್ಲ."

ಎಂದು ಶಂಕರ ಕಳಕಳಿಯಿಂದ ನುಡಿದ.

## ೩೧

ಚಿನ್ನಪ್ಪ ಕೋಪದಿಂದ ಕೆಂಡಕೆಂಡವಾಗಿದ್ದ. ಮಾತು ಆಡಿಸಿದವರ ಮೇಲೇ ಬೀಳುತ್ತಿದ್ದ. ಚೆಲುವಾಚಾರಿ ಪೆಚ್ಚು ಪೆಚ್ಚಾಗಿ ತಂದೆಯ ಕೈಯಲ್ಲಿದ್ದ ಸುತ್ತಿಗೆಯಿಂದಲೇ ಪೆಟ್ಟು ತಿಂದಿದ್ದ. ಅವನ ಪಕ್ಷವಹಿಸಿ ಮಾತನಾಡಿದ ಸುಂದರಮ್ಮನೂ ಒದೆಗಡಬು ತಿನ್ನಬೇಕಾಯಿತು.

ಭೀಮಾಚಾರಿ ಸುಬ್ರಹ್ಮಣ್ಯನಿಗೆ ವಾಗ್ದಾನಮಾಡಿದಂತೆ ಚಿನ್ನಪ್ಪನ ಹಣವನ್ನು ಹಿಂದಿರುಗಿಸಿರಲಿಲ್ಲ. ಚಿನ್ನಪ್ಪನ ಹಣವನ್ನೂ ನುಂಗಿ ಸುಬ್ರಹ್ಮಣ್ಯನ ಹಣವನ್ನೂ ಸ್ವಾಹಾಮಾಡಿದ್ದ.

ಹಿರೋಡೆಯಲ್ಲಾದ ಆತಿಥ್ಯಕ್ಕೆ ಬೆರಗಾದ ಚಿನ್ನಪ್ಪ, ಭೀಮಾಚಾರಿ ಹಾಕಿದ ಹಾರ ತಂದು ಮನೆಯಲ್ಲಿ ತೋರಿಸಿ ತನ್ನ ದೊಡ್ಡಸ್ತಿಕೆ ಮೆರೆಸಿಕೊಂಡಿದ್ದ. ಹಿರೋಡೆ ಕ್ಯಾಂಪು ಮುಗಿಯುವುದರೊಳಗೇ ತನ್ನ ಈಪ್ಸಿತಗಳೆಲ್ಲವೂ ಪೂರೈಸುತ್ತವೆಯೆಂದು ಎಣಿಕೆ ಹಾಕಿಕೊಂಡಿದ್ದ ಚಿನ್ನಪ್ಪನಿಗೆ ಆಶಾಭಂಗವಾಗಿತ್ತು.

ಸುಬ್ರಹ್ಮಣ್ಯ ಹಿರೋಡೆಯಲ್ಲಿ–ಕಂಪೆನಿ ಮನೆಯಲ್ಲಿಯೇ ಬಲವಾಗಿ ತಳವೂರಿ ನಿಂತಿದ್ದ.

ಭೀಮಾಚಾರಿ ಮೆಲ್ಲನೆ ಚಿನ್ನಪ್ಪನ ಮೂಗಿಗೆ ತುಪ್ಪ ಹಚ್ಚಿ,

"ಬೆಂಗಳೂರು ಕ್ಯಾಂಪಿಗೆ ಬಂದು ಬಿಡು ಚಿನ್ನಪ್ಪ. ನಿನ್ನ ಕೆಲಸ ಆಗುಮಾಡಿಕೊಡುತ್ತೇನೆ."

ಎಂದು ಆಸೆ ತೋರಿಸಿ ಚಿನ್ನಪ್ಪನನ್ನು ಸಾಗುಗಳಿಸಿದ್ದ.

ಸುಬ್ರಹ್ಮಣ್ಯ ತಾವರೆಕೆರೆಯಲ್ಲಿದ್ದ ಸಮಯ ಸಾಧಿಸಿ ಚಿನ್ನಪ್ಪ, ಎರಡು ಸಾವಿರ ರೂಪಾಯಿಗಳನ್ನು ಜತೆಮಾಡಿಕೊಂಡು ಬೆಂಗಳೂರಿಗೆ ಹೋದ.

ಕಂಪೆನಿ ಮನೆಯಲ್ಲಿ ಕಾಫಿ–ಊಟ; ಭೀಮಾಚಾರಿ ಜತೆಯಲ್ಲಿ ತಾಂಬೂಲ; ಪ್ರತಿನಿತ್ಯ ನಾಟಕಾವಲೋಕನಗಳು ಸಾಗಿದವಲ್ಲದೆ ಚಿನ್ನಪ್ಪನ ಇಷ್ಟಾರ್ಥ ಪೂರೈಸಲಿಲ್ಲ.

ಈ ಮಧ್ಯೆ ಭೀಮಾಚಾರಿ ಉಪಾಯವಾಗಿ ಚಿನ್ನಪ್ಪ ತಂದಿದ್ದ ಎರಡು ಸಾವಿರ ರೂಪಾಯಿಗಳನ್ನು ಕಸಿದುಕೊಂಡಿದ್ದ.

ಚಿನ್ನಪ್ಪನಿಗೆ ತಲೆ ಬೇಸರ ಬಂದಿತು. ಒಂದು ದಿನ ಭೀಮಾಚಾರಿಯನ್ನು ಪ್ರತಿಭಟಿಸಿ "ಏನಯ್ಯ ನಿನ್ನ ಆಟ!" ಎಂದು ಕೇಳಿದ.

"ಆಟವೇನು ಬಂತು?"

"ನಾಟಕ ನೋಡುವುದಕ್ಕೆ ನನ್ನ ಬಾ ಅಂದೆಯಾ?"

"ಇನ್ನು ಏತಕ್ಕೆ ಬಾ ಅಂದೆ."

"ನೀನೂ ನಾನೂ ಒಂದೇ ಗರಡಿಯಲ್ಲಿ ಸಾಮು ಮಾಡಿದವರು. ನನಗೇ ವರಸೆ ತೋರಿಸುತ್ತೀಯಲ್ಲೋ ಭೀಮಣ್ಣ."

"ನೀನು ಗರಡಿ ಮನೆಗೆ ಬರುವುದನ್ನು ಬಿಟ್ಟಮೇಲೆ ನಾನು ಕೆಲವು ಹೊಸ ಸಾಮುಗಳನ್ನು ಕಲಿತೆ ಚಿನ್ನಪ್ಪ."

"ಅದನ್ನು ನನ್ನ ಮೇಲೆ ಪ್ರಯೋಗಿಸುತ್ತಿದ್ದೀಯಾ?"

"ಇನ್ನೂ ಪ್ರಯೋಗಿಸಿಲ್ಲ."

"ಒಟ್ಟು ಐದು ಸಾವಿರ ನನ್ನ ಕೈಬಿಟ್ಟು ಹೋಗಿದೆ."

"ಹೌದು."

"ನನ್ನ ಹಣದ ಗತಿ!"

"ನೋಡು ಆಚಾರಿ—ನಾಟಕವೂ ಒಂದು ವ್ಯಾಪಾರ. ಇತರ ವ್ಯಾಪಾರಗಳಲ್ಲಿ ನಾವು ಹಣ ಇನ್ವೆಸ್ಟ್ ಮಾಡುವ ಹಾಗೆ ಇದರಲ್ಲಿಯೂ ಇನ್ವೆಸ್ಟ್ ಮಾಡುತ್ತೇವೆ; ಕೆಲವು ವ್ಯಾಪಾರಗಳು ಯಶಸ್ವಿಯಾಗಿ ಕೈ ತುಂಬ ವರಮಾನ ಬರುತ್ತದೆ. ಕೆಲವು ವ್ಯಾಪಾರಗಳಲ್ಲಿ ನಷ್ಟವಾಗಿ ಕೈ ಬರಿದಾಗುತ್ತದೆ. ವ್ಯಾಪಾರದಲ್ಲಿ ಅಪಾಯ ತಪ್ಪಿದ್ದೇ ಅಲ್ಲ. ಬೊಗಸೆ ಗಟ್ಟಳೆ ಹಣ ಸಂಪಾದಿಸಬೇಕೆಂದು ಬಯಸುವವನು ಧೈರ್ಯವಾಗಿ ಮುನ್ನುಗ್ಗಲೇ ಬೇಕು."

"ನಾನು ಸಂಪಾದನೆ ಮಾಡಬೇಕೂಂತ ನಿನಗೆ ಹಣ ಕೊಡಲಿಲ್ಲ ಭೀಮಣ್ಣ—ಬಂಡವಾಳ ಹಾಕಿ ನಾನು ವ್ಯಾಪಾರ ಮಾಡಬೇಕೆಂದರೆ ನಾಟಕದ ಕಂಪೆನಿಗೆ ಹಣ ಸುರಿಯಬೇಕಾಗಿರಲಿಲ್ಲ."

"ಹೋಗಲಿ—ನಾಟಕಕಲೆಯ ಉದ್ಧಾರಕ್ಕಾಗಿ ಐದು ಸಾವಿರ

ರೂಪಾಯಿ ದಾನಮಾಡಿದ್ದೇನೆಂದು ತಿಳಿದುಕೋ. ನಿನ್ನ ಔದಾರ್ಯದ ಫಲವಾಗಿ ನಿನಗೆ ಆಚಂದ್ರಾರ್ಕವಾದ ಕೀರ್ತಿ ಲಭಿಸುತ್ತದೆ."

"ನಾನು ಕೀರ್ತಿ ಹುಡುಕಿಕೊಂಡು ಬರಲಿಲ್ಲ ಭೀಮಣ್ಣ."

"ಇನ್ನೇನು ಹುಡುಕಿಕೊಂಡು ಬಂದೆ."

"ಏನು ಎನ್ನುವುದು ನಿನಗೆ ಗೊತ್ತು."

"ಗೊತ್ತಿಲ್ಲ—ಬಾಯಿಬಿಟ್ಟು ಹೇಳು."

"ಸುಬ್ರಹ್ಮಣ್ಯ ಮಂಗಳೆಯನ್ನು ಬಿಟ್ಟುಬಿಡುತ್ತಾನೆಂದು ನೀನೇ ಹೇಳಿದೆಯಲ್ಲ."

"ಹೇಳಿದೆ—ಅವನು ಬಿಡಲಿಲ್ಲ."

"ನನ್ನಿಂದ ಹಣ ಕೀಳುವುದಕ್ಕೆ ಸುಳ್ಳು ಆಸೆ ತೋರಿಸಿದೆ."

"ಸುಬ್ರಹ್ಮಣ್ಯ ಮಂಗಳೆಯನ್ನು ಬಿಟ್ಟುಬಿಡುತ್ತಾನೆಂದು ಹೇಳಿದೆನಲ್ಲದೆ ಅವಳು ನಿನ್ನ ಕೊರಳಿಗೆ ಹೂಮಾಲೆ ಹಾಕುವುದಕ್ಕೆ ಸಿದ್ಧವಾಗಿದ್ದಾಳೆಂದು ಹೇಳಿದೆನೇ?"

"ನಿನ್ನ ಮೋಸದ ಬಾಳಿಗೆ ಬೆಂಕಿ ಬೀಳ. ನಂಬಿದವರ ತಲೆಯ ಮೇಲೆ ಕಲ್ಲು ಹಾಕುವುದರಲ್ಲಿ ನಿಸ್ಸೀಮ."

"ನೋಡು ಚಿನ್ನಪ್ಪ–ಇದು ಕಂಪೆನಿ ಮನೆ—ಇಲ್ಲಿ ನೂರಾರು ಜನರಿದ್ದಾರೆ–ನೀನು ಬಾಯಿ ಮಾಡಿದರೆ ಏನೂ ಪ್ರಯೋಜನವಿಲ್ಲ–ನಿನ್ನ ಹಣ ಇಂದಲ್ಲ ನಾಳೆ ನಿನ್ನ ಮುಖದ ಮೇಲೆ ಬಿಸಾಡುತ್ತೇನೆ. ನೀನು ಗಲಭೆ ಮಾಡಿದರೆ ಬರುವ ಹಣ ಕಳೆದುಕೊಳ್ಳುತ್ತೀ."

"ನಿನ್ನಂಥ ನೀಚರನ್ನು ಕಡಿದರೂ ಪಾಪ ಬರುವುದಿಲ್ಲ."

"ನನ್ನ ಕಡಿಯುವುದು ಸೊಸೆಯನ್ನು ಕಡಿದಷ್ಟು ಸುಲಭವಲ್ಲ ಆಚಾರಿ."

"...........ಮಗನೇ, ಎಷ್ಟೋ ನಿನ್ನ ಪೊಗರು?"

"ಒಳ್ಳೆಯ ಮಾತಿನಲ್ಲಿ ಹೊರಟು ಹೋಗು ಆಚಾರಿ–ಹೆಚ್ಚು ಮಾತನಾಡಿದರೆ ಆಳನ್ನು ಕರೆದು ಕತ್ತು ಹಿಡಿದು ಆಚೆಗೆ ದಬ್ಬಿಸುತ್ತೇನೆ."

ಕಂಪಿಸುತ್ತ ಚಿನ್ನಪ್ಪ ಎದ್ದು ನಿಂತು,

"ಇರಲಿ–ಇದರ ಫಲ ಅನುಭವಿಸುವೆಯಂತೆ!"

"ಹೋಗೋ–ಹೋಗೋ ಕಳ್ಳ.......ಮಗನೇ."

ಚಿನ್ನಪ್ಪ ಬುಸುಗುಟ್ಟುತ್ತ, ಪ್ರತೀಕಾರದ ಪ್ರತಿಜ್ಞೆ ಮಾಡಿಕೊಂಡು ಅಲ್ಲಿಂದ ಕಂಬಿ ಕಿತ್ತ.

ಚಿನ್ನಪ್ಪನಿಗೆ ಸಹಿಸಲಾಗದಷ್ಟು ಅಪಮಾನವಾಗಿತ್ತು. ಭೀಮಾಚಾರಿಯ ದ್ರೋಹ ಅವನ ರಕ್ತವನ್ನು ಕುದಿಸಿತ್ತು. ನಿರಾಶೆಗೊಂಡಿದ್ದ ಮನಸ್ಸು ವ್ಯಥಿತವಾಗಿ ಪ್ರತೀಕಾರಕ್ಕೆ ಹಾತೊರೆಯುತ್ತಿತ್ತು.

ಚಿನ್ನಪ್ಪ ಊರಿಗೆ ಬಂದವನೇ ಸುಬ್ರಹ್ಮಣ್ಯನನ್ನು ಹುಡುಕಿಕೊಂಡು ಹೋದ. ಸುಬ್ರಹ್ಮಣ್ಯ ಮುಖಗೊಟ್ಟು ಮಾತನಾಡಲಿಲ್ಲ. ಚಿನ್ನಪ್ಪನಿಗೆ ಸ್ವಾಗತವನ್ನು ಬಯಸಲಿಲ್ಲ.

"ನಿನ್ನ ಹತ್ತಿರ ತುಂಬ ಅರ್ಜೆಂಟಾಗಿ ಮಾತನಾಡಬೇಕಾಗಿದೆ. ಸುಬ್ಬಣ್ಣ."

"ಕುಳಿತುಕೊ—ಇಲ್ಲೇ ಮಾತನಾಡು."

"ಮನೆಯಲ್ಲಿ ಮಾತನಾಡುವ ವಿಷಯವಲ್ಲ. ಬಾ. ಹೊರಗೆ ಹೋಗೋಣ."

ಸುಬ್ರಹ್ಮಣ್ಯ ಅರೆಮನಸ್ಸಿನಿಂದ ಅವನನ್ನು ಹಿಂಬಾಲಿಸಿದ.

ಮಾತು ಹೇಗೆ ಆರಂಭಿಸಬೇಕೆಂಬುದೇ ಚಿನ್ನಪ್ಪನಿಗೆ ಒಂದು ಸಮಸ್ಯೆಯಾಯಿತು. ಅವನ ಅವಸ್ಥೆ ನೋಡಲಾರದೆ ಸುಬ್ರಹ್ಮಣ್ಯನೇ ಕೇಳಿದ

"ಭೀಮಾಚಾರಿ ನಿನ್ನ ಮೂರು ಸಾವಿರ ಹಿಂದಕ್ಕೆ ಕೊಟ್ಟನೇ ಚಿನ್ನಪ್ಪ?"

"ಆ ವಿಷಯ ಹೇಳಬೇಕೆಂದೇ ನಾನು ಬಂದುದು."

"ಬಣ್ಣ ಕಟ್ಟದೆ ಇದ್ದದ್ದನ್ನು ಇದ್ದಂತೆ ಹೇಳು."

ಭೀಮಾಚಾರಿ ತನಗೆ ಮಾಡಿದ ಮೋಸವನ್ನು ಚಿನ್ನಪ್ಪ ವಿವರಿಸಿದ.

"ಭೀಮಾಚಾರೀಗೆ ನೀನೇಕೆ ಹಣ ಕೊಡುವುದಕ್ಕೆ ಹೋದೆ?"

"ನಿನ್ನ ಕೇಳಿದನಂತೆ—ನೀನು ಆಗುವುದಿಲ್ಲವೆಂದೆಯಂತೆ–ಹಣ ಒದಗದಿದ್ದರೆ ಕಂಪೆನಿ ನಿಂತುಹೋಗುತ್ತದೆ ಎಂದು ಗೋಳಾಡಿದ—ಕಂಪೆನಿ ನಿಲ್ಲಬಾರದೆಂಬ ಉದ್ದೇಶದಿಂದ ಹಣ ಕೊಟ್ಟೆ."

"ಕಂಪೆನಿ ಆರಂಭಿಸುವುದಕ್ಕೆ, ನಡಸುವುದಕ್ಕೆ ನಾನು ಹಣ ಕೊಟ್ಟಿದ್ದುದು ನಿನಗೆ ಗೊತ್ತಿರಲಿಲ್ಲವೇ?"

"ಗೊತ್ತಿತ್ತು."

"ಈ ಸಂದರ್ಭದಲ್ಲಿ ನೀನು ನನ್ನ ಒಂದು ಮಾತು ಕೇಳಬೇಕಾಗಿತ್ತೋ ಇಲ್ಲವೋ?"

"ಕೇಳಬೇಕಾಗಿತ್ತು ಸುಬ್ಬಣ್ಣ. ಆದರೆ ಆಚಾರಿ ಏನು ಏನೋ ಹೇಳಿ ನನ್ನ ಮರುಳು ಮಾಡಿಬಿಟ್ಟ. ಈ ಸುದ್ದಿ ನಿನ್ನ ಕಿವಿ ಮುಟ್ಟಿಸಬಾರದೆಂದು ಕೇಳಿಕೊಂಡ."

ಸುಬ್ರಹ್ಮಣ್ಯ ತಿರಸ್ಕಾರದಿಂದ ನಕ್ಕು

"ಕೇವಲ ಕಂಪೆನಿಯ ಉದ್ಧಾರದ ಸಲುವಾಗಿಯೇ ನೀನು ಹಣ ಕೊಟ್ಟೆಯಲ್ಲವೇ?"

"ಹೌದು ಸುಬ್ಬಣ್ಣ."

"ಸುಳ್ಳು ಏಕೆ ಹೇಳುತ್ತೀ ಚಿನ್ನಪ್ಪ. ನೀನು ಹಣ ಕೊಟ್ಟದ್ದು ಮಂಗಳೆಯ ಮೇಲಣ ಆಸೆಗಾಗಿ."

"ಏನು ಮಾತಾಡುತ್ತೀ ಸುಬ್ಬಣ್ಣ. ನನಗೆ ಗೌರಮ್ಮನವರು ಬೇರೆ ಮಂಗಳೆ ಬೇರೆಯೇ. ಸ್ನೇಹಿತರ ಹೆಂಡತಿಯರು ನನ್ನ ತಾಯಿಯ ಸಮಾನ. ನನ್ನ ನೀತಿಯ ಬಗ್ಗೆ ನೀನು ಸಂದೇಹಪಡುವುದು ತಪ್ಪು ಸುಬ್ಬಣ್ಣ."

"ನೀನೇನು ಪರನಾರೀ ಸೋದರನೇನು?"

"ಅಲ್ಲ—ಹೆಂಡತಿ ಯಾರು, ತಾಯಿ ಯಾರು ಎಂಬ ತಾರತಮ್ಯ ಜ್ಞಾನ ನನಗಿದೆ. ನಾನೂ ಕೆಟ್ಟಿದ್ದೇನಾದರೂ ತೀರ ಆಚಾರಿಯಷ್ಟು ಕುಲಗೆಟ್ಟುಹೋಗಿಲ್ಲ."

"ಆಚಾರಿ ಏನು ಮಾಡಿದ?"

"ನನ್ನೇಕೆ ಕೇಳುವೆ—ಅವನನ್ನೇ ಕೇಳು."

"ಆಚಾರಿಯ ವಿಷಯ ಎತ್ತಿದವನು ನೀನು—ನೀನೇ ಹೇಳು."

"ಮಂಗಳೆಗೆ ನೀನೊಬ್ಬನೇ ತಾಳಿ ಕಟ್ಟಿಲ್ಲ ಸುಬ್ಬಣ್ಣ. ಆಚಾರಿಯೂ ಕಟ್ಟಿದ್ದಾನೆ. ಇದು ಕಂಪೆನಿ ಮನೆಯಲ್ಲಿ ಎಲ್ಲರಿಗೂ ಗೊತ್ತಿರುವ ವಿಷಯ."

ಚಿನ್ನಪ್ಪನ ಕಠೋರ ಆಪಾದನೆ ಕೇಳಿ ಸುಬ್ರಹ್ಮಣ್ಯ ಗಡಗಡ ನಡು ಗಿದ. ಅವನ ಧ್ವನಿ ಕಂಪಿಸತೊಡಗಿತು. ಕಣ್ಣುಗಳಲ್ಲಿ ರಕ್ತ ತೊಟ್ಟಿಕ್ಕು ವಂತಾಯಿತು. ಸ್ಥೈರ್ಯ ತಂದುಕೊಂಡು

"ಆಚಾರಿ—ಸುಳ್ಳು ಕೆಲಕಾಲ ಬದುಕತ್ತೆ-ಎಲ್ಲಾ ಕಾಲವೂ ಬದು ಕುವುದಿಲ್ಲ. ನೀನೂ ಭೀಮಾಚಾರಿ ಇಬ್ಬರೂ ಮಿತ್ರಘಾತಕರು—ವಿಶ್ವಾಸ ದ್ರೋಹಿಗಳು. ನಿಮ್ಮ ಸಹವಾಸ ಮಾಡುವುದೇ ತಪ್ಪು."

ಎಂದು ಹೇಳಿದವನೇ ಮನೆಯ ಕಡೆ ತಿರುಗಿಬಿಟ್ಟ.

ಸಿಡಿಲಿನ ಆಘಾತಕ್ಕೂ ಅಂಜದ ಚಿನ್ನಪ್ಪ, ಸುಬ್ರಹ್ಮಣ್ಯನ ಸಿಡಿಲು ನುಡಿಗಳನ್ನು ಕೇಳಿ ಅವಾಕ್ಕಾದ. ಮುಂದೆ ಅಡಿಯಿಡಲು ಅವನ ಕಾಲಿ ನಲ್ಲಿ ತ್ರಾಣವಿಲ್ಲವಾಯಿತು.

ಚಿನ್ನಪ್ಪನೆದುರು ಸುಬ್ರಹ್ಮಣ್ಯ ತೋರಿದ ಕ್ಷಾತ್ರ ಮನೆಗೆ ಬಂದ ಮೇಲೆ ಉಳಿಯಲಿಲ್ಲ.

ಮನೆಗೆ ಬಂದವನೇ ಹಾಸಿಗೆಯ ಮೇಲೆ ದೊಪ್ಪನೆ ಕುಸಿದು ಬಿದ್ದ. ಅವನ ಹೃದಯ ಭೇದಿಸಿಕೊಂಡು ಕಂಬನಿಯ ಕಾಲುವೆ ಹರಿಯ ತೊಡಗಿತು.

ಸುಬ್ರಹ್ಮಣ್ಯನ ರೋದನವ ಧ್ವನಿ ಕೇಳಿಸಿದ ಕೂಡಲೆ ಪಾರ್ವತಮ್ಮ ನವರು ಗೌರಿಯ ಬಳಿಗೆ ಬಂದು

"ಗೌರಾ—ಸುಬ್ಬು ಏಕೋ ಕಣ್ಣೀರು ಹಾಕುತ್ತಿದ್ದಾನೆ. ಹೋಗಿ ವಿಚಾರಿಸಮ್ಮ" ಎಂದರು.

ಗೌರಿ ಅತ್ತೆಯನ್ನು ನುಂಗುವಂತೆ ನೋಡಿ

"ಆ ರಂಭೆ ಏನು ಮಾಡಿದಳೋ?" ಎಂದಳು.

"ಹಾಗನ್ನಬಾರದು ಗೌರಾ—ಸುಬ್ಬು ಎಂಥವನಾದರೂ ನಿನ್ನ ಗಂಡ ಅಲ್ಲವೇ?"

"ಹೋಗಿ ಅತ್ತೆ—ಗಂಡನೋ ಹೆಂಡತಿಯೋ?—ಯಾರಿಗೆ ಯಾರಿ ದ್ದಾರೆ ಈ ಕಾಲದಲ್ಲಿ"

ಎಂದು ಬೇಸರದಿಂದ ನುಡಿದಳು.

ಪಾರ್ವತಮ್ಮನವರು ಮೆಲ್ಲನೆ ಸುಬ್ರಹ್ಮಣ್ಯನ ಕೋಣೆ ಪ್ರವೇಶಿಸಿ

ನಿಂತುಕೊಂಡರು. ದುಃಖದ ಕಡಾಯಿಯಲ್ಲಿ ಮುಳುಗಿದ್ದ ಸುಬ್ರಹ್ಮಣ್ಯ ನಿಗೆ ತಾಯಿ ಬಂದದ್ದೂ ಗೊತ್ತಾಗಲಿಲ್ಲ.

ಪಾರ್ವತಮ್ಮನವರು ಮಗನನ್ನು ನೇವರಿಸುತ್ತಾ

"ಸುಬ್ಬಣ್ಣ—ಯಾಕಪ್ಪಾ ಅಳುತ್ತಿದ್ದೀ?" ಎಂದು ಕೇಳಿದರು.

ತಾಯಿಯ ಧ್ವನಿ ಕೇಳಿದ ಸುಬ್ರಹ್ಮಣ್ಯನ ದುಃಖ ಮರುಕಳಿಸಿತು.

"ಅಳಬೇಡಪ್ಪ—ಏನಾಯಿತು ಹೇಳು."

"ನಾನು ಪಾಪಿಯಮ್ಮ—ನಿನ್ನ ಮುಖ ನೋಡುವ ಯೋಗ್ಯತೆಯೂ ನನಗಿಲ್ಲ."

"ಮಕ್ಕಳು ಎಂಥವರೇ ಆಗಲಿ ತಾಯಿ ಅವರನ್ನು ಪಾಪಿಗಳೆಂದು ತಿಳಿಯುವುದಿಲ್ಲ ಸುಬ್ಬಣ್ಣ."

"ನಿಷ್ಕರುಣೆ, ಮೋಸ ತುಂಬಿದ ಈ ಲೋಕದಲ್ಲಿ ನೀನು........"

"ನನ್ನ ಮಾತಿರಲಿ—ಏನಾಯಿತು ಹೇಳು."

"ಸದ್ಯ ನನ್ನ ಏನೂ ಕೇಳಬೇಡಮ್ಮ. ನಾನೊಂದು ಪಶು."

"ಸುಬ್ಬೂ-ಇಲ್ಲಿ ನೋಡು. ಒಂದು ನಿಮಿಷ ನಾನು ಹೇಳುವ ಮಾತುಗಳನ್ನು ಚಿತ್ತವಿಟ್ಟು ಕೇಳು.—ನೀನು ಮಾಡಿರುವುದು 'ಸರಿ' ಎಂದು ನಾನು ಹೇಳಲಾರೆ. ಗೌರಿಗೆ ನೀನು ತುಂಬ ಅನ್ಯಾಯ ಮಾಡಿದ್ದೀ. ನಮಗೆಲ್ಲಾ ನಿಷ್ಕಾರಣವಾಗಿ ಮನೋವ್ಯಥೆ ಉಂಟುಮಾಡಿರುವೆ—ಆದರೆ ಚೆಲ್ಲಿಹೋದ ಹಾಲು ನೆನಸಿಕೊಂಡು ಅತ್ತರೆ ಪ್ರಯೋಜನವಿಲ್ಲ—ತಪ್ಪು ಮಾಡದೆ ಯಾರೂ ಇರುವುದಕ್ಕಾಗುವುದಿಲ್ಲ. ಸಕಾಲದಲ್ಲಿ ತಪ್ಪನ್ನು 'ತಪ್ಪು' ಎಂದು ತಿಳಿದು ತಿದ್ದಿಕೊಳ್ಳುವುದು ವಿವೇಕಿಯ ಲಕ್ಷಣ. ನನ್ನ ಮಕ್ಕಳು ವಿವೇಕಿಗಳೆಂಬ ನಂಬಿಕೆ ನನಗಿದೆ. ನಿನಗೆ ಈಗ ಪಶ್ಚಾತ್ತಾಪ ವಾಗಿದೆ. ಮನಸ್ಸಿನಲ್ಲಿ ಕವಿದಿದ್ದ ಮೋಡಗಳು ಜಾರಿ ತಿಳಿಬೆಳಕು ಬಿತ್ತರಿಸುತ್ತಿದೆ. ಬೆಳಕು ಬೆಳೆಯಲು ಅವಕಾಶ ಕೊಡು."

"ಅಮ್ಮ, ನಿಮಗೆ ನಾನು ಮಾಡಿರುವ ಅನ್ಯಾಯ ಸರಿಪಡಿಸಲು ಸಾಧ್ಯವೇ?"

"ಕ್ರೂರ ಬೇಡ ಮಹಾಕವಿಯಾದ ವಾಲ್ಮೀಕಿಯಾಗಿ ಲೋಕೋತ್ತ ರವಾದ ರಾಮಾಯಣ ಬರೆಯಲಿಲ್ಲವೇ—ಬಿಲ್ವಮಂಗಲ ಮಹಾಭಕ್ತ

ನಾಗಲಿಲ್ಲವೇ? ಭಗವಂತನ ದಯೆ ಬಂದರೆ ಮೂಕ ವಾಚಾಳಿಯಾಗು ತ್ತಾನೆ, ಕುಂಟ ಬೆಟ್ಟ ಹಾರುತ್ತಾನೆ, ಪಾಪಿ ಪುಣ್ಯವಂತನಾಗುತ್ತಾನೆ."

"ಈ ಕರ್ಮ ಬೇಗ ತೊಳೆದುಕೊಂಡುಬಿಡುತ್ತೇನಮ್ಮ."

"ದೇವರು ನಿನಗೆ ಶಕ್ತಿ ಕೊಡಲಿ ಸುಬ್ಬು." ಎಂದು ಆಶೀರ್ವದಿ ಸಿದರು.

ಗೌರಿ ಒಳಗೆ ಕಾಲಿಡಲಿಲ್ಲ.

ಸುಬ್ರಹ್ಮಣ್ಯನ ಮನಸ್ಸು ಗೌರಿಯನ್ನು ನಿರೀಕ್ಷಿಸಿತು—ಬಯಸಿತು. ಅವಳು ಆಗ ಬಂದು ಒಂದೇ ಒಂದು ಹಿತೋಕ್ತಿಯನ್ನಾಡಿದ್ದರೆ ಅವನ ಜೀವ ತುಂಬಿಹೋಗುತ್ತಿತ್ತು.

ಗೌರಿ ಅತ್ತ ಸುಳಿಯಲಿಲ್ಲ.

ಗೌರಿ ಬರಲಿಲ್ಲವೆಂದು ಸುಬ್ರಹ್ಮಣ್ಯ ಕೋಪಿಸಿಕೊಳ್ಳಲಿಲ್ಲ.

ಅವಳ ಮನಸ್ಸು ತಹಬಂದಿಗೆ ಬರಲು ನಾಲ್ಕು ದಿವಸ ಹಿಡಿಯ ಬಹುದು. ಆಗಲಿ—ನಾನೇಕೆ ಅವಸರಪಡಬೇಕು, ಎಂದುಕೊಂಡು ಮೇಲ ಕ್ಕೆದ್ದು ವಸ್ತ್ರ ಧರಿಸಿ ಹೊರಗೆ ಹೊರಡಲನುವಾದ.

ಸುಬ್ರಹ್ಮಣ್ಯನಲ್ಲಿ ಯಾವುದೋ ಪ್ರಬಲ ನಿರ್ಧಾರ ಮೂಡಿತ್ತು. ತಾಯಿಯ ಅಮೃತವಚನಗಳು ಅವನ ಕಿವಿಯಲ್ಲಿ ಝೇಂಕರಿಸುತ್ತಿದ್ದುವು.

ಅಂದೇ ಅವನು ಬೆಂಗಳೂರಿನಲ್ಲಿ ಬಂದಿಳಿದ.

## ೩೨

ಬೆಂಗಳೂರಿಗೆ ಬಂದ ಸುಬ್ರಹ್ಮಣ್ಯ ಯಥಾ ಕ್ರಮದಂತೆ ನೇರವಾಗಿ ಕಂಪೆನಿಯ ಮನೆಗೆ ಹೋಗಲಿಲ್ಲ. 'ಮಾಡರ್ನ್ ಹಿಂದೂ ಹೋಟಲಿ'ನಲ್ಲಿ ಬಿಡಾರ ಮಾಡಿದ.

ನಾಟಕ ರಾತ್ರಿ ಹತ್ತು ಗಂಟೆಗೆ ಆರಂಭವಾಗುತ್ತಿತ್ತು. ಸುಬ್ರಹ್ಮಣ್ಯ ಊಟ ಮುಗಿಸಿ, ಹೊಟೇಲಿನ ಕಾಂಪೌಂಡಿನಲ್ಲಿ ಸ್ವಲ್ಪ ಹೊತ್ತು ತಿರುಗಾಡುತ್ತಿದ್ದು ಅರ್ಧ ಗಂಟೆ ಕಳೆದ ಮೇಲೆ, ನಾಟಕಕ್ಕೆ ಹೋಗಿ ಯಾರಿಗೂ ಕಾಣಿಸಿಕೊಳ್ಳದೆ ಒಂದೂಕಾಲು ರೂಪಾಯಿ ಟಿಕೆಟ್ ಕೊಂಡು ಜನಜಂಗುಳಿಯ ಮಧ್ಯೆ ಕುಳಿತ.

ಮಂಗಳಾಂಬಾ ಕಂಪೆನಿಯ 'ಸದಾರಮೆ' ನಾಟಕ ಜನಪ್ರಿಯವಾಗಿತ್ತು. ಚರ್ವಿತ ಚರ್ವಣವಾಗಿದ್ದ ಆ ಹಳೆಯ ನಾಟಕವನ್ನೇ ಜನ ಪುನಃಪುನಃ ನೋಡಿ ಆನಂದಿಸುತ್ತಿದ್ದರು.

ಅಂದು ಥಿಯೇಟರು ಕಿಕ್ಕಿರಿಯುವಂತಿಲ್ಲದಿದ್ದರೂ ಸಾಕಷ್ಟು ತುಂಬಿತ್ತು. ಸುಬ್ರಹ್ಮಣ್ಯ ಒಂದು ಗಂಟೆ ಕುಳಿತಿದ್ದು ಹೊಟೇಲಿಗೆ ಹಿಂತಿರುಗಿದ.

ಮಂಗಳೆಯ ಮೇಲಣ ಮೋಹ ಸಂಪೂರ್ಣವಾಗಿ ಅವನನ್ನು ಬಿಟ್ಟಿರಲಿಲ್ಲ.

ದೀಪವಾರಿಸಿ ಹಾಸಿಗೆಯ ಮೇಲೆ ಮಲಗಿದ. ಕತ್ತಲೆ ಮನೆಯ ರಜತ ತೆರೆಯ ಮೇಲೆ ಚಿತ್ರಗಳು ಸುಳಿಯುವಂತೆ ಅವನ ಚಿತ್ತಫಲಕದ ಮೇಲೆ ನಾನಾ ಚಿತ್ರಗಳು ಸುಳಿಯಲಾರಂಭಿಸಿದುವು.

'ಮಂಗಳೆಯ ಸ್ನೇಹ ಲಭಿಸಿದ ದಿನ. ಸರ್ವಾಲಂಕಾರಭೂಷಿತೆಯಾಗಿ ಅವಳು ತನ್ನ ಬಳಿಗೆ ಬಂದುದು,

'ತಂದೆ ತೀರಿಕೊಂಡ ದಿನ ಶೋಕಾರ್ತಳಾಗಿದ್ದ ತಾಯಿ ತನ್ನನ್ನೂ ಶಂಕರನನ್ನೂ ಅಪ್ಪಿಕೊಂಡು ಸಮಾಧಾನ ಮಾಡಿದುದು,

'ನಿಂಗವ್ವನ ನಿಷ್ಕಲ್ಮಷ ಮಮತೆ—ಅವಳ ವೀರಾವೇಶ!

'ರಂಗದ ಮೇಲೆ, ದಿವ್ಯದುಕೂಲ, ಆಭರಣ ಧರಿಸಿ, ಬೆಳಕಿನೆದುರು ಮೆರೆದ ಮಂಗಳೆ,

'ಶುಭ್ರಸ್ನಾತಳಾಗಿ, ಮಂಗಳದ್ರವ್ಯಗಳಿಂದ ಅಲಂಕೃತಳಾಗಿ ತೊಡೆಯ ಮೇಲೆ ರವಿಯನ್ನು ಎತ್ತಿಕೊಂಡು ಹಸೆಯ ಮೇಲೆ ಕುಳಿತ ಗೌರಿ,

'ನಾಲ್ಕು ದಿನ ಜತೆಗಿದ್ದು ಮಂಗಳೆಯನ್ನು ಬಿಟ್ಟು ಹೋಗುವಾಗ ಹೃದಯಕ್ಕಾಗುತ್ತಿದ್ದ ಉಮ್ಮಳ,

'ಶಂಕರನನ್ನು ಬಸ್ಸಿನಲ್ಲಿ ಕೂಡಿಸಿ ಬೀಳ್ಕೊಡುವಾಗ ಮನಸ್ಸಿಗಾಗುತ್ತಿದ್ದ ಉಮ್ಮಳ,

'ಕಂಪೆನಿ ಮನೆಗೆ ಕಾಲಿಟ್ಟ ಒಡನೆಯೇ ಪರಮಾನಂದಯ್ಯ, ಭೀಮಾಚಾರಿ ನೀಡುತ್ತಿದ್ದ ಸ್ವಾಗತ, ತೋರುತ್ತಿದ್ದ ಆದರ'

'ಮನೆಗೆ ಕಾಲಿಟ್ಟ ಒಡನೆಯೇ ತಾಯಿಯ ಮುಖದಲ್ಲಿ ಮಿನುಗುತ್ತಿದ್ದ ತೃಪ್ತಿ—ಲಜ್ಜೆತುಂಬಿದ ಗೌರಿಯ ನಯನಸಂದೇಶ.'

ಅತ್ತ ತಾಯಿ — ಇತ್ತ ಜಯಮ್ಮ
ಅತ್ತ ಗೌರಿ — ಇತ್ತ ಮಂಗಳಾ
ಅತ್ತ ನಿಂಗವ್ವ — ಇತ್ತ ಪರಮಾನಂದಯ್ಯ
ಅತ್ತ ಶಂಕರ — ಇತ್ತ ಭೀಮಾಚಾರಿ
ಅತ್ತ ರವಿ — ಇತ್ತ ?

ಸುಬ್ರಹ್ಮಣ್ಯನ ಮನಸ್ಸು ಅಸ್ತವ್ಯಸ್ತವಾಯಿತು. ಅನುಭವಗಳು, ಸ್ಮೃತಿಗಳು, ಜೀವನದ ಅನಂತಾನಂತ ಚಿತ್ರಗಳು.

ಹಾಸಿಗೆಯ ಮೇಲೆ ಹೊರಳಾಡುವುದೇ ಅವನ ಕೆಲಸವಾಯಿತು.

'ಬೇಗ ಬೆಳಗಾಗಬಾರದೇ' ಎಂದು ಉದ್ವಿಗ್ನನಾಗಿ ಚೀರುವನು.

ಕತ್ತಲೆ ಕವಿಯುವುದಕ್ಕೆ ತಡವಾಗುವುದಿಲ್ಲ—ಆದರೆ ಬೆಳಗು ಹರಿಯುವುದಕ್ಕೆ ಸ್ವಲ್ಪ ತಡ.

ಬೆಳಗಾಯಿತು—ಸುಬ್ರಹ್ಮಣ್ಯ ಎದ್ದವನೇ ಸ್ನಾನ ಮುಗಿಸಿಕೊಂಡು ಕುಳಿತ. ಹತ್ತುಗಂಟೆಯ ವರೆಗೆ ಕಾಲ ತಳ್ಳಬೇಕಾಯಿತು. ಕಂಪೆನಿಯ ಮನೆಯಲ್ಲಿ ಸೂರ್ಯೋದಯವಾಗುತ್ತಿದ್ದುದು ಹತ್ತು ಗಂಟೆಯ ಮೇಲೆಯೇ.

ಹತ್ತು ಗಂಟೆ ಹೊಡೆದ ಮೇಲೆ ಸುಬ್ರಹ್ಮಣ್ಯ ಹೊಟೇಲು ಬಿಟ್ಟು ಕಂಪೆನಿಯ ಮನೆಯ ಕಡೆ ಹೊರಟ.

ಬಾಗಿಲಿನಲ್ಲಿಯೇ ಪರಮಾನಂದಯ್ಯ ಸ್ವಾಗತ ಬಯಸಿದ. ಒಳಗೆ ಕಾಲಿಟ್ಟ ಕೂಡಲೆ ಭೀಮಾಚಾರಿ ಬಂದು ಎದುರುಗೊಂಡು

"ಯಾವಾಗ ಬಂದೆ ಸುಬ್ಬಣ್ಣ?" ಎಂದು ಕೇಳಿದ.

"ರಾತ್ರಿ ಬಂದೆ."

"ರಾತ್ರಿ!"

"ಹೌದು ನಿನ್ನೆ ರಾತ್ರಿ."

"ಬಂದವನು ಎಲ್ಲಿಗೆ ಹೋದೆ ?"

"ಹೊಟೇಲಿಗೆ ಹೋದೆ."

"ಕಂಪೆನಿ ಮನೆ ಹಾಳಾಗಿತ್ತೇ?"

"ನನ್ನ ಭಾಗಕ್ಕೆ ಹಾಳಾದಂತೆಯೇ!"

"ಏಕೆ ಸುಬ್ಬಣ್ಣ—ವಿಚಿತ್ರವಾಗಿ ಮಾತನಾಡುತ್ತಿರುವೆ!"

"ಇಲ್ಲ ಆಚಾರಿ. ಇದುವರೆಗೆ ನಾನು ವಿಚಿತ್ರವಾಗಿ ಮಾತನಾಡುತ್ತಿದ್ದೆ—ಈಗ ಸರಿಯಾಗಿ ಮಾತನಾಡಲಾರಂಭಿಸಿದ್ದೇನೆ."

"ಯಾರೋ ನಿನ್ನ ಮನಸ್ಸು ಕೆಡಿಸಿದ್ದಾರೆ ಸುಬ್ಬಣ್ಣ."

"ಕೈ ಹುಣ್ಣಿಗೆ ಕನ್ನಡಿ ಬೇಕೇ?"

"ನಿನ್ನ ನಡೆವಳಿಕೆಯೇ ನನಗೆ ಅರ್ಥವಾಗುತ್ತಿಲ್ಲ ಸುಬ್ಬಣ್ಣ."

"ಅರ್ಥವಾಗುತ್ತದೆ. ಚಿನ್ನಪ್ಪನಿಂದ ನೀನು ತೆಗೆದುಕೊಂಡಿದ್ದ ಹಣ ಹಿಂದಿರುಗಿಸಿದೆಯಲ್ಲವೇ?"

"ಹಿಂದಿರುಗಿಸಬೇಕೆಂದಿದ್ದೇನೆ—ಅವನೇ ಕೈಗೆ ಸಿಕ್ಕಿಲ್ಲ."

"ಹೋಗಲಿ—ಅದು ನಿನ್ನ ವ್ಯವಹಾರ, ನನಗೇನೂ ಸಂಬಂಧವಿಲ್ಲ. ಕಂಪೆನಿಯ ಲೆಕ್ಕಪತ್ರಗಳೆಲ್ಲಾ ಕ್ರಮವಾಗಿಟ್ಟದ್ದೀಯಷ್ಟೆ?"

"ಏಕೆ?"

"ನನಗೆ ಲೆಕ್ಕ ಬೇಕು."

"ನೀನು ಲೆಕ್ಕ ಕೇಳುತ್ತೀಯೆಂದು ಗೊತ್ತಿದ್ದರೆ ಎಲ್ಲವನ್ನೂ ಕ್ರಮವಾಗಿಡುತ್ತಿದ್ದೆ."

"ಸಾವಿರಾರು ರೂಪಾಯಿ ವ್ಯವಹಾರ ಮಾಡುವಾಗ ಲೆಕ್ಕ ಇಡ ಬೇಕೆನ್ನುವುದನ್ನೂ ನಾನು ತಿಳಿಸಬೇಕೇ?"

"ನಾನೇನು ಮಾಡಬೇಕು?"

"ಲೆಕ್ಕ ಸಿದ್ಧಮಾಡಿ ತೋರಿಸಬೇಕು. ಇದಕ್ಕೆ ಎಷ್ಟು ದಿನ ಬೇಕಾಗುತ್ತದೆ?"

"ಮೂರು ದಿನವಾದರೂ ಬೇಕು."

"ಆಗಬಹುದು—ನಾಲ್ಕನೆಯ ದಿನ ನಾನು ಆಡಿಟರನ್ನು ಕರೆದು ಕೊಂಡು ಬರುತ್ತೇನೆ—ಲೆಕ್ಕಗಳು ಸಿದ್ಧವಾಗಿಲ್ಲದಿದ್ದರೆ ಪೋಲೀಸ್ ಕಂಪ್ಲೇಂಟು ಕೊಡಬೇಕಾಗುತ್ತದೆ."

"ಬಹಳ ಬಿಸಿಯಾಗಿದ್ದೀಯಲ್ಲಾ ಸುಬ್ಬಣ್ಣ?"

"ನಾನು ಬಿಸಿಯಾಗಿದ್ದೇನೆಯೊ, ತಂಪಾಗಿದ್ದೇನೆಯೋ ಅದನ್ನು ಕಟ್ಟಿಕೊಂಡು ನಿನಗೇನಾಗಬೇಕು."

"ಲೆಕ್ಕ ತೆಗೆದುಕೊಂಡು ಏನು ಮಾಡುತ್ತೀ? ಒಂದು ವೇಳೆ ನಾನು ಕಂಪೆನಿ ಬಿಟ್ಟರೆ ನೀನು ನಿಂತುಕೊಂಡು ನಡಸಬಲ್ಲೆಯಾ?"

"ಅದು ನನ್ನಿಷ್ಟ— ನಾನು ಬೇಕಾದರೆ ಕಂಪೆನಿ ನಡಸುತ್ತೇನೆ, ಬೇಡವಾದರೆ ಮುಚ್ಚುತ್ತೇನೆ." ಎಂದವನೇ ಹೊರಟೇ ಬಿಟ್ಟ.

ಭೀಮಾಚಾರಿ ಅವನನ್ನು ಹಿಂಬಾಲಿಸಲಿಲ್ಲ.

ಪರಮಾನಂದಯ್ಯ ಸುಬ್ರಹ್ಮಣ್ಯನನ್ನನುಸರಿಸಿ ಹೋಗಿ "ಮಂಗಳೆ ಯನ್ನು ನೋಡುವುದಿಲ್ಲವೇ?" ಎಂದು ಕೇಳಿದ.

ಸುಬ್ರಹ್ಮಣ್ಯ ಶಲ್ಯದೃಷ್ಟಿಯನ್ನು ಪರಮಾನಂದಯ್ಯನ ಮೇಲೆ ಬೀರಿ

"ಭೀಮಾಚಾರಿ ನೋಡುತ್ತಿದ್ದಾನಲ್ಲ—ಸಾಲದೇ?"

ಎಂದವನೇ ವೇಗವಾಗಿ ನಡೆದುಬಿಟ್ಟ. ಪರಮಾನಂದಯ್ಯ ಮುಖ ಸಪ್ಪಗೆ ಮಾಡಿಕೊಂಡು ಕಂಪೆನಿ ಮನೆಗೆ ಹಿಂದಿರುಗಿದ.

ಬೆಂಗಳೂರಿನಲ್ಲಿ ಮೂರು ದಿನ ಕಳೆಯುವುದು ಹೇಗೆಂಬುದೇ ಸುಬ್ರಹ್ಮಣ್ಯನಿಗೆ ಚಿಂತೆಯಾಯಿತು. ಅಂದು ಸಂಜೆ ಸಿನಿಮಾ ಮಂದಿರ ದಲ್ಲಿ ಕುಳಿತು ಕಾಲ ಕಳೆದ. ಮಾರನೆಯ ದಿನ ಬೆಳಿಗ್ಗೆ ಲಾಲ್‌ಬಾಗ್

ಯಾತ್ರೆಯಾಯಿತು, ಸಂಜೆ ಕಬ್ಬನ್ ಪಾರ್ಕ್. ಅದರ ಮಾರನೆಯ ದಿನ ಬೆಳಿಗ್ಗೆ ಗವಿಗಂಗಾಧರೇಶ್ವರನ ಗುಡಿಯಲ್ಲಿ ಕಾಲಯಾಪನೆ. ಸಂಜೆಗೆ ಮತ್ತೆ ಸಿನಿಮಾ ಮಂದಿರ.

ಮೂರನೆಯ ದಿನ ಸುಬ್ರಹ್ಮಣ್ಯ ಹೊಟೇಲು ಬಿಡಲಿಲ್ಲ. ತಮ್ಮನಿಗೆ ಕಾಗದ ಬರೆದು ಬಹಳ ದಿವಸಗಳಾಗಿದ್ದುವು. ತನ್ನ ಸಮಸ್ತ ಅನುಭವವನ್ನೂ ವರ್ಣಿಸಿ ಗೆಳೆಯನಿಗೆ ಬರೆಯುವಂತೆ ಶಂಕರನಿಗೆ ಕಾಗದ ಬರೆದ. ಅಂವೇ ತಾಯಿಗೂ ಕಾಗದ ಬರೆದು ಕೆಲಸ ಮುಗಿಸಿಕೊಂಡೇ ಬರಲು ಬೆಂಗಳೂರಿನಲ್ಲಿ ನಿಂತಿರುವುದಾಗಿ ತಿಳಿಸಿದ.

ನಾಲ್ಕನೆಯ ದಿನ ಸುಮಾರು ಹತ್ತು ಗಂಟೆಗೆ ಹೊಟೇಲ್ ಆಡಿಟರ್ ಜಯರಾಯನನ್ನು ಜತೆಯಲ್ಲಿ ಕರೆದುಕೊಂಡು ಸುಬ್ರಹ್ಮಣ್ಯ ಕಂಪೆನಿ ಮನೆಯ ಬಳಿ ಬಂದ. ಹೊರಗಿನ ನೋಟವೇ ದಿಗಿಲುಹುಟ್ಟಿಸುತ್ತಿತ್ತು. ಕಂಪೆನಿ ಮನೆ ಹಾಳು ಹಾಳು ಸುರಿಯುತ್ತಿತ್ತು. ಅಲ್ಲಲ್ಲಿ ನಟರು, ಕಂಪೆನಿಯ ನೌಕರರು ಗುಂಪು ಕಟ್ಟಿಕೊಂಡು ಬೀಡಿ ಸೇದುತ್ತಾ ಮಾತಾಡುತ್ತಾ ನಿಂತಿದ್ದರು.

ಸುಬ್ರಹ್ಮಣ್ಯನನ್ನು ಸ್ವಾಗತಿಸಲು ಭೀಮಾಚಾರಿಯಾಗಲಿ ಪರಮಾನಂದಯ್ಯನಾಗಲಿ ಹೊರಬರಲಿಲ್ಲ. ಸುಬ್ರಹ್ಮಣ್ಯ ತೊಟ್ಟಿಯಲ್ಲಿ ಕುಳಿತು ಆಳಿನ ಕೈಯಲ್ಲಿ ಹೇಳಿಕಳಿಸಿದ.

ಪರಮಾನಂದಯ್ಯ, ಜಯಮ್ಮ ಇಬ್ಬರೂ 'ಗೊಳೋ' ಎಂದು ದುಃಖಿಸಿಕೊಂಡೇ ಹೊರಬಂದರು.

ಸುಬ್ರಹ್ಮಣ್ಯ ಗಾಬರಿಯಾಗಿ "ಏನಾಯಿತು ಪರಮಾನಂದಯ್ಯ?" ಎಂದು ಕೇಳಿದ.

"ಮನೆ ಹಾಳಾಗಿಹೋಯಿತು ಸುಬ್ಬಣ್ಣ. ಆಚಾರಿ ಸರ್ವನಾಶ ಮಾಡಿಬಿಟ್ಟ."

"ಸರ್ವನಾಶ ಮಾಡಿದ ಎಂದರೇನು?"

"ಮಂಗಳೆಯನ್ನು ಕಟ್ಟಿಕೊಂಡು ಓಡಿಹೋದ—ಕಂಪೆನಿ ಕ್ಯಾಷು, ನಗನಾಣ್ಯ ಎಲ್ಲಾ ಮಾಯವಾಗಿವೆ."

"ಕೊನೆಗೆ ಇಲ್ಲಿಗೆ ಬಂದಿತೇ!"

"ಆಕ್ಟರುಗಳಿಗೆ, ಆಳುಗಳಿಗೆ, ಸಂಬಳ ಕೂಡ ಕೊಟ್ಟಿಲ್ಲ."

ಸುಬ್ರಹ್ಮಣ್ಯ ಮೆಲ್ಲನೆ ಜಯರಾಯನಿಗೆ 'ನೀವು ಹೋಗಬಹುದು' ಎಂದು ಹೇಳಿ ಕಳುಹಿಸಿ

"ಕಂಪೆನಿಯನ್ನೇನು ಮಾಡುತ್ತೀ ಪರಮಾನಂದಯ್ಯ?" ಎಂದು ಕೇಳಿದ.

"ಏನು ಮಾಡುವುದೋ ಒಂದಕ್ಕೂ ದಿಕ್ಕೇ ತೋರದಂತಾಗಿದೆ. ಸಂಬಳಕ್ಕಾಗಿ ಇವರೆಲ್ಲ ಪ್ರಾಣ ಹಿಂಡುತ್ತಿದ್ದಾರೆ."

"ಮೋಸಕ್ಕೆ ಮೋಸದ ಶಾಸ್ತಿಯಾಯಿತಲ್ಲವೇ?"

"ನಾನು ಯಾರಿಗೂ ಮೋಸಮಾಡಲಿಲ್ಲ ಸುಬ್ಬಣ್ಣ."

"ನನಗೆ....?"

"ನಿನಗೂ ಮೋಸ ಮಾಡಲಿಲ್ಲ."

"ನನಗೆ ಮೋಸ ಮಾಡಿ ಭೀಮಾಚಾರಿಗೆ ಸದರ ಕೊಡದಿದ್ದರೆ ಈ ಆಪತ್ತು ಒದಗುತ್ತಿತ್ತೇನು?"

ಪರಮಾನಂದಯ್ಯ ಸುಬ್ರಹ್ಮಣ್ಯನ ಪಾದವಿಡಿದು

"ಈಗ ನನ್ನ ಕೈ ಬಿಡಬೇಡ ಸುಬ್ಬಣ್ಣ." ಎಂದು ದೈನ್ಯದಿಂದ ಪ್ರಾರ್ಥಿಸಿದ.

"ನಿನ್ನ ಕೈ ದೇವರೇ ಎಂದೋ ಬಿಟ್ಟಿದ್ದಾನೆ ದಾಸರಿ. ಜೋಳಿಗೆ ಏಕನಾದವೇ ನಿನಗೆ ಗತಿ."

"ಕಂಪೆನಿ ಬದುಕಿಸು ಸುಬ್ಬಣ್ಣ."

"ಇನ್ನೂ ಯಾರ ಮನೆ ಹಾಳುಮಾಡಬೇಕೆಂದು ಲೆಕ್ಕ ಹಾಕಿರುವೆ?"

"ನಾನೇನು ಮಾಡಲಿ, ಅದನ್ನಾದರೂ ಹೇಳು."

"ಕಂಪೆನಿ ಸಾಮಾನು ಮಾರಿ ನಟರಿಗೆ ನೌಕರರಿಗೆ ಸಂಬಳ ಕೊಡು."

"ಥಿಯೇಟರ್ ಬಾಡಿಗೆ ಕೊಟ್ಟಿಲ್ಲ—ಅವರು ಸಾಮಾನು ಬಿಡುವುದಿಲ್ಲ."

"ಸಂಬಳಸಾರಿಗೆ ಕೊಡಬೇಕಾದರೆ ಎಷ್ಟು ಹಣ ಬೇಕಾಗುತ್ತದೆ?"

"ಎರಡು ಮೂರು ಸಾವಿರವಾದರೂ ಬೇಕು."

"ಅಷ್ಟು ಸಾಧ್ಯವಿಲ್ಲ. ಇವತ್ತು ಊರಿಗೆ ಹೋಗುತ್ತೇನೆ–ನಾಳೆ

ಸಾವಿರ ರೂಪಾಯಿ ಕಳಿಸಿಕೊಡುತ್ತೇನೆ. ಅದರಲ್ಲಿ ಎಲ್ಲಾ ಮುಗಿಸಿಕೊ —ಇನ್ನು ಕೊನೆಯ ಮಾತೊಂದಿದೆ. ನೀನೂ ಜಯಮ್ಮ ಊರಿಗೆ ಹಿಂದಿರುಗುವಿರೇನು?"

"ಈ ಮುಖ ಎತ್ತಿಕೊಂಡು ಹೇಗೆ ಬಾಳ್ವೆ ಮಾಡಲಿ ಸುಬ್ಬಣ್ಣ. ಹೊಲ, ಮನೆ ಮಾರಿಬಿಟ್ಟು ಎಲ್ಲಿಯಾದರೂ ದೂರ ಹೋಗಿ ಕಾಲ ತಳ್ಳಿ ಬಿಡುತ್ತೇನೆ."

"ಅದೇ ಒಳ್ಳೆಯದು. ಇನ್ನು ಮೇಲೆ ನೀವು ಯಾರೂ ನನ್ನ ಮುಖದರ್ಶನ ಮಾಡಕೂಡದು.—ಎದುರಿಗೆ ಸಿಕ್ಕಿದರೂ ಮಾತನಾಡಿಸ ಕೂಡದು. ಆ ಕರಾರಿಗೆ ಒಪ್ಪಿಕೊಂಡರೇ ನಾನು ಹಣ ಕಳಿಸುವುದು."

"ಸುಬ್ಬಣ್ಣಾ...."

ಇನ್ನು ನಾನು ನಿನಗೆ ಸುಬ್ಬಣ್ಣನಲ್ಲ. ಅಪರಿಚಿತನಾದ ತಾವರೆಕೆರೆ ಸುಬ್ರಹ್ಮಣ್ಯ—ಅದನ್ನು ಚೆನ್ನಾಗಿ ನೆನಪಿನಲ್ಲಿಟ್ಟುಕೋ." ಎಂದು ಹೇಳಿದವನೇ ಅಲ್ಲಿಂದ ಹೊರಟುಬಿಟ್ಟ.

ಅದೇ ಸಂಜೆ ಸುಬ್ರಹ್ಮಣ್ಯ ಊರು ತಲುಪಿ ತಾಯಿಗೆ

"ಕರ್ಮ ತೊಳೆದುಕೊಂಡುಬಿಟ್ಟೆನಮ್ಮ." ಎಂದ. ಪಾರ್ವತಮ್ಮನವರು ತೃಪ್ತಿಯಿಂದ ಮಗನ ಗಲ್ಲವನ್ನು ಮೃದುವಾಗಿ ನೇವರಿಸಿದರು.

## ೩೩

ಸುಬ್ರಹ್ಮಣ್ಯನ ಕಾಗದ ಬಂದಾಗ ಶಂಕರ ಹಾಸ್ಟೆಲಿನಲ್ಲಿರಲಿಲ್ಲ. ಮಧ್ಯಾಹ್ನ ಉಪಾಹಾರಕ್ಕೆ ಬಂದಾಗ, ಬಾಗಿಲ ಬಳಿ ಕಾಗದ ಬಿದ್ದಿದ್ದುದನ್ನು ಕಂಡು ಕೈಗೆತ್ತಿಕೊಂಡು ಓದಲು ಮೊದಲು ಮಾಡಿದ.

ಅವನ ಮುಖದ ಮೇಲೆ ಸುಳಿಯುತ್ತಿದ್ದ ಸಂತೋಷ, ಆಶ್ಚರ್ಯ, ತೃಪ್ತಿಯ ಭಾವನೆಗಳನ್ನು ಕಂಡು ಶ್ರೀಧರನಿಗೆ ಕುತೂಹಲವಾಯಿತು.

"ಯಾರದು ಕಾಗದ ಶಂಕರ್?" ಎಂದು ಕೇಳಿದ.

"ಅಣ್ಣನದು."

"ಏನೋ ವಿಶೇಷ ಸಮಾಚಾರ ಇದ್ದ ಹಾಗಿದೆ. ನಿನ್ನ ಮದುವೆ ಗೊತ್ತು ಮಾಡಿರುವರೇನು?"

"ವಿಶೇಷ ಸಮಾಚಾರವೇ ಇದೆ ಶ್ರೀಧರ್. ಅಣ್ಣನ ಕಾಗದದ ತುಂಬ ಬರೀ ಸಕ್ಕರೆ ಹಾಲು."

"ಸಂತೋಷ."

"ಈ ಕೆಲವು ಪಂಕ್ತಿಗಳನ್ನು ಕೇಳು:

'ನನ್ನ ಸ್ವಾರ್ಥಜೀವನದಿಂದ ಎಷ್ಟು ಜನರ ಮನಸ್ಸಿಗೆ ವೃಥಾ ನೋವನ್ನು ಕೊಡುತ್ತಿದ್ದೇನೆಂಬುದು ಮನವರಿಕೆಯಾಗಿದೆ. ದೇವತಾ ಸಮಾನಳಾದ ತಾಯಿಯನ್ನೂ ನಾನು ಕಡೆಗಾಣಿಸಿದೆ. ಗೌರಿಯ ಮನಸ್ಸಿಗೆ ತುಂಬ ನೋವನ್ನುಂಟುಮಾಡಿದೆ. ಮನೆಯಲ್ಲಿ ನಿಲ್ಲುವುದಕ್ಕೆ ಕೂಡ ನೀನು ಬೇಸರಪಟ್ಟುಕೊಳ್ಳುವಂತೆ ಮಾಡಿದೆ.

'ಆದರೆ ಈ ದಿನಗಳಲ್ಲಿ ನಾನು ಸುಖವಾಗಿರಲಿಲ್ಲ. ಸುಖ ತಾನಾಗಿಯೇ ಸಿಕ್ಕಬೇಕು—ಅದನ್ನು ಅರಸಿಕೊಂಡು ಹೋದರೆ ಸಿಕ್ಕುವುದಿಲ್ಲ. ನಿಜವಾದ ಸುಖ ಸ್ವಾರ್ಥದಲ್ಲಿಲ್ಲ—ಪರಾರ್ಥದಲ್ಲಿದೆ. ಹತ್ತು ಜನ ಸುಖವಾಗಿರುವುದನ್ನು ನೋಡುವುದೇ ನಿಜವಾದ ಸುಖ.

'ಒಂದು ದೃಷ್ಟಿಯಿಂದ ಈ ದಿನಗಳಲ್ಲಿ ನನಗಾದ ಅನುಭವಕ್ಕೆ ನಾನು ಮರುಗುವುದಿಲ್ಲ. ತಂದೆಯು ಗಳಿಸಿಟ್ಟುಹೋದ ಸಂಪತ್ತಿನ ಯಾಜಮಾನ್ಯ ನನ್ನನ್ನು ಜೀಜವಾಬ್ದಾರಿ ವ್ಯಕ್ತಿಯನ್ನಾಗಿ ಮಾಡಿತು. ಈಗ ನನಗೆ ಜ್ಞಾನೋದಯವಾಗಿದೆ. ಯಾವುದು ನಿತ್ಯ ಯಾವುದು ಅನಿತ್ಯ, ಯಾವುದು ಕೃತಕ, ಯಾವುದು ಸಹಜ, ಯಾವುದು ಕ್ಷಣಿಕ, ಯಾವುದು ಶಾಶ್ವತ ಎನ್ನುವುದನ್ನು ಅರ್ಥಮಾಡಿಕೊಳ್ಳುವ ಶಕ್ತಿ ಹುಟ್ಟಿದೆ ಎಂದು ಧೈರ್ಯವಾಗಿ ಹೇಳಬಲ್ಲೆ.'

ವಿಚಾರಪರವಶನಾಗಿದ್ದ ಶ್ರೀಧರ "ನಿನ್ನ ಅಣ್ಣಂದಿರ ಕಾಗದ ಅಮೂಲ್ಯವಾದುದು ಶಂಕರ್. ಸಂಸ್ಕೃತಿ ರಕ್ತಗತವಾಗಿದ್ದರೆ ಅದು ಹೇಗೆ-- ಒಂದಲ್ಲ ಒಂದು ಕಾಲದಲ್ಲಿ—ತನ್ನ ಸ್ವಾಮ್ಯವನ್ನು ಸ್ಥಾಪಿಸುತ್ತದೆ ಎನ್ನುವುದಕ್ಕೆ ಉತ್ತಮ ನಿದರ್ಶನವಾಗಿದೆ."

"ಅಣ್ಣನ ಮಾತುಗಳನ್ನು ಪೂರ್ಣವಾಗಿ ನಂಬಬಹುದೇ?"

"ಅಕ್ಷರಶಃ ನಂಬಬಹುದು—ಏಕೆ ಅನುಮಾನ ಪಡುತ್ತೀ?"

"ನಮ್ಮ ಕಣ್ಣುಮುಚ್ಚಲು ಇದೂ ಒಂದು ಆಟವಾಗಿರಬಾರದೇಕೆ ಎಂದು ಹೊಳೆಯಿತು."

"ನಿನ್ನ ಕಲ್ಪನೆ ತಪ್ಪು. ಹೇಗನ್ನುವಿಯೋ–ಮನೆಯ ಯಾಜಮಾನ್ಯ ನಿಮ್ಮ ಅಣ್ಣಂದಿರದು. ಅವರು ಅದನ್ನು ಸರ್ವಾಧಿಕಾರಿಗಳಂತೆ ಚಲಾಯಿಸುತ್ತ ಬಂದಿದ್ದಾರೆ. ನಿನ್ನಲ್ಲಿ ಆತ್ಮನಿವೇದನೆ ಮಾಡಿಕೊಳ್ಳುವ ಇರಲು ಅವರಿಗೆ ಸಾಧ್ಯವಿರಲಿಲ್ಲವೇ? ವಯಸ್ಸಿನಲ್ಲಿ ಚಿಕ್ಕವನಾದ ನಿನ್ನನ್ನು ಮಿತ್ರನಂತೆ ಪರಿಗಣಿಸಿ ಅವರು ತಮ್ಮ ಅಂತರಂಗ ಬಿಚ್ಚಿಟ್ಟಿರುವುದೇ ಅವರ ಋಜುಭಾವನೆ, ಋಜುನಡತೆಯ ಸಾಕ್ಷಿಯಾಗಿದೆ."

"ನಿಜ—ಅಣ್ಣನ ಅಂತರಂಗ ಪರಿಶುದ್ಧವಾದುದೆಂದು ನಾನೂ ಬಲ್ಲೆ. ದಸರಾ ರಜಕ್ಕೆ ನೀನು ನನ್ನ ಜತೆ ಬರಲೇಬೇಕೆಂದು ಈಗ ಧೈರ್ಯವಾಗಿ ಕರೆಯಬಲ್ಲೆ ಶ್ರೀಧರ್. ಗೆಲುವಿಲ್ಲದ ಮನೆಗೆ ನಿನ್ನನ್ನು ಹೇಗೆ ಕರೆದುಕೊಂಡು ಹೋಗುವುದೆಂದು ಚಿಂತಿಸುತ್ತಿದ್ದೆ–ಅಣ್ಣ ನನ್ನ ಚಿಂತೆ ನಿವಾರಿಸಿದೆ."

"ಕಳೆದ ನವರಾತ್ರಿಯನ್ನು ನಾನು ನಿಮ್ಮ ಊರಿನಲ್ಲಿಯೇ ಕಳೆದುದು ನೆನಪಿದೆಯೇ ಶಂಕರ್?"

"ನೆನಪಿದೆ."

"ಈ ನವರಾತ್ರಿಗೆ ನಾನು ಊರಿಗೆ ಹೋಗದಿದ್ದರೆ ತಾಯಿ ನೊಂದುಕೊಳ್ಳುತ್ತಾರೆ."

"ಹಾಗಾದರೆ ನಾನು ಒತ್ತಾಯಮಾಡುವುದಿಲ್ಲಪ್ಪ."

"ನಮ್ಮ ಮಾತಿನ ಭರದಲ್ಲಿ ತಿಂಡಿಯನ್ನೇ ಮರೆತುಬಿಟ್ಟೆವು."

"ನಮ್ಮ ಪಾಲು ಸಿಕ್ಕುತ್ತದೋ ?"

"ನೋಡೋಣ ಬಾ."

ಎಂದು ಶ್ರೀಧರ ಶಂಕರನನ್ನು ಹಾಸ್ಟೆಲಿನ ಭೋಜನಶಾಲೆಗೆ ಕರೆದುಕೊಂಡು ಹೋದ. ಉಪಾಹಾರ ನಡೆದೇ ಇತ್ತು. ಶಂಕರ ಶ್ರೀಧರ ಇಬ್ಬರಿಗೂ ಅವರ ಪಾಲು ದೊರೆಯಿತು.

ಉಪಾಹಾರ ಮುಗಿದ ಮೇಲೆ ಶಂಕರ,

"ಶ್ರೀಧರ್, ನಿನಗೆ ಕ್ಲಾಸಿದೆಯೇ?"

"ಒಂದೇ ಗಂಟೆ ಪಾಠವಿದೆ."

"ಚಕ್ಕರ್ ಹೊಡೆಯಲಾರೆಯಾ ?"

"ಏಕೆ ?"

"ನನ್ನ ಮನಸ್ಸಿಗೇನೋ ಉಲ್ಲಾಸವಾಗಿದೆ. ಶಾಸ್ತ್ರಿಗಳನ್ನೂ ಕರೆದುಕೊಂಡು ಕನ್ನಂಬಾಡಿಗೆ ಹೋಗಿಬರೋಣ."

"ಅವರಿಗೆ ಕ್ಲಾಸಿದ್ದರೆ ....?"

"ಕಾಲೇಜಿನಲ್ಲಿ ನೋಡಿಕೊಂಡು ಅವರೊಂದಿಗೆ ನೇರವಾಗಿ ಸ್ಟೇಷನ್ನಿಗೆ ಹೋಗೋಣ—ನಾಲ್ಕೂವರೆಗೆ ಒಂದು ಗಾಡಿಯಿದೆ."

"ನಿನಗೆ ಕ್ಲಾಸ್ ಇಲ್ಲವೇ ?"

"ಇದೆ—ಆದರೆ ಕ್ಲಾಸಿನಲ್ಲಿ ಕೂಡಲು ಮನಸ್ಸಿಲ್ಲ."

"ತಥಾಸ್ತು—ನಡೀ ಹೋಗೋಣ. ಈ ವರ್ಷ ನೀನೂ ನಾನೂ ಇಬ್ಬರೂ ಪ್ಯಾಸಾಗುವ ಸಂಭವವಿಲ್ಲ—ಸದ್ಯ, ನಮ್ಮ ಸಹವಾಸದಿಂದ ಶಾಸ್ತ್ರಿಗಳ ಕೆಲಸಕ್ಕೆ ಸೊನ್ನೆ ಬೀಳದಿದ್ದರೆ ಸಾಕು."

ಶ್ರೀಧರ ಹೋಗಿ ಶಾಸ್ತ್ರಿಗಳನ್ನು 'ಸ್ಟಾಫ್ ರೂಮಿ'ನಲ್ಲಿ ಕಂಡ. ಶಾಸ್ತ್ರಿಗಳು ಯಾವುದೋ ಪುಸ್ತಕ ಓದುವುದರಲ್ಲಿ ಮಗ್ನರಾಗಿದ್ದರು.

ಶ್ರೀಧರ ಅವರ ಮುಂದೆ ಕುಳಿತು

"ಯಾವುದು ಸಾರ್. ಹೊಸ ಪುಸ್ತಕ?"

"ಫಾದರ್ ಹೆರಾಸ್‌ರವರ 'ಮೀನ್‌ಕಣ್'—ವೈದಿಕ ಸಾಹಿತ್ಯದಲ್ಲಿ ಮೀನಕಣ್ಣಿನ ಮೇಲೆ ಬಂದಿರುವ ಉಲ್ಲೇಖನಗಳನ್ನೂ ಅದರ ಸಂಕೇತ ವನ್ನೂ ಕುರಿತು ಬರೆದಿದ್ದಾರೆ–ಸ್ವಾರಸ್ಯವಾದ ಪುಸ್ತಕ."

ಶ್ರೀಧರ್ ಪಿಸು ಧ್ವನಿಯಲ್ಲಿ "ಸಾರ್" ಎಂದ.

"ಏನು ಶ್ರೀಧರ್?"

"ಈಗ ಎಷ್ಟು ಗಂಟೆ ಕೆಲಸವಿದೆ ಸಾರ್."

"ಕೊನೆಯ ಗಂಟೆ ಪಾಠವಿದೆ. ಏಕೆ?"

"ಪುರಸತ್ತು ಮಾಡಿಕೊಳ್ಳುವುದು ಸಾಧ್ಯವೇ ಸಾರ್."

"ಏನಪ್ಪಾ ಐಡಿಯಾ?"

"ನಿಮ್ಮನ್ನು ಕರೆದುಕೊಂಡು ಕನ್ನಂಬಾಡಿಗೆ ಹೋಗಬೇಕೆಂದು ಶಂಕರ್ ತುಂಬ ಆತುರವಾಗಿದ್ದಾನೆ."

"ಇವತ್ತೇ ಹೋಗಬೇಕೇ? ಶನಿವಾರ ಭಾನುವಾರ ರಜಾ ಇರುತ್ತದೆ. ಆಗ ಹೋದರಾಯಿತು."

"ಇವತ್ತು ತಾವು ಬರದಿದ್ದರೆ ಶಂಕರನ ಮನಸ್ಸು ಚಿಕ್ಕದಾಗುತ್ತದೆ ಸಾರ್."

"ಐದು ನಿಮಿಷ ತಡೆಯಿರಿ. ಪ್ರಿನ್ಸಿಪಾಲರಿಗೆ ಹೇಳಿಬಿಟ್ಟು ಬರು ತ್ತೇನೆ." ಎಂದು ಎದ್ದು ಹೋಗಿ ಐದು ನಿಮಿಷಗಳಲ್ಲಿ ಹಿಂದಿರುಗಿ "ಶಂಕರ್ ಎಲ್ಲಿ?" ಎಂದು ಕೇಳಿದರು.

"ಕಾಲೇಜ್ ಗೇಟಿನ ಬಳಿ ಇದ್ದಾನೆ ಸಾರ್."

"ಫ್ರೆಂಚ್‌ಲೀವ್ ಎಂದು ಕಾಣುತ್ತದೆ."

"ಇಬ್ಬರೂ........"

ಶಾಸ್ತ್ರಿಗಳು ನಸುನಕ್ಕು ಶ್ರೀಧರನ ಜತೆ ಹೊರಟರು. ಶಂಕರ ಬಾಗಿಲಿನಲ್ಲಿ ಅವರನ್ನು ಕೂಡಿಕೊಂಡ. ನಾಲ್ಕೂವರೆಯ ಗಾಡಿಯಲ್ಲಿ

ಮೂವರೂ ಹೊರಟು 'ಕೃಷ್ಣರಾಜಸಾಗರ' ಸ್ಟೇಷನ್ನಿನಲ್ಲಿಳಿದು ಕಟ್ಟೆಗೆ ಬಂದರು.

ಕಟ್ಟೆಯ ಹೊಟೇಲಿನಲ್ಲಿ ಉಪಾಹಾರ ಮುಗಿಸಿಕೊಂಡು ಕಾರಂಜಿಗಳ ವೈಖರಿಯನ್ನೂ, ತೋಟದ ಸೌಂದರ್ಯವನ್ನೂ ನೋಡುತ್ತಾ ತೋಟದ ಒಂದು ಕೊನೆಗೆ ಬಂದು ಕುಳಿತರು.

ಆದೇ ಸೂರ್ಯಾಸ್ತವಾಗುತ್ತಿತ್ತು. ಮುಳುಗುವ ಸೂರ್ಯನ ಹೊಂಗಿರಣಗಳ ಕಾಂತಿ ಕಾರಂಜಿಗಳ ತುಂತುರು ಹನಿಗಳನ್ನು ಚಿನ್ನದ ಗುಂಡುಗಳಾಗಿ ಮಾರ್ಪಡಿಸಿತ್ತು.

ಸೌಂದರ್ಯಪ್ರಮತ್ತಳಾದ ಪ್ರಕೃತಿ ಅಂದು ಸಂಜೆ ಶಾಂತಳಾಗಿದ್ದಳು.

ಶ್ರೀಧರ ಸೂಕ್ಷ್ಮವಾಗಿ ಶಂಕರನಿಗೆ ಬಂದಿದ್ದ ಕಾಗದದ ವಿಷಯ ಶಾಸ್ತ್ರಿಗಳಿಗೆ ತಿಳಿಸಿದ. ಶಾಸ್ತ್ರಿಗಳು ಮೌನವಾಗಿಯೇ ಕುಳಿತಿದ್ದರು.

ಶ್ರೀಧರ, ಶಂಕರ ಇಬ್ಬರೂ ಮೌನ ಮುರಿಯಲೆತ್ನಿಸಲಿಲ್ಲ. ನಾಲ್ಕಾರು ನಿಮಿಷಗಳು ಕಳೆದಿರಬಹುದು. ಶಾಸ್ತ್ರಿಗಳು

"ಸೈಜವಾದ ಸಂಸ್ಕೃತಿ ಹತ್ತಿಯಲ್ಲಿ ಸುತ್ತಿಟ್ಟ ಕೆಂಡದಂತೆ. ಅದು ಹೊಗೆಯಾಡಬೇಕಾದರೆ ಸ್ವಲ್ಪ ಕಾಲ ಹಿಡಿಯುತ್ತದೆ. ಇಂಥ ಅಣ್ಣನನ್ನು ಪಡೆದ ನೀವು ಭಾಗ್ಯಶಾಲಿಗಳು ಶಂಕರ್. ಏಕೆಂದು ನಿಮ್ಮ ಮನಸ್ಸು ಪ್ರಫುಲ್ಲವಾಗಿದೆಯೆಂಬುದು ಅರ್ಥವಾಯಿತು."

"ಇದನ್ನು 'ಆನಂದ'ವೆಂದು ಕರೆಯಬಹುದೇ ಸಾರ್?" ಎಂದು ಶ್ರೀಧರ ಕೇಳಿದ.

"ಏಕೆ ಕರೆಯಬಾರದು ?"

"ಆನಂದಕ್ಕೆ ಸ್ವಾರ್ಥದ ಸೋಂಕೂ ಇರಬಾರದಲ್ಲವೇ ?"

"ಶಂಕರರ ಆನಂದದಲ್ಲಿ ಸ್ವಾರ್ಥವಿದೆಯೇ ?"

"ಮನೆಯ ವಾತಾವರಣ ಶಾಂತವಾಯಿತು—ತಾನಲ್ಲಿ ನೆಮ್ಮದಿಯಿಂದ ಇರಬಹುದು—ಎನ್ನುವುದೂ ಸ್ವಾರ್ಥವಲ್ಲವೆ ?"

"ಮನೆಯ ವಾತಾವರಣ ಶಾಂತವಾದರೆ ಮನೆಯವರು ನೆಮ್ಮದಿಯಾಗಿರುತ್ತಾರೆಂದು ಶಂಕರರು ಯೋಚಿಸಬಾರದೇಕೆ ?"

ಶಂಕರ ಸ್ವಲ್ಪ ಮುಂದೆ ಬಂದು ಕುಳಿತು "ಸಾರ್, ಈಗ ನಾನೂ ಶ್ರೀಧರ 'ಕಠೋಪನಿಷತ್ತು' ಓದುತ್ತಿದ್ದೇವೆ. ಕಠದಲ್ಲಿ ಯೋಗದ ಪ್ರಸ್ತಾಪವಿದೆ. ಗೀತೆ ಯೋಗದ ವಿಷಯ ವಿಪುಲವಾಗಿ ಚರ್ಚಿಸಿದೆ. ಗೀತೆ ಯೋಗಕ್ಕೆ ಕೊಟ್ಟಿರುವ ವ್ಯಾಖ್ಯೆ ಸರಿಯಾದುದೇ?"

"'ಯೋಗಃ ಕರ್ಮಸು ಕೌಶಲಂ' ಅಲ್ಲವೇ ನೀವು ಕೇಳುತ್ತಿರುವುದು?"

"ಹೌದು."

"ಈ ಸಂಶಯ ನಿಮ್ಮಲ್ಲಿ ಏಕೆ ಹುಟ್ಟಿತು?"

"ಅಷ್ಟಾಂಗಯೋಗದ (ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ) ಘಟ್ಟಗಳನ್ನು ದಾಟದೆ ಸಾಧಕ ಯೋಗಿಯಾಗಲು ಸಾಧ್ಯವೇ?"

"ಗಿಡದ ಮೇಲಣ ದೋರೆಗಾಯಿ ಎರಡು ರೀತಿಯಲ್ಲಿ ಹಣ್ಣಾಗುತ್ತದೆ ಶಂಕರ್. ಗಿಡದ ಮೇಲೆ ಅವುಗಳನ್ನು ಬಿಟ್ಟರೆ ಪ್ರಕೃತಿನಿಯಮಾನುಸಾರವಾಗಿ ಅದು ಹಣ್ಣಾಗುತ್ತದೆ; ಈ ಕ್ರಮ ಸ್ವಲ್ಪ ಸಾವಕಾಶ. ಸಂತೆಗೆ ಹಣ್ಣು ಒಯ್ಯುವ ಆತುರವಿರುವ ವ್ಯಾಪಾರಿಗಳು ದೋರೆಗಾಯಿ ಕಿತ್ತು, ಹುಲ್ಲಿನಲ್ಲಿ ಅಡೆ ಹಾಕಿ ಹೊಗೆಯನ್ನು ಹಾಯಿಸಿ ಹಣ್ಣು ಮಾಡುತ್ತಾರೆ. ಈ ಕ್ರಮ ಕಡಿಮೆ ಕಾಲ ತೆಗೆದುಕೊಳ್ಳುತ್ತದೆ. ಗೀತಾಚಾರ್ಯ ಹೇಳಿರುವುದು ಮೊದಲನೆಯ ಮಾರ್ಗ. ತಡವಾದರೂ ಸುಭಗವಾದ ಕ್ರಮ. ಪಾತಂಜಲಿ ಮಹರ್ಷಿ ಹೇಳಿರುವುದು ಎರಡನೆಯ ಮಾರ್ಗ. ಕ್ಷಿಪ್ರವಾಗಿ ಸಾಧಿಸಲನುಕೂಲವಾದುದು."

"ಸಾವಕಾಶವಾಗಿ ಕೂಡುವ ಸಹನೆ ಸಾಧಕನಿಗಿರುತ್ತದೆಯೆ?"

"ಇಲ್ಲದಿರುವುದರಿಂದಲೇ ಅವನು ಕ್ಷಿಪ್ರಮಾರ್ಗವನ್ನು ಹುಡುಕುತ್ತಾನೆ. ಅವನಿಗಿಂತಲೂ ಆತುರಗಾರನಾಗಿರುವವನು ವಾಮಮಾರ್ಗ ಹಿಡಿಯುತ್ತಾನೆ."

"ಇವುಗಳಲ್ಲಿ ಯಾವ ಯಾವ ಮಾರ್ಗ ಒಳ್ಳೆಯದು ಸಾರ್?"

"ಮಾರ್ಗಾನುಸರಣೆ ಸಾಧಕನ ಮನೋವೃತ್ತಿಯನ್ನವಲಂಬಿಸುತ್ತದೆ. ಗೀತೆಯ ಮಾನದಂಡವನ್ನಿಟ್ಟುಕೊಂಡು ನೋಡಿದರೆ ಸಾತ್ವಿಕ

ನಿಗೆ ಸಹಜ ಮಾರ್ಗ; ರಾಜಸಿಗೆ ಅಷ್ಟಾಂಗ ಯೋಗ; ತಾಮಸಿಗೆ ವಾಮಾಚಾರ."

"ಈ ಮೂರನ್ನೂ ತಾವು ಒಪ್ಪಿಕೊಳ್ಳುವಿರಾ?"

"ಆವಶ್ಯಕವಾಗಿ. ಕಣ್ಣು ಮುಂದೆ ಚಿನ್ನ, ಬೆಳ್ಳಿ, ಕಬ್ಬಿಣ ಬಿದ್ದಿದ್ದರೆ ನಾವು ಯಾವುದನ್ನು ಆಯ್ದುಕೊಳ್ಳಬೇಕು?"

"ಅಷ್ಟಾಂಗ ಯೋಗದಲ್ಲಿ ಘಟ್ಟಗಳು ವ್ಯವಸ್ಥಿತವಾಗಿವೆ. ಮೆಟ್ರಿಕ್ ಆದ ಮೇಲೆ ಇಂಟರ್, ಇಂಟರ್ ಆದ ಮೇಲೆ ಬಿ.ಎ., ಬಿ.ಎ. ಆದ ಮೇಲೆ ಎಂ.ಎ., ಎಂದು ನಿರ್ದೇಶ ಮಾಡಿರುವಂತೆ ಯಮ, ನಿಯಮಾದಿಗಳು ನಿಯೋಜಿತವಾಗಿವೆ. ಸಾಧಕನಿಗೆ ಸಂದೇಹ ಬರಲು ಸಾಧ್ಯವಿಲ್ಲ. ಒಂದು ಘಟ್ಟ ಕಳೆದ ಮೇಲೆ ನಾನು ಮುಂದೆ ಎಲ್ಲಿಗೆ ಹೋಗುತ್ತೇನೆಂಬುದು ಅವನಿಗೆ ಸ್ಪಷ್ಟವಾಗಿರುತ್ತದೆ. ಸಹಜ ಮಾರ್ಗದಲ್ಲಿ ಇಂತಹ ಆನುಕೂಲ್ಯವಿದೆಯೇ? ಸಾಧಕನನ್ನು ಸದಾ ಸಂಶಯ, ಭಯ, ನಿರಾಶೆ ಕಾಡಿಸುವುದಲ್ಲಾ!"

"ನಿಜ ಶಂಕರ್, ಕಾಲೇಜ್ ಪರೀಕ್ಷೆಗಳಲ್ಲಿ ಹೆಚ್ಚು ಗುಣಗಳನ್ನು ಪಡೆದು ಒಬ್ಬ ಗಣಿತಜ್ಞನೆನಿಸಿಕೊಳ್ಳುತ್ತಾನೆ. ಕ್ರಮಬದ್ಧವಾದ ಮಾರ್ಗದಲ್ಲಿ ಅವನು ನಡೆದಿರುತ್ತಾನೆ. ಡಾ. ರಾಮಾನುಜಂ, ಡಾ. ಕುಪ್ಪಸ್ವಾಮಿ ಅಯ್ಯಂಗಾರ್ ಅಂಥವರು ಯಾವ ಕ್ರಮಿಕ ಮಾರ್ಗಕ್ಕೂ ಬಾಗದೆ ಒಮ್ಮೆಲೇ ಮೇಲಕ್ಕೆ ಹಾರುತ್ತಾರೆ. ಮೊದಲನೆಯ ವರ್ಗದವರು ಕ್ರಮಕ್ಕೆ ಬದ್ಧರಾದ ಅಸ್ವತಂತ್ರರು—ಎರಡನೆಯ ವರ್ಗದವರು ಕ್ರಮಕ್ಕೆ ಅಧೀನರಾಗದ ಸ್ವತಂತ್ರರು."

"ಒಂದು ಕ್ರಮ, ಶಿಸ್ತು, ಸಂಯಮ ಇಲ್ಲದಿದ್ದರೆ ಲೋಕವ್ಯವಹಾರ ನಡೆಯುವುದು ಹೇಗೆ ಸಾರ್? ಲೋಕದಲ್ಲಿ ಅನಾಯಕ ಪ್ರಭುತ್ವ ಬೆಳೆಯುವುದಿಲ್ಲವೇ?"

"ಲೋಕವ್ಯವಹಾರದ ನಿಯಮಗಳು ಬೇರೆ; ಅಧ್ಯಾತ್ಮ ವ್ಯವಹಾರದ ನಿಯಮಗಳು ಬೇರೆ. ಲೊಕಾಯತ್ತಕ್ಕೆ ನೀವು ಹೇಳಿದ ಶಿಸ್ತು, ಸಂಯಮ, ಕ್ರಮ ಬೇಕು; ದೈವಾಯತ್ತಕ್ಕೆ ಅವು ಅನಾವಶ್ಯಕ. ಅಲ್ಲಿನ ಶಿಸ್ತು, ಸಂಯಮ ಕ್ರಮವೇ ಬೇರೆ. ಜಾಮಿತಿಯ (ಜಿಯಾಮಿಟ್ರಿ) ಮಾನ

ದಂಡದಿಂದ ಕಲಾಕೃತಿಯನ್ನು ಅಳೆಯಲು ಸಾಧ್ಯವೇ? ಪ್ರತಿ ಶಾಸ್ತ್ರ, ಕಲೆಗೂ ವಿಶಿಷ್ಟವಾದ ನಿಯಮ ನಿಬಂಧನೆಗಳಿವೆ. ಇಂದು ನಾವು ಪಾಶ್ಚಾತ್ಯರ ಹೈತುಕವಾದದ (ರ್‍ಯಾಷನಲಿಸ್ಟ್) ಅಳತೆಗೋಲಿನಿಂದ ಪ್ರತಿಯೊಂದು ಧರ್ಮವನ್ನೂ ಅಳೆಯುತ್ತಿದ್ದೇವೆ. ಹೈತುಕವಾದ ದೃಶ್ಯ ಪ್ರಪಂಚಕ್ಕೆ ಸೇರಿದುದು. ಅನುಭಾವ (ಮಿಸ್ಟಿಸಿಸ್ಮ್) ಅದೃಶ್ಯ ಪ್ರಪಂಚಕ್ಕೆ ಸೇರಿದುದು; ಒಂದರ ಮಾನದಂಡ ಇನ್ನೊಂದಕ್ಕೆ ಹೇಗೆ ಹೊಂದಿಕೆಯಾಗುತ್ತದೆ?"

"ಅನುಭಾವದ ನೆಲೆ ಹತ್ತುವುದು ಹೇಗೆ?"

"ಅನುಭಾವ ಸಾಧನವೂ ಆಗಬಹುದು–ಸಿದ್ಧಿಯೂ ಆಗಬಹುದು. ನೀವು ಯಾವುದಕ್ಕೆ ಅನ್ವಯಿಸಿ ಈ ಪ್ರಶ್ನೆ ಕೇಳುತ್ತಿರುವಿರಿ?"

"ಉಮರ್ ಯಾವುದನ್ನು 'ಬ್ಲೈಂಡ್ ಅಂಡರ್‌ಸ್ಟ್ಯಾಂಡಿಂಗ್' ಎಂದು ಕರೆಯತ್ತಾನೋ ಅದನ್ನು ಕುರಿತು ಆಲೋಚಿಸುತ್ತಿದ್ದೇನೆ."

"ಅಂತಃಕರಣ ಚತುಷ್ಟಯ (ಚಿತ್ತ, ಬುದ್ಧಿ, ಮನಸ್ಸು, ಅಹಂಕಾರ) ಗಳನ್ನು ಗೆದ್ದಾಗ. ಈ ನಾಲ್ಕು ತೆರೆಗಳ ಅನಾವರಣವೇ ಯೋಗ. 'ಯುಜ್' ಧಾತುವಿನಿಂದ ಯೋಗ ಹುಟ್ಟಿತು. ಯುಜ್ ಎಂದರೆ ಕೂಡಿಸುವುದು–ಸಮನ್ವಯ. ಜೀವ–ಈಶ್ವರರ ಸಮನ್ವಯವೇ ಯೋಗ ವೆನ್ನಬಹುದು. ಅನುಭಾವ ಯೋಗದ ಒಂದು ಪ್ರತೀಕ. ಅನುಭಾವದ ಅಗ್ನಿದ್ವಾರದಲ್ಲಿಯೇ ಸಾಧಕ ತನ್ನ ಗುರಿಯನ್ನು ಮುಟ್ಟಬೇಕು."

ಶಂಕರ ಸ್ತಬ್ಧನಾಗಿ ಕುಳಿತುಬಿಟ್ಟ. ನೂರಾರು ಪ್ರಶ್ನೆಗಳನ್ನು ಹಾಕಿ ಶಾಸ್ತ್ರಿಗಳ ಉದ್ಬೋಧೆಯನ್ನು ಕೇಳಬೇಕೆಂದು ತವಕಿಸುತ್ತಿದ್ದ ಅವನು ಅಭಿಮಂತ್ರಿತನಾದವನಂತೆ ಕುಳಿತುಬಿಟ್ಟ.

ಶಾಸ್ತ್ರಿಗಳಿಗೆ ಅವನ ಪರಿಸ್ಥಿತಿ ಚೆನ್ನಾಗಿ ಮನವರಿಕೆಯಾಗಿತ್ತು.

"ಏಕೆ ಶಂಕರ್, ಸುಮ್ಮನೆ ಕುಳಿತುಬಿಟ್ಟಿರಿ?" ಎಂದು ಕೇಳಿದರು.

"ನಿರಾಶೆ–ನಿರ್ವಿಣ್ಣತೆ ಹುಟ್ಟಿದೆ ಸಾರ್."

"ಏಕೆಂದು ಕೇಳಬಹುದೇ?"

"ನಮ್ಮ ಜೀವನದ ಅಲ್ಪಾವಧಿಯಲ್ಲಿ ಸಾಧನ ಮುಗಿಸಲು ಸಾಧ್ಯವೇ? ಪರಂಪರಾಗತವಾಗಿ ಬಂದ ಸಂಸ್ಕೃತಿಯ ಕುಣಿಕೆ ಕಳಚಿ

ಹೋಗಿದೆ. ಹೊಸದಾಗಿ ಬಂದಿರುವ ಸಂಸ್ಕೃತಿ–ವಿಚಾರವಾಹಿನಿಯನ್ನು ನಾವು ಜೀರ್ಣಮಾಡಿಕೊಂಡಿಲ್ಲ. ಜೀರ್ಣಮಾಡಿಕೊಂಡರೂ ಇದರಿಂದ ನಮ್ಮ ಜೀವನಕ್ಕೆ ಹೆಚ್ಚು ಬೆಳಕು ದೊರೆಯುವುದಿಲ್ಲ. ನಮ್ಮ ಸಂಸ್ಕೃತಿಯನ್ನು ಉಳಿಸಿ, ಬೆಳಸಿಕೊಳ್ಳಬೇಕೆಂಬ ಉತ್ಕಟೇಚ್ಛೆಯೂ ನಮ್ಮ ಜನರಲ್ಲಿ ಕಂಡುಬರುತ್ತಿಲ್ಲ. ನಮ್ಮ ಸಂಸ್ಕೃತಿಯ ಜೀವನಜ್ಯೋತಿಯನ್ನರಿತಿರುವ ಕೆಲವರೂ ಹೊರಬಂದು, ಜನತೆಗೆ ಆ ತಿಳಿವನ್ನು ಹಂಚಲೊಲ್ಲರು. ಇಂಥ ವಿಷಮಪರಿಸ್ಥಿತಿಯಲ್ಲಿ ನಾವು ಮುನ್ನಡೆಯುವುದು ಹೇಗೆ?"

"ಮೊದಲು ನಮ್ಮ ಸಂಸ್ಕೃತಿ ಲೋಕೋತ್ತರವಾದುದೆಂಬ ನಂಬಿಕೆ ನಮ್ಮ ಜನಗಳಲ್ಲಿ ಬೆಳೆಯಬೇಕು. ಪಾಶ್ಚಾತ್ಯರ ಹೈತುಕವಾದ, ನಿರೀಶ್ವರವಾದ, ಸಂಖ್ಯಾವಾದಗಳನ್ನು ಅಲ್ಲಗಳೆಯುವುದರಲ್ಲಿ ಅರ್ಥವಿಲ್ಲ. ಅವುಗಳಲ್ಲಿ ಸತ್ಯ ಯಾವ ಪ್ರಮಾಣದಲ್ಲಿ ಅಡಕವಾಗಿದೆಯೆನ್ನುವುದನ್ನೂ ನಾವು ಹುಡುಕಿ ನೋಡಬೇಕು. ನಾವಿಂದು ಡೇಕಾರ್ಟೆ, ಸ್ಪೈನೋಜಾ, ರಸಲ್ ಇವರ ವಾದವನ್ನು ಒಪ್ಪದಿರಬಹುದು—ಆದರೆ ಅವರ ಶ್ರದ್ಧೆ, ಏಕಾಗ್ರತೆ, ಪ್ರಖರ ಪಾಂಡಿತ್ಯವನ್ನು ಗೌರವಿಸದಿರುವುದು ಕಾರ್ಪಣ್ಯದ ಲಕ್ಷಣ–ಅಸಂಸ್ಕೃತಿಯ ಲಕ್ಷಣ. ವೇದಾಂತವೇ ನಮ್ಮ ಸಂಸ್ಕೃತಿಯ ಅಸ್ತಿಭಾರ ಎನ್ನುವ ಮಾತು ನಾವು ಒಪ್ಪುವುದಾದರೆ ವೇದಾಂತದ ಮೂಲ ಸೂತ್ರವನ್ನು ಮೊದಲು ಅರ್ಥಮಾಡಿಕೊಳ್ಳಬೇಕು. ವೇದಾಂತ ಯಾವುದನ್ನೂ ನಿರಾಕರಿಸುವುದಿಲ್ಲ. ನಿರೀಶ್ವರವಾದಿಯಾದ ಬುದ್ಧಭಗವಾನನನ್ನು ಅವತಾರಪುರುಷನೆಂದು ಅಂಗೀಕರಿಸಿದ ವೇದಾಂತ ವಿಶ್ವಮೈತ್ರಿಗೆ ಅಡಿಗಲ್ಲು ಹಾಕಿತು. ನಮ್ಮ ಸಂಸ್ಕೃತಿಯ ಮೇಲೆ, ಜೀವನದ ಮೇಲೆ ವಿವಿಧ ಸಂಸ್ಕೃತಿಗಳ—ಮುಖ್ಯವಾಗಿ ಇಸ್ಲಾಂ, ಕ್ರೈಸ್ತ ಸಂಸ್ಕೃತಿಗಳ ಆಘಾತವಾಗಿದೆ. ಅಪಾಯಕ್ಕಂಜಿ ಮನೆಯಲ್ಲಿ ಕುಳಿತುಕೊಳ್ಳುವವನು ವೀರನೇ! ಗಂಡಾತರಗಳನ್ನೆದುರಿಸಿ ಅವುಗಳನ್ನು ಗೆದ್ದು ಬಂದವನನ್ನೇ ಅಲ್ಲವೇ ನಾವು ವೀರನೆಂದು ಪುರಸ್ಕರಿಸುವುದು? ವೇದಾಂತ ಅಪಾಯಕ್ಕಂಜುವ 'ವೀರ'ನಂತೆ ವರ್ತಿಸಿಲ್ಲ; ಅಪಾಯವನ್ನೆದುರಿಸುವ ವೀರನಂತೆ ವರ್ತಿಸಿದೆ. ವಿವಿಧ ಧರ್ಮಗಳ ವಿಚಾರಲಹರಿ ವೇದಾಂತದ ಸ್ಥಿತಪ್ರಜ್ಞತೆಯನ್ನು ಅಲುಗಾಡಿಸಲು ಸಮರ್ಥವಾಗಿಲ್ಲ. ಧರ್ಮಗಳು ಬರಬಹುದು–ಧರ್ಮಗಳು

ಹೋಗಬಹುದು. ವೇದಾಂತ ಚಿರಸ್ಥಾಯಿಯಾಗಿ ಉಳಿದೇ ಇರುತ್ತದೆ. ವೇದಾಂತ ಅತಿಥಿಗೃಹದ ಮೇಟಿಯಿದ್ದಂತೆ—ಅತಿಥಿಗಳು ಬರುತ್ತಾರೆ, ಹೋಗುತ್ತಾರೆ. ಮೇಟಿ ಮಾತ್ರ ಇದ್ದಲ್ಲಿಯೇ ಇರುತ್ತಾನೆ. ವೇದಾಂತ ಸಮನ್ವಯವನ್ನು ಸಾಧಿಸಿದುದರಿಂದಲೇ ಅವಿನಾಶಿಯಾಗಿದೆ. ಗಂಗೆಯಲ್ಲಿ ಮೀಯುವವರೆಷ್ಟು ಮಂದಿ! ಗಂಗಾಜಲ ಅಪರಿಶುದ್ಧವಾಗುತ್ತದೆಯೇ? ಗಂಗೆ ನೀರು ಒಯ್ಯುವವರೆಷ್ಟು ಮಂದಿ! ಗಂಗಾ ನದಿ ಬತ್ತಿ ಹೋಗಿದೆಯೇ?

"ಶಂಕರ್, ನಿಮಗೆ ಈಗ ಸಂಶಯ, ನಿರ್ವಿಣ್ಣತೆ, ನಿರಾಶೆ, ಹುಟ್ಟುವುದು ಸ್ವಾಭಾವಿಕ. ಕಾಯಿ ಹಣ್ಣಿಗೆ ತಿರುಗುವಾಗ ಮೇಲಿನ ಸಿಪ್ಪೆ ಬಿರಿಯುತ್ತದೆ, ಬಣ್ಣಗೆಡುತ್ತದೆ. ಮಗುವಿಗೆ ಜನನಕೊಡುವ ತಾಯಿ ರಕ್ತಸ್ರಾವ ಹೊಂದಿ ಜೀವನ್ಮೃತಾವಸ್ಥೆ ಅನುಭವಿಸುತ್ತಾಳೆ. ಹಾಗೇ ಕುಂಡಲಿನಿ ಜಾಗೃತವಾದಾಗ, ಅದರ ಪ್ರಚಂಡ ಧ್ವಾನಕ್ಕೇ ಮನುಷ್ಯ ನಡುಗುತ್ತಾನೆ. ಬುದ್ಧಿವಿಕಲ್ಪವಾಯಿತೇನೋ ಎಂದು ಬೆದರುತ್ತಾನೆ. ನಿರಾಶೆ, ನಿರ್ವಿಣ್ಣತೆಗಳಿಗೆ ಸಿಲುಕಿ ತತ್ತರಿಸುತ್ತಾನೆ. ಅವನು ಈ ಅವಸ್ಥೆಗಳನ್ನು ಅನುಭವಿಸಿ, ದಾಟಿಯೇ ಮುಂದೆ ಹೋಗಬೇಕು. ಇದು ಅನಿವಾರ್ಯ.

"ನಿಮಗೊಂದು ಧೈರ್ಯದ ಮಾತು ಹೇಳುತ್ತೇನೆ. ಸತ್ಯದರ್ಶನದ ಆಕಾಂಕ್ಷೆ ಹುಟ್ಟುವುದು ವಿರಳ. ಯಾವನಲ್ಲಿ ಆ ಆಕಾಂಕ್ಷೆ ಹುಟ್ಟುತ್ತದೋ ಅವನಿಗೆ ಭಗವದನುಗ್ರಹವಾಗಿದೆಯೆಂದು ತಿಳಿಯಬೇಕು. ಭಗವಂತ ನಿಮ್ಮತ್ತ ತಿರುಗಿದುದರಿಂದಲೇ ನೀವು ಅವನತ್ತ ತಿರುಗುವುದು. ಆಕಾಂಕ್ಷೆಯ ಜತೆಗೆ ಶ್ರದ್ಧೆ, ಸಾಧನೆ, ಏಕಾಗ್ರತೆಯೂ ಸೇರಿಕೊಳ್ಳಬೇಕು. ಬೀಜದಲ್ಲಿ ಮೊಳಕೆದೋರಿದೆ. ಅದಕ್ಕೆ ಸರಿಯಾದ ಪೋಷಣೆ ಮಾಡಿದರಲ್ಲವೇ ಗಿಡವಾಗುವುದು—ಮರವಾಗುವುದು—ಹೆಮ್ಮರವಾಗಿ ಸೊಗಸಾದ ಫಲಗಳನ್ನು ನೀಡುವುದು."

ಶಂಕರ, ಶ್ರೀಧರ ಇಬ್ಬರಿಗೂ ಅಮೃತಾನಂದದ ರಸಗಂಗೆಯಲ್ಲಿ ಮಿಂದಂತಾಯಿತು. ಬುದ್ಬುದದಂತೆ ಉಕ್ಕುತ್ತಿದ್ದ ಆನಂದ ಅವರ ಮುಖಗಳಿಗೆ ಅಪೂರ್ವ ತೇಜಸ್ಸು, ಕಾಂತಿಯನ್ನಿತ್ತಿತ್ತು.

ಮೈಮರೆತು, ಮನಮರೆತು ಕುಳಿತಿದ್ದ ಗೆಳೆಯರನ್ನು ಶಾಸ್ತ್ರಿಗಳು "ಅಧ್ಯಾತ್ಮದ ಉನ್ನತ ಮಟ್ಟದಿಂದ ನಾವು ಕನ್ನಂಬಾಡಿಯ ಸಮ ಭೂಮಿಗೆ ಬರಬೇಕಾಗಿದೆ. ಪರ್ವತ ಶಿಖರದ ಮೇಲೆ ನಾವು ಕುಳಿತಿದ್ದರೆ ರೈಲು ಮುಂದಕ್ಕೆ ಹೋಗುತ್ತದೆ" ಎಂದರು.

ಶ್ರೀಧರ್ ನಗೆಬೀರುತ್ತಾ "ಹೌದು ಸಾರ್. ರೈಲಿಗೆ ಹೊತ್ತಾಯಿತು" ಎಂದೆದ್ದ.

ಶಂಕರನೂ ಏಳಲೇಬೇಕಾಯಿತು.

ಶಾಸ್ತ್ರಿಗಳನ್ನು ಮನೆ ಮುಟ್ಟಿಸಿ, ಶ್ರೀಧರ, ಶಂಕರ ಇಬ್ಬರೂ ಹಾಸ್ಟೆಲ್ ಸೇರಿದರು. ಶ್ರೀಧರ ಕಾಲು ಗಂಟೆ ಯಾವುದೋ ಪುಸ್ತಕ ತಿರುವಿಹಾಕಿ ಮಲಗಿ "ನಿದ್ದೆ ಬರುವುದಿಲ್ಲವೇ ಶಂಕರ?" ಎಂದು ಕೇಳಿದ.

"ನೀನು ಮಲಗು—ನಾನು ಸ್ವಲ್ಪ ಹೊತ್ತು ಎಚ್ಚರವಾಗಿರುತ್ತೇನೆ. ದೀಪ ಆರಿಸಬೇಕೇನು?"

"ನೀನು ಓದಿಕೊಳ್ಳುವ ಹಾಗಿದ್ದರೆ ದೀಪ ಆರಿಸಬೇಡ." ಎಂದವನೇ ಮುಸುಗುಹಾಕಿಕೊಂಡ.

ದೀಪ ಉರಿಯುತ್ತಲೇ ಇತ್ತು.

ಶಂಕರ ಒಂದು ಸಣ್ಣ ಪುಸ್ತಕ ಕೈಗೆತ್ತಿಕೊಂಡು ಬರೆಯುತ್ತ ಕುಳಿತ.

ಅವನು ಬರೆಯುತ್ತಲೇ ಇದ್ದ—ದೀಪ ಉರಿಯುತ್ತಲೇ ಇತ್ತು.

ಬೆಳಿಗ್ಗೆ ಶ್ರೀಧರ ಎದ್ದು ನೋಡಿದಾಗಲೂ ದೀಪ ಉರಿಯುತ್ತಿತ್ತು— ಶಂಕರ ಮೇಜಿನ ಮೇಲೆ ಕೈ ಮಡಿಚಿ ನಿದ್ರಾಧೀನನಾಗಿದ್ದ.

## ೩೪

ಸುಬ್ರಹ್ಮಣ್ಯ ಮನೆಗೆ ಬಂದು ನಿಂತುದು ಅವನು ಬೇರೊಂದು ಪ್ರಪಂಚಕ್ಕೇ ಬಂದಂತಾಗಿತ್ತು. ಈವರೆಗೆ ಅವನಿಗೆ ಮನೆಯೊಂದು 'ಧರ್ಮಶಾಲೆ'ಯಾಗಿತ್ತು. ಎರಡು, ಮೂರು, ನಾಲ್ಕು ದಿನವಿದ್ದರೂ ಚಿತ್ತ ಬೇರೆಯೆಡೆಗೆ ಹಾರಿ ಹೋಗುತ್ತಿತ್ತು. ಮನೆಯಲ್ಲಿನ ವಸ್ತುಗಳು, ವ್ಯಕ್ತಿಗಳು ಅವನ ಕಣ್ಣಿಗೆ ಅಸ್ತಿತ್ವವಿಲ್ಲದ ಯಾವುದೋ ಛಾಯಾ ಲೋಕದ ದೃಶ್ಯಗಳಾಗಿದ್ದುವು. ಮನೆಯಲ್ಲಿ ಅವನು ನಿಲ್ಲುತ್ತಿದ್ದ, ಕೂಡುತ್ತಿದ್ದ, ಊಟಮಾಡುತ್ತಿದ್ದ, ಮಲಗುತ್ತಿದ್ದ. ಆದರೆ ಎಲ್ಲಾ ಯಾಂತ್ರಿಕ. ಕಂಪೆನಿಮನೆಯಲ್ಲಿ ಉಂಡು, ತಿಂದು ಮಲಗುತ್ತಿದ್ದ ನೆನಪು ತುಂಬಿ, ಪ್ರಕೃತ ವಾತಾವರಣ ಮರೆತುಹೋಗುತ್ತಿತ್ತು.

ಈಗವನು ಬಹಿರ್ಮುಖನಾಗಿದ್ದ. ಮನೆಯ ವಾತಾವರಣ ಕನಸಲ್ಲ—ಸತ್ಯವೆಂಬ ಅರಿವು ಮೂಡಿತ್ತು. ಆದರೆ ಅಕೃತಕವಾದ ಗೃಹ ಜೀವನಕ್ಕೆ ಕೂಡಲೆ ಹೊಂದಿಕೊಳ್ಳುವುದು ಅವನಿಗೆ ಸುಲಭವಾಗಿರಲಿಲ್ಲ. ಈ ಮೊದಲು ಬಾಳಿದ ಜೀವನದ ದುರ್ವಿಷಯ ವಾಸನೆ ಆಗಾಗ್ಗೆ ಅವನ ಮನಸ್ಸಿನ ಮೇಲೆ ತನ್ನ ಬಲೆ ಬೀಸಲು ಪ್ರಯತ್ನಿಸುತ್ತಿತ್ತು.

ಅಂಥ ವೇಳೆಗಳಲ್ಲಿ ಸುಬ್ಬಣ್ಣ ಖಿನ್ನನಾಗುತ್ತಿದ್ದ. ಅಂಥ ವೇಳೆಗಳಲ್ಲಿ ಕ್ಷಮಾಪೂರ್ಣವಾದ ನಿಸ್ಸೀಮ ದಯೆ, ಮಮತೆ, ಸಾನುಭೂತಿಗಳನ್ನವನು ಬಯಸುತ್ತಿದ್ದ.

ಊರು ಬಿಟ್ಟು ಓಡುವ ಹವ್ಯಾಸ ತಪ್ಪಿಹೋದ ಮೇಲೆ ಸುಬ್ರಹ್ಮಣ್ಯನಿಗೆ ಕಾಲ ಎಷ್ಟು ದೀರ್ಘವಾದುದು–ಅನಂತವಾದುದು ಎಂಬ ತಿಳಿವೂ ಮೂಡಲಾರಂಭವಾಯಿತು. ಬೆಳಿಗ್ಗೆ ಸಂಜೆ ಹೊಲಗದ್ದೆಗಳಲ್ಲಿ ಸುತ್ತಾಡಿಕೊಂಡು ಬರುತ್ತಿದ್ದ. ಮಧ್ಯಾಹ್ನ, ರಾತ್ರಿ ಮನೆಗೆ ಬಂದ ಮೇಲೆ ಕಾಲ ತಳ್ಳುವುದು ಪ್ರಯಾಸವಾಗುತ್ತಿತ್ತು. ಒಮ್ಮೊಮ್ಮೆ ಶಂಕರನ ಪುಸ್ತಕ ಭಂಡಾರ ಕೆದಕಿ ಯಾವುದಾದರೂ ಪುಸ್ತಕ ಆಯ್ದುಕೊಳ್ಳುವನು. ನಾಲ್ಕು ಪುಟ ಓದುವಷ್ಟರಲ್ಲಿ ಬೇಸರ ಬಂದುಬಿಡುತ್ತಿತ್ತು. ಅಭ್ಯಾಸ

ಬಲವಿಲ್ಲದ ಸುಬ್ರಹ್ಮಣ್ಯನಿಗೆ ಗ್ರಂಥಾವಲೋಕನದ ವಿಕಸಿತ ವಿಹಾರದ ಮಹಾದ್ವಾರಗಳು ತೆರೆಯಲಿಲ್ಲ.

ಅವನ ಕಣ್ಣು ಮನೆಯ ಸುತ್ತ ಹೊರಳಾಡುವುದು. ತಾಯಿಯ ನಿರ್ಲಿಪ್ತ ಜೀವನ, ನಿಂಗವ್ವನ ನಿಷ್ಕಾಮ ಜೀವನ, ಗೌರಿಯ ಅನಾಸಕ್ತಿಗಳೆಲ್ಲವೂ ಹೊಸ ಆಕಾರ ತಳೆದು ಅವನ ಮುಂದೆ ನಿಲ್ಲುತ್ತಿದ್ದುವು.

ರವಿಯ ಬಗ್ಗೆ ಸುಬ್ರಹ್ಮಣ್ಯನಿಗೆ ಸುಪ್ತವಾಗಿದ್ದ ಅನುರಾಗ ಜಾಗೃತವಾಗಿರಲಿಲ್ಲ. ಜಾಗೃತವಾಗುವುದಕ್ಕೆ ಅವಕಾಶವೂ ಆಗಿರಲಿಲ್ಲ.

ಈಗ ರವಿಯನ್ನು ಕಣ್ಣು ಬಿಟ್ಟು ನೋಡಿದ. ತನ್ನ ಮಗ—ತನ್ನ ವಂಶೋದ್ಧಾರಕ—ತನ್ನ ಬಾಳವೃಕ್ಷದ ಮೊಗ್ಗೆ!—ರವಿಯನ್ನು ನೋಡುತ್ತ ನೋಡುತ್ತ ಅಭಿಮಾನ ಉಕ್ಕಂದವಾಗಿ ಹರಿಯುತ್ತಿತ್ತು.

ಆ ಸುಂದರ ಸವಿದಿನಗಳ ನೆನಪಾಗುತ್ತಿತ್ತು. ತಾನೂ ಅಪ್ರಬುದ್ಧ—ಗೌರಿಯೂ ಅಪ್ರಬುದ್ಧೆ. ಲಜ್ಜೆಯ ಜತೆಗೆ ಹಿರಿಯರ ಹೆದರಿಕೆ. ತಂದೆ ಬದುಕಿದ್ದರು.—ಹೆಂಡತಿಯೆಂದು ಸ್ವಾತಂತ್ರ್ಯವಹಿಸುವ ಹಾಗಿರಲಿಲ್ಲ. ದೂರದಲ್ಲಿಯೇ ಗೌರಿಯನ್ನು ನೋಡಿ ತೃಪ್ತಿಪಟ್ಟುಕೊಳ್ಳಬೇಕು. ಕಣ್ಣೆತ್ತಿಯೂ ನೋಡುವಂತಿಲ್ಲ—ಕದ್ದೇ ನೋಡಬೇಕು.

ಗೌರಿಯೂ ಹಾಗೇ ನೋಡುತ್ತಿದ್ದಳು. ಮಾವನವರ ಜತೆ ಊಟಕ್ಕೆ ಕೂಡುತ್ತಿದ್ದ ಗಂಡನ ಮೊಗಕ್ಕಿಂತಲೂ ಕೈ ಚೆನ್ನಾಗಿ ಬಲ್ಲಳು. ಗಂಡನಿಗೆ ಬಡಿಸಿ ಮೇಲಕ್ಕೇಳುವಾಗ, ಮಾವನವರ ದೃಷ್ಟಿ ಎತ್ತಲಿದೆಯೆಂಬುದರ ಮೇಲೆ ಒಂದು ಕಣ್ಣಿಟ್ಟು, ಇನ್ನೊಂದು ಕಣ್ಣಿನಲ್ಲಿಯೇ ಗಂಡನನ್ನು ನೋಡಬೇಕು.

ಆಗ ಅಕಸ್ಮಾತ್ತಾಗಿ—ಇಬ್ಬರ ದೃಷ್ಟಿ ಕೂಡಿದರೆ ಆಗುತ್ತಿದ್ದ ರೋಮಾಂಚ—ಆನಂದ.

ಅಸ್ಪಷ್ಟವಾಗಿದ್ದ ಜೀವನಾನುಭವಗಳು ಸುಬ್ರಹ್ಮಣ್ಯನಿಗೆ ಸ್ಪಷ್ಟವಾಗುತ್ತ ಬಂದಿದ್ದುವು.

ಈ ಅನುಭವಗಳ ಪೂರಕವಾಗಿ ಗೌರಿ ಗರ್ಭಿಣಿಯಾದುದು........ ನವಮಾಸ ಕಳೆದು ರವಿಗೆ ಜನನವಿತ್ತುದು.

ರವಿಯ ಜಾತಕ—'ರವಿ ತುಂಬ ಕೀರ್ತಿಶಾಲಿಯಾಗಿ ಸೂರ್ಯನಂತೆ ಬೆಳಗುತ್ತಾನೆ.'

'ರವಿ ಬೆಳೆಯುವುದಕ್ಕೆ ಬೆಳಗುವುದಕ್ಕೆ ನಾನೂ ಪ್ರಯತ್ನಿಸಬೇಕು.'

ರವಿಯ ಭವಿಷ್ಯತ್ತಿನ ಬಗ್ಗೆ ಸುಬ್ರಹ್ಮಣ್ಯನಿಗೆ ಯೋಚನೆ ಇರಲಿಲ್ಲ. 'ಕಾಲೇಜ್ ಮುಗಿಸಿಕೊಂಡು ಬಂದು ಶಂಕರ, ರವಿಯ ಶಿಕ್ಷಣದ ಜವಾಬ್ದಾರಿ ಹೊತ್ತುಕೊಳ್ಳುತ್ತಾನೆ.'

ನೀರಸವಾಗಿದ್ದ ಮನೆಯ ವಾತಾವರಣದಲ್ಲಿ ಸುಬ್ರಹ್ಮಣ್ಯ ರವಿಯ ಮರೆಹೊಕ್ಕಿದ್ದ. ಮಗನನ್ನು ಎತ್ತಿಕೊಂಡು ಹೋಗಿ ಊರಿನಲ್ಲೆಲ್ಲಾ ತಿರುಗಾಡಿಕೊಂಡು ಬರುವನು. ಮಗನೊಂದಿಗೆ ಆಡುತ್ತ ಕುಳಿತರೆ ಅವನಿಗೆ ಹೊತ್ತೇ ಮರೆತುಹೋಗುತ್ತಿತ್ತು.

ಗೌರಿ ಸುಬ್ರಹ್ಮಣ್ಯನ ಜೀವನದ ಹೊಸ್ತಿಲ ಮೇಲೇ ನಿಂತುಕೊಂಡು ಎಲ್ಲವನ್ನೂ ಈಕ್ಷಿಸುವಳು. ತಂದೆ ಮಗನ ದಿವ್ಯ ಲೀಲೆಯಲ್ಲಿ ತನಗೂ ಭಾಗವಿದೆಯೆನ್ನುವುದು ಅವಳಿಗೆ ಮರೆತುಹೋಗಿತ್ತು—ಉದ್ದೇಶಪೂರ್ವಕವಾಗಿಯೇ ಮರೆಯಲೆತ್ನಿಸಿದ್ದಳು.

ಗೌರಿಯನ್ನು ಒಲಿಸಿಕೊಳ್ಳುವುದು ತನ್ನ ಕರ್ತವ್ಯವೆಂದು ಸುಬ್ರಹ್ಮಣ್ಯ ಭಾವಿಸಿದ. 'ಅವಳ ಮನಸ್ಸಿನ ಮೇಲೆ ಘಾಯ ಮಾಡಿದ್ದೇನೆ. ಅದು ಮಾಗುವಂತೆ ನಾನೇ ಚಿಕಿತ್ಸೆ ನಡಸಬೇಕು' ಎಂದು ನಿರ್ಧರಿಸಿಕೊಂಡಿದ್ದ.

ಒಂದೊಂದು ದಿನ ಸುಬ್ರಹ್ಮಣ್ಯ ತೋಟದ ಕೆಲಸ ಮುಗಿಸಿಕೊಂಡು ಬರಲು ಮಧ್ಯಾಹ್ನ ಒಂದು ಗಂಟೆಯಾಗುತ್ತಿತ್ತು. ಬಂದ ಮೇಲೆ ಸ್ನಾನ ಮಾಡಿ, ದೇವರ ಪೂಜೆ ಮಾಡಿಯೇ ಅವನು ಊಟಕ್ಕೆ ಕೂಡುತ್ತಿದ್ದುದು. ಸುಬ್ರಹ್ಮಣ್ಯ ಊಟ ಮುಗಿಸುವ ವರೆಗೆ ಗೌರಿ ಊಟ ಮಾಡುತ್ತಿರಲಿಲ್ಲ. ಹೆಂಡತಿ ಹಸಿದಿರುವಳಲ್ಲ ಎಂದು ಸುಬ್ರಹ್ಮಣ್ಯನ ಮನಸ್ಸಿಗೆ ಪರಿತಾಪವಾಗುತ್ತಿತ್ತು. ಊಟಕ್ಕೆ ಕುಳಿತಾಗ "ತೋಟಕ್ಕೆ ಗೊಬ್ಬರ ಹಾಕಿಸಬೇಕಾಗಿತ್ತು. ಮನೆಗೆ ಬರುವುದು ತಡವಾಯಿತು. ನೀನು ಊಟ ಮಾಡಿದ್ದರಾಗುತ್ತಿರಲಿಲ್ಲವೇ" ಎಂದು ಕೇಳುತ್ತಿದ್ದ.

ಗೌರಿಯ ಮುಖಚರ್ಯೆ ಸ್ವಲ್ಪವೂ ಬದಲಾಗುತ್ತಿರಲಿಲ್ಲ.

"ನನಗೆ ಹಸಿವಿರಲಿಲ್ಲ."

"ಮಗುವಿನ ತಾಯಿ ನೀನು-ಹೊತ್ತು ಹೊತ್ತಿಗೆ ಊಟ ಮಾಡಬೇಕು. ನಿನಗೆ ಹಸಿವಾದರೆ ಮಗುವಿಗೂ ಹಸಿವಾಗುತ್ತದೆ."

"ನನ್ನ ದಣಿವು, ಚಿಂತೆ ಕಟ್ಟಿಕೊಂಡು ಯಾರಿಗೇನಾಗಬೇಕು." ಎಂದು ವಕ್ರವಾಗಿ ನುಡಿಯುತ್ತಿದ್ದಳು. ಸುಬ್ರಹ್ಮಣ್ಯನ ಗಂಟಲಿನಲ್ಲಿ ಅನ್ನವಿಳಿಯುತ್ತಿರಲಿಲ್ಲ. ಅರ್ಧಹೊಟ್ಟೆ ಊಟವಾಗುತ್ತಿತ್ತು.

ಸುಬ್ರಹ್ಮಣ್ಯನಿಗೆ ಬಡಿಸುವುದಕ್ಕೆ ಪಾರ್ವತಮ್ಮನವರು ಬರುತ್ತಿರಲಿಲ್ಲ. ಮಗ ಸೊಸೆಯರ ಮಧ್ಯೆ ಬಂದಿದ್ದ ವಿರಸ ಕಡಮೆಯಾಗಲೆಂದು ಅವರು ಉದ್ದೇಶಪೂರ್ವಕವಾಗಿಯೇ ದೂರ ಉಳಿಯುತ್ತಿದ್ದರು. ಅವನು ದೇವರ ಪೂಜೆ ಮುಗಿಸಿಕೊಂಡು ಬರುವಷ್ಟರಲ್ಲಿ ಗೌರಿ ಅಡಿಗೆಮನೆಯಲ್ಲಿಯೇ ತಟ್ಟೆ ಹಾಕಿ, ಚೆಂಬಿನಲ್ಲಿ ನೀರಿಡುವುದು ವಾಡಿಕೆಯಾಗಿತ್ತು.

ಒಂದೊಂದು ದಿನ ಸುಬ್ರಹ್ಮಣ್ಯ ಬಂದು ತಟ್ಟೆಯ ಮುಂದೆ ಕುಳಿತರೂ ಗೌರಿ ಅಡಿಗೆಯ ಮನೆಯ ಬಳಿ ಸುಳಿಯುತ್ತಿರಲಿಲ್ಲ. ರವಿಯನ್ನೆತ್ತಿಕೊಂಡು ಮನೆಯ ಕೈದೋಟದಲ್ಲಿ ಅವನನ್ನು ಆಡಿಸುತ್ತಾ ಇದ್ದುಬಿಡುತ್ತಿದ್ದಳು. ಮಗ ತಟ್ಟೆಯ ಮುಂದೆ ಕುಳಿತಿದ್ದುದನ್ನು ಕಂಡ ಪಾರ್ವತಮ್ಮನವರು ಸೊಸೆಯ ಬಳಿ ಬಂದು "ನಿನ್ನ ಗಂಡ ತಟ್ಟೆಯ ಮುಂದೆ ಕುಳಿತಿದ್ದಾನೆ. ಬಡಿಸು ಹೋಗಮ್ಮ" ಎನ್ನುತ್ತಿದ್ದರು.

"ಇವತ್ತು ನೀವೇ ಬಡಿಸಿಬಿಡಿ ಅತ್ತೆ" ಎಂದು ಗೌರಿ ಉತ್ತರ ಕೊಡುತ್ತಿದ್ದಳು.

ಪಾರ್ವತಮ್ಮನವರೇ ಹೋಗಿ ಮಗನಿಗೆ ಬಡಿಸುತ್ತಾ

"ರವಿ ಯಾಕೋ ಚಂಡಿ ಹಿಡಿದಿದ್ದಾನೆ. ಗೌರಿ ಅವನನ್ನು ಸಮಾಧಾನ ಮಾಡುತ್ತಿದ್ದಾಳೆ" ಎಂದು ಸೊಸೆಯನ್ನು ಬಿಟ್ಟುಕೊಡದೆ ನುಡಿಯುತ್ತಿದ್ದರು.

ಅನ್ನ, ಹುಳಿ ಕಲಸಿ ಎರಡು ತುತ್ತು ಬಾಯಿಗಿಡುವುದರಲ್ಲಿ ಸುಬ್ರಹ್ಮಣ್ಯನ ಕಣ್ಣು ತೇವಗೊಳ್ಳುತ್ತಿತ್ತು.

"ಕಣ್ಣೀರು ಹಾಕಬೇಡಪ್ಪಾ. ಎಲ್ಲವೂ ಸರಿಹೋಗುತ್ತದೆ"

ತಾಯಿಯ ಅದೇ ಅಮೃತವಾಣಿ.

ಆ ಧ್ವನಿ ಗೌರಿಯದಾಗಬಾರದಾಗಿತ್ತೇ?

ಹೊರಗೆ ಧುಮುಕಲು ಸಿದ್ಧವಾಗಿದ್ದ ಕಣ್ಣೀರನ್ನು ತಡೆಗಟ್ಟಿ

"ಸಂಚಿತ ಕರ್ಮ ಅನುಭವಿಸಲೇಬೇಕಮ್ಮ."

.........................

"ಗೌರಿಯ ಮೇಲೆ ನನಗೆ ಕೋಪವಿಲ್ಲಮ್ಮ. ಅವಳು ಮಾಡು ತ್ತಿರುವುದೇ ಸರಿ. ಹೃದಯದಲ್ಲಿ ಹಗೆತನ ತುಂಬಿರುವಾಗ ವಿಶ್ವಾಸ ತೋರಿಸುವುದು ವಂಚನೆಯಾಗುತ್ತದೆ."

"ಗೌರಿಯ ಹೃದಯದಲ್ಲಿ ಹಗೆತನವಿಲ್ಲ ಸುಬ್ಬೂ. ನಡೆದುದನ್ನು ಅವಳು ಮರೆತು ಪೂರ್ವಸ್ಥಿತಿಗೆ ಬರಬೇಕಾದರೆ ನಾಲ್ಕು ದಿನ ತಡವಾಗ ಬಹುದು."

"ಆಗಲಿ. ಈಶ್ವರೇಚ್ಛೆ."

# ೩೫

ತಾಯಿ ಎದುರಿಗಿದ್ದಾಗ ಸುಬ್ರಹ್ಮಣ್ಯನಲ್ಲಿ ಅಭಿವ್ಯಕ್ತವಾಗುತ್ತಿದ್ದ ಸಮಾಧಾನ-ಶಾಂತಿ-ಸಂಯಮ ಆಕೆ ಮರೆಯಾದ ಕೂಡಲೆ ಮಾಯವಾಗುತ್ತಿತ್ತು. ಪುರುಷನ ಸ್ವಾಭಾವಿಕ ದರ್ಪ ಅವತರಿಸುತ್ತಿತ್ತು.

'ನನ್ನನ್ನು ಕಸಕ್ಕಿಂತ ಕಡೆಯಾಗಿ ಕಾಣಲು ಗೌರಿಗೇನು ಅಧಿಕಾರ. ಅವಳು ನನ್ನ ಕೈಯಲ್ಲಿ ತಾಳಿ ಕಟ್ಟಿಸಿಕೊಂಡಿದ್ದಾಳೆ ನಿಜ. ಆದರೆ ಆ ತಾಳಿ ನನ್ನನ್ನು ತೃಣಪ್ರಾಯವಾಗಿ ಕಾಣುವ ಅಧಿಕಾರ ಅವಳಿಗೆ ಕೊಡುವುದೇ?—ನಾನು ತಪ್ಪು ಮಾಡಿದ್ದೇನೆ. ತಪ್ಪಿಗೆ ಪ್ರಾಯಶ್ಚಿತ್ತವೂ ಆಗಿದೆ. ಪಶ್ಚಾತ್ತಾಪವೂ ಆಗಿದೆ. ತಪ್ಪನ್ನು ಒಪ್ಪು ಮಾಡಿ ಗೌರಿಯ ಜೀವನ ಸಂತೋಷಪ್ರದವಾಗುವಂತೆ ಮಾಡಲು ಬಯಸುತ್ತಿದ್ದೇನೆ. ಇದಕ್ಕೆ ಗೌರಿಯೇಕೆ ಸಹಕಾರ ನೀಡಬಾರದು? ಏಕೆ ಈ ಮೂರ್ಖತನ, ಶಠತನ ತೋರಿಸುತ್ತಿದ್ದಾಳೆ?

'ತಪ್ಪುಮಾಡುವುದು ಕಷ್ಟವಲ್ಲ—ತಪ್ಪನ್ನು ಒಪ್ಪುಮಾಡುವುದು ಕಷ್ಟ.'

'ಬೀಳುವುದು ಕಷ್ಟವಲ್ಲ—ಮೇಲಕ್ಕೇಳುವುದು ಕಷ್ಟ!'

'ಬೀಳುವುದಕ್ಕೆ ಹಲವು ಕೈಗಳು ನೆರವು ನೀಡುತ್ತವೆ—ಮೇಲಕ್ಕೇಳುವುದಕ್ಕೆ ಯಾರೂ ನೆರವು ನೀಡುವುದಿಲ್ಲ.'

'ಕೆಳಗೆ ಬಿದ್ದವನನ್ನು ತುಳಿಯಬೇಕೆಂದು ಎಲ್ಲರೂ ಮುನ್ನುಗ್ಗುತ್ತಾರೆ. ಅವನನ್ನು ಉದ್ಧರಿಸಲು ಯಾರೂ ಪ್ರಯತ್ನಿಸುವುದಿಲ್ಲ.'

ಎನ್ನುವ ಭಾವನೆಗಳು ಅವನ ಶಾಂತಿಶೇಷವನ್ನೂ ಅಲ್ಲಕಲ್ಲೋಲ ಮಾಡಿಬಿಡುತ್ತಿದ್ದುವು.

ಒಂದು ದಿನ ಸುಬ್ರಹ್ಮಣ್ಯ ಊಟ ಮುಗಿಸಿಕೊಂಡು ಮನೆಯ ವೆರಾಂಡಾದಲ್ಲಿ ಶತಪಥ ಸುತ್ತುತ್ತಿರುವಾಗ ಶಾಂತರುದ್ರ ಬಂದ.

ಸುಬ್ರಹ್ಮಣ್ಯನಿಗೆ ಮರುಭೂಮಿಯಲ್ಲಿ ನೀರು ಸಿಕ್ಕಿದಂತಾಯಿತು. ಗೆಳೆಯನನ್ನು ಆದರದಿಂದ ಸ್ವಾಗತಿಸುತ್ತಾ "ಯಾವಾಗ ಬಂದೆ ಶಾಂತರುದ್ರಾ?" ಎಂದು ಕೇಳಿದ.

"ಒಂದೆರಡು ಗಂಟೆಯಾಗಿರಬೇಕಪ್ಪಾ. ಮನೆಯಲ್ಲಿ ಊಟ ಮುಗಿಸಿ ದವನೇ ಇತ್ತ ಓಡಿಬಂದೆ."

"ಬಾ. ಬಾ" ಎಂದು ಆಫೀಸ್ ರೂಮಿಗೆ ಅವನನ್ನು ಕರೆದೊಯ್ದು ಕುಳ್ಳಿರಿಸಿ, "ಮಾವನ ಮನೆ ಸೇರಿದವನು, ತವರೂರು, ಮನೆ, ಮಠ, ಮಿತ್ರರು ಎಲ್ಲರನ್ನೂ ಮರೆತುಬಿಡುವುದೇನಯ್ಯಾ ?" ಎಂದ.

"ಮರೆಯುವುದು ಸಾಧ್ಯವೇ ಸುಬ್ಬಣ್ಣ. ಮಾವನವರು ಸಂಸಾರದ ಜವಾಬ್ದಾರಿ ನನ್ನ ಹೆಗಲ ಮೇಲೆ ಹೊರಿಸಿದ್ದಾರೆ. ದೊಡ್ಡ ಆಸ್ತಿ-ನೂರಾರು ವ್ಯವಹಾರ ಅವುಗಳ ಪರಿಚಯಮಾಡಿಕೊಳ್ಳುವುದಕ್ಕೇ ನನಗೆ ವೇಳೆ ಸಾಲದಾಗುತ್ತದೆ. ಮಾವನವರಿಗೆ ಧರ್ಮದ ಹುಚ್ಚು ಬೇರೆ ಹಿಡಿದು ಬಿಟ್ಟಿದೆ. ದಿನಬೆಳಗಾದರೆ ಯಾವನಾದರೂ ಒಬ್ಬ ಸ್ವಾಮಿಯನ್ನು ಹಿಡಿದುಕೊಂಡು ಬರುತ್ತಾರೆ. ಅವರನ್ನು ಕೂಡಿಸಿ ಪೂಜೆಮಾಡಿದ್ದೂ ಮಾಡಿದ್ದೇ; ಅವನಿಗೆ ತುಪ್ಪ ಸಕ್ಕರೆ ತಿನ್ನಿಸಿದ್ದೂ ತಿನ್ನಿಸಿದ್ದೇ. ನಮ್ಮ ಮಾವನವರಿಗೆ ಈಚೆಗೊಬ್ಬ ಗುರು ಗಂಟು ಬಿದ್ದಿದ್ದಾನೆ. ಹನುಮ ಕೊಂಡ ಪೀಠದ ಜಗದ್ಗುರು ಎಂದು ಹೇಳಿಕೊಳ್ಳುತ್ತಾನೆ. ಅವನ ಅವ ತಾರ ನೋಡಿಬಿಟ್ಟರೆ ಮೈಯೆಲ್ಲ ಬೆಂಕಿಬೆಂಕಿಯಾಗುತ್ತದೆ. ಮಾವನವರ ಮನಸ್ಸಿಗೆ ವಿರುದ್ಧವಾಗಿ ನಡೆಯುವಂತಿಲ್ಲ."

"ಹೋಗಲಿ. ಮನೆಯಲ್ಲಿ ಎಲ್ಲರೂ ಆರೋಗ್ಯವಷ್ಟೆ !"

"ಎಲ್ಲರೂ ಆರೋಗ್ಯ-ನಿನ್ನ ಕುಮಾರಕಂಠೀರವ ಎಲ್ಲಿ ಸುಬ್ಬಣ್ಣ?"

"ಮಲಗಿ ನಿದ್ರಿಸುತ್ತಿದ್ದಾನೆ."

"ಹೊಸಪೇಟೆಗೆ ಬನ್ನಿಯೆಂದರೆ ಯಾರೂ ಬರಲೊಲ್ಲಿರಿ—ಖಂಡಿತ ಬರುತ್ತೇನೆಂದು ವಾಗ್ದಾನಮಾಡಿದ ಶಂಕರನೂ ಬರಲಿಲ್ಲ. ನೀವೆಲ್ಲಾ ನನ್ನ ಮರೆಯಲು ಪ್ರಯತ್ನಿಸುತ್ತಿರುವಿರೋ ?"

"ಇಲ್ಲ ಶಾಂತರುದ್ರೂ. ನೀನು ಹೋದ ಮೇಲೆ ಇಲ್ಲಿ ಬಹಳ ಪ್ರಸಂಗಗಳು ನಡೆದುಹೋಗಿವೆ."

"ಕೆಲವು ವಿಷಯಗಳು ಕಿವಿಯ ಮೇಲೆ ಬಿದ್ದುವು. ದಾಸರಿ ಹೊಲ ಮನೆ ಮಾರಿಬಿಟ್ಟು ಎಲ್ಲಿಗೋ ಹೊರಟುಹೋದನಂತೆ! ಆಚಾರಿ ಪರಾರಿ ಯಾದನಂತೆ!"

ಸುಬ್ರಹ್ಮಣ್ಯ ನಿಟ್ಟುಸಿರುಬಿಡುತ್ತಾ ತನ್ನ ಕಥೆಯನ್ನು ಕೂಲಂಕಷವಾಗಿ ನಿವೇದಿಸಿ

"ಇದು ಪ್ರಪಂಚ-ಶಾಂತರುದ್ರ್ರಾ."

"ಭೀಮಾಚಾರಿ ಇಂಥ ನೀಚನೆಂದು ನಾನು ತಿಳಿದಿರಲಿಲ್ಲ."

"ಯಾರೂ ತಿಳಿದಿರಲಿಲ್ಲ ಶಾಂತರುದ್ರ್ರಾ. ಚಿನ್ನಪ್ಪನನ್ನು ನೋಡಿದ್ದೆಯಾ?"

"ಇಲ್ಲ."

"ಅವನೂ ತನ್ನ ಕೈವಾಡ ತೋರಿಸಿದ. ಆಚಾರಿ ಅವನ ತಲೆಯ ಮೇಲೂ ಚಪ್ಪಡಿ ಎಳೆದ."

"ಹೋಗಲಿ ಬಿಡು—ಅನಿಷ್ಟವೇ ಕಳೆದುಹೋಯಿತು. ಮಗನನ್ನು ನೋಡಿಕೊಂಡು ಸಂತೋಷವಾಗಿದ್ದುಬಿಡು."

"ಅದನ್ನೇ ಪ್ರಯತ್ನಿಸುತ್ತಿದ್ದೇನೆ. ಮನೆಯ ವಾತಾವರಣವೂ ಕೆಟ್ಟುಹೋಗಿದೆ."

"ನೀನು ಸರಿಯಾಗಿದ್ದರೆ ಎಲ್ಲವೂ ತಾನಾಗಿಯೇ ಸರಿಹೋಗುತ್ತದೆ ಸುಬ್ಬಣ್ಣಾ."

"ನೀನು ಹೊಸಪೇಟೆಗೆ ಯಾವಾಗ ಹೊರಡಬೇಕು?"

"ಇದೇನಯ್ಯಾ ಹೀಗೆ ಕೇಳುತ್ತೀ-ನ್ನಾನಿನ್ನೂ ಬರುವುದಕ್ಕೇ ಇಲ್ಲ-ಕಳಿಸುವ ಯೋಚನೆ ಮಾಡುತ್ತಿರುವೆಯಲ್ಲಾ!"

"ಅದಕ್ಕಲ್ಲ ಶಾಂತರುದ್ರ್ರಾ-ಮುಂದಿನ ವಾರ ರವಿಯ ಹುಟ್ಟಿದ ಹಬ್ಬ—ನೀನೂ ಇದ್ದರೆ ಚೆನ್ನಾಗಿರುತ್ತದೆ ಎಂದು ಯೋಚಿಸುತ್ತಿದ್ದೆ."

"ಇಲ್ಲ ಸುಬ್ಬಣ್ಣಾ—ಒಂದೆರಡು ದಿನಗಳಲ್ಲಿ ನಾನು ಹೊರಡಲೇಬೇಕಾಗಿದೆ. ಮಾವನವರಿಗೆ ಈಗ ಬೇಸರವನ್ನುಂಟುಮಾಡುವುದು ಸರಿಯಲ್ಲ."

"ಏಕೆ-ಆಸ್ತಿಗೆ ಚಕ್ಕರ್ ಬಿದ್ದೀತೆಂಬ ಭಯವೇನೋ?"

"ಆಸ್ತಿ ಎಲ್ಲಿ ಹೋಗತ್ತೆ ಸುಬ್ಬಣ್ಣಾ? ಎಂದಿದ್ದರೂ ನಾನೇ ಅದಕ್ಕೆ ವಾರಸುದಾರ. ಈ ಹನುಮಕೊಂಡದ ಸ್ವಾಮಿ, ಮೆಲ್ಲಗೆ ಒಂದು ಲಕ್ಷ ರೂಪಾಯಿಗೆ ಏಟು ಹಾಕುತ್ತಿದ್ದಾನೆ. ಹಾಸ್ಟೆಲ್ ಕಟ್ಟಿಸುತ್ತಾನಂತೆ;

ಕರ್ನಾಟಕ ಏಕೀಕರಣ ಮಾಡುತ್ತಾನಂತೆ; ವೀರಶೈವ ಧರ್ಮ ಉದ್ಧಾರ ಮಾಡುತ್ತಾನಂತೆ!"

"ಸ್ವಾಮಿಗಳು ಒಳ್ಳೆಯ ಕೆಲಸ ಮಾಡುವುದಕ್ಕೆ ನೀನೇಕೆ ಅಡ್ಡಿಯಾಗುತ್ತೀ ಶಾಂತರುದ್ರಾ. ಶ್ರೀಮಂತರ ಹಣದಲ್ಲಿ ಒಂದು ಭಾಗವಾದರೂ ದೇಶಕ್ಕಾಗಿ ವಿನಿಯೋಗವಾಗುವುದು ಒಳ್ಳೆಯದು. ಸ್ವಾಮಿಗಳಿಗೆ ನಿಮ್ಮ ಮಾವನವರು ಒಂದು ಲಕ್ಷ ರೂಪಾಯಿ ಕೊಟ್ಟರೆ ಅವರಿಗೆ ಬಡತನ ಬರುತ್ತದೆಯೇ?"

"ಹಣದಲ್ಲಿ ಒಂದು ಭಾಗವಾದರೂ ದೇಶಕ್ಕಾಗಿ ವಿನಿಯೋಗವಾಗುವ ಹಾಗಿದ್ದರೆ ನಾನು ಖಂಡಿತ ಬೇಡವೆನ್ನುತ್ತಿರಲಿಲ್ಲ ಸುಬ್ಬಣ್ಣ. ಈ ಸ್ವಾಮಿ ವಿಷಯ ನಿನಗೆ ಗೊತ್ತಿಲ್ಲ. ಬೆಂಗಳೂರು, ಮೈಸೂರು, ಬ್ಯಾಡಗಿ, ಹಾವೇರಿ, ಧಾರವಾಡ, ಬೆಳಗಾಂವಿ, ಕೊಲ್ಹಾಪುರ, ಮುಂಬಯಿಗಳು ಈ ಸ್ವಾಮಿಯ ಕಾರ್ಯಕ್ಷೇತ್ರಗಳು. ಅಲ್ಲಿ ನೋಡಬೇಕು ಇವನ ವೈಭವ—ಅಟ್ಟಹಾಸ-ಶೃಂಗಾರಲೀಲೆ."

"ಸ್ವಾಮಿಗಳು ಲಂಪಟರೇ?"

"ಶುದ್ಧ ಘಟಿಂಗ."

"ಅವರು ಘಟಿಂಗರೆಂದು ತಿಳಿದೂ ನೀವೇಕೆ ಅವರನ್ನು ಮನೆ ಸೇರಿಸುವಿರಿ? ಅವರ ಪಾದೋದಕ ಏಕೆ ಸ್ವೀಕರಿಸುವಿರಿ? ಅವರನ್ನು ಗುರುಗಳು ಎಂದೇಕೆ ಗೌರವಿಸುವಿರಿ?"

"ಬುದ್ಧಿಯಿಲ್ಲದೆ. ನಮ್ಮ ಜನ ಶುದ್ಧ ಮೂಢರು. ಕಾವೀ ಶಾಟಿಯೇ ಅವರಿಗೆ ಶಿವ—ಘಟಿಂಗ ಸ್ವಾಮಿಯ ಪಾದವೇ ಅವರಿಗೆ ಕೈಲಾಸ. ನಮ್ಮ ಧರ್ಮದಲ್ಲಿ ಗುರುವಿನ ಸ್ಥಾನ ಅತ್ಯುನ್ನತವಾದುದು. ಅವನು ಎಂಥವನೇ ಇರಲಿ ಅವನನ್ನು ಶಿವನಿಗಿಂತ ಹೆಚ್ಚು ಎಂದು ಕಾಣಬೇಕು-ತನು, ಮನ, ಧನವನ್ನು ಅವನಿಗರ್ಪಿಸಬೇಕು ಎನ್ನುವ ಸಿದ್ಧಾಂತವನ್ನು ಈ ಸ್ವಾಮಿಗಳು ನಮ್ಮ ಮೂಢಜನರ ತಲೆಯಲ್ಲಿ ತುಂಬಿಬಿಟ್ಟಿದ್ದಾರೆ. ಗೃಹಸ್ಥರ ಮನೆಯನ್ನು ಗುರು, ಸೂಳೆಗೇರಿ ಮಾಡಿದರೂ ಯಾರೂ ಉಸಿರೆತ್ತುವುದಿಲ್ಲ. ಅವನ ಸ್ಥಾನಮಾನಗಳಿಗೆ ಕಿಂಚಿತ್ತಾದ ಚ್ಯುತಿಯೂ ಬರುವುದಿಲ್ಲ."

"ನಾವೂ ಗುರುವನ್ನು ಗೌರವಿಸುತ್ತೇವೆ. ಆದರೆ ಇಷ್ಟು ದೂರ ನಾವು ಹೋಗಿಲ್ಲ ಶಾಂತರುದ್ರಾ."

"ಜನಕ್ಕೆ ವಿವೇಕ ಬಂದ ಹೊರತೂ ಏನೂ ಆಗುವುದಿಲ್ಲ ಸುಬ್ಬಣ್ಣ. ಈ ಹನುಮಕೊಂಡಯ್ಯ ಬಂದರೆ ನಿತ್ಯ ನಮ್ಮ ಮನೆಯಲ್ಲಿ ಪ್ರವಚನ—ನಾನೂ ಹೋಗಿ ಕುಕ್ಕರಿಸಿಕೊಂಡು ಕೇಳಬೇಕಾಗುತ್ತದೆ. ಈ ಗುರು ಏನು ಹೇಳುತ್ತಾನೆ ಗೊತ್ತೇ?—ವೀರಶೈವರೊಬ್ಬರೇ ಕೈಲಾಸದಿಂದ ನೇರವಾಗಿ ಭೂಮಿಗಿಳಿದು ಬಂದಿರುವವರು. ಉಳಿದವರೆಲ್ಲಾ ಭವಿಗಳು. ವೀರಶೈವ ಧರ್ಮವೊಂದೇ ಸತ್ಯ—ಉಳಿದುದೆಲ್ಲಾ ಅಸತ್ಯ. ಗುರುವಿನ ಗುಣದೋಷ ನೋಡದೆ ಅವನನ್ನು ಸರ್ವವಿಧದಿಂದಲೂ ತೃಪ್ತಿಪಡಿಸ ಬೇಕು. ಗುರುವಿನ ಕಟಾಕ್ಷ ಶಿವಕಟಾಕ್ಷಕ್ಕಿಂತ ದೊಡ್ಡದು. ಸಂಸ್ಕೃತ ಕಲಿಯಬೇಡಿ. ಸಂಸ್ಕೃತ ಗ್ರಂಥಗಳನ್ನು ಓದಬೇಡಿ. ಸಂಸ್ಕೃತದಿಂದ ದೇಶಕ್ಕೆ ಹಾನಿಯಾಗಿದೆ."

ಸುಬ್ರಹ್ಮಣ್ಯನಿಗೆ ತಡೆಯಲಾಗದಷ್ಟು ನಗು ಬಂದಿತು.

"ಎಷ್ಟು ಉತ್ಪ್ರೇಕ್ಷೆ ಮಾಡುತ್ತೀಯೋ ಶಾಂತರುದ್ರಾ. ಯಾರಾದರೂ ಹೀಗೆ ಮಾತನಾಡುತ್ತಾರೇನೋ!"

"ನಮ್ಮ ಗುರುಗಳ ವಿಷಯ ನಿನಗೆ ಗೊತ್ತಿಲ್ಲ ಸುಬ್ಬಣ್ಣ. ಅವರು ತಮ್ಮ ಜನಗಳ ಸಭೆಗಳಲ್ಲಿ ಮಾತನಾಡುವ ಧಾಟಿಯೇ ಬೇರೆ. ಸಮಾಜ—ನಮ್ಮ ಸಮಾಜದ ವಿಷಯ ಬಿಟ್ಟು ಬೇರೆ ಏನೂ ಅವರ ಗಮನಕ್ಕೆ ಬರುವುದೇ ಇಲ್ಲ. ಹೊರಗೆ—ಸಾರ್ವಜನಿಕರ ವೇದಿಕೆಯ ಮೇಲೆ ವಿಶ್ವ ಧರ್ಮ, ಪರಧರ್ಮ ಸಹಿಷ್ಣುತೆ ದೀನ ದಲಿತರ ಸೇವೆಯ ಮೇಲೆ ಉದ್ದುದ್ದ ಭಾಷಣಗಳನ್ನು ಮಾಡುತ್ತಾರೆ. ಕರ್ನಾಟಕ ಉದ್ಧಾರ ಮಾಡಲು ಬಂದಿರುವ 'ದ್ವಿತೀಯ ವಿದ್ಯಾರಣ್ಯ'ರೆಂದು ಬರಸಿಕೊಂಡು ತಮ್ಮ ಫೋಟೋ ಹಾಕಿಸಿಕೊಂಡಿದ್ದಾರೆ. ಈ ವ್ಯಕ್ತಿಯನ್ನು ನೀನೊಮ್ಮೆ ನೋಡಬೇಕಯ್ಯಾ. ಇವರನ್ನು ನೋಡುವುದಕ್ಕಾದರೂ ಹೊಸಪೇಟೆಗೆ ಬರಬಾರದೇ ?"

"ಆಗಲಪ್ಪಾ. ಒಮ್ಮೆ ಅನುಕೂಲಮಾಡಿಕೊಂಡು ಬರುತ್ತೇನೆ." ಎಂದು ಹೇಳಿದ. ರವಿಯನ್ನು ನೋಡಿಕೊಂಡು ಹೋಗಲು ಶಾಂತರುದ್ರ

ಬಹಳ ಹೊತ್ತು ಕುಳಿತ. ರವಿ ಎಷ್ಟು ಹೊತ್ತಾದರೂ ಮೇಲಕ್ಕೇಳಲಿಲ್ಲ. ಸುಬ್ರಹ್ಮಣ್ಯ ನಸು ನಗುತ್ತಾ "ಗಿರಿಜಕ್ಕನೂ ಕುಮಾರ ಸಂಭವ ಎದುರು ನೋಡುತ್ತಿರಬಹುದು" ಎಂದ.

"ಇಲ್ಲ ಕಣಯ್ಯಾ–ನಾನು ನಿನ್ನಷ್ಟು ಭಾಗ್ಯಶಾಲಿಯಲ್ಲ" ಎಂದೆದ್ದ.

ಸುಬ್ರಹ್ಮಣ್ಯ ಖಿನ್ನನ್ನಾಗಿ,

"ನೀನು ನಾಳೆ ನಾಡಿದ್ದರಲ್ಲಿಯೇ ಹೋಗಬೇಡ ಶಾಂತರುದ್ರಾ."

"ಮಾವನವರ ವರಾತ ಬರದಿದ್ದರೆ ಖಂಡಿತ ಇರುತ್ತೇನೆ ಸುಬ್ಬಣ್ಣ. ಸಾಯಂಕಾಲ ಬರುತ್ತೇನೆ. ರವಿಯನ್ನು ನೋಡಬೇಕು."

"ಕಾಫಿ ಮಾಡಿಸಿಕೊಡುತ್ತೇನೆ ಇರಯ್ಯಾ."

"ಈಗ ಬೇಡ. ಸಾಯಂಕಾಲಕ್ಕೆ ಕಾಫಿ, ತಿಂಡಿ ಎಲ್ಲಾ ಆಗಲಿ, ನಾಳೆ ಊಟಕ್ಕೂ ಇಲ್ಲೇ ಒಕ್ಕರಿಸುತ್ತೇನೆ."

"ನಿನ್ನ ಗುರುಗಳಿಗೆ ತಿಳಿದರೆ ಬಹಿಷ್ಕಾರ ಹಾಕುತ್ತಾರೆ ನೋಡು."

"ನಮ್ಮ ಗುರುಗಳು ನಿನ್ನಂಥ ಭವಿಗಳ ಮನೆಯಲ್ಲಿ ಜಲಪಾನ ಕೂಡ ಮಾಡುವುದಿಲ್ಲ ಸುಬ್ಬಣ್ಣ—ಸ್ಪೆನ್ಸರ್, ಬ್ರ್ಯಾಂಡನ್ ಕಂಪೆನಿಯ ಗಂಗಾಮೃತವೇ ಬೇಕು ಅವರಿಗೆ."

"ಗುರುನಿಂದೆ ಮಾಡುತ್ತಿರು. ನಿನಗೆ ರೌರವನರಕ ಪ್ರಾಪ್ತಿಯಾಗುತ್ತದೆ."

"ಅಲ್ಲಿ ಗುರುಗಳ ಕಾಟ ಇಲ್ಲದಿದ್ದರೆ, ಸಂತೋಷವಾಗಿ ಹೋಗಲು ಸಿದ್ಧನಾಗಿದ್ದೇನೆ" ಎಂದು ಹೊರಟುಬಿಟ್ಟ.

ಶಾಂತರುದ್ರನ ದರ್ಶನ, ಅವನ ಸರಳನುಡಿಗಳು, ಶಿಶುಸದೃಶ ಅಂತಃಕರಣ ಕಂಡು ಸುಬ್ರಹ್ಮಣ್ಯನಿಗೆ ಅಪಾರ ಆನಂದವಾಗಿತ್ತು. 'ಸಂಕುಚಿತಭಾವನೆ, ಸ್ವಾರ್ಥ, ಜಾತಿದ್ವೇಷ ತುಂಬಿರುವ ಈ ಜಗತ್ತಿನಲ್ಲಿ ಶಾಂತರುದ್ರನಂಥ ಕೆಲವು ವ್ಯಕ್ತಿಗಳು ಇದ್ದಾರಲ್ಲಾ' ಎಂದುಕೊಂಡ.

## ೩೬

ರವಿ ಹುಟ್ಟಿದ ಹಬ್ಬಕ್ಕೂ ನವರಾತ್ರಿ ರಜಾ ಆರಂಭಿಸುವುದಕ್ಕೂ ಮೂರೇ ವಾರಗಳ ಅಂತರವಿತ್ತು. ಶಂಕರ ರವಿಯ ಜನ್ಮೋತ್ಸವಕ್ಕೆ ಬರಲಾಗಲಿಲ್ಲ.

ಮನೆಯಲ್ಲಿ ಹೆಚ್ಚು ಆಡಂಬರವಿಲ್ಲದೆ ಜನ್ಮೋತ್ಸವ ದಿನಾಚರಣೆ ನಡೆಯಿತು. ಸಂಜೆಗೆ ಆರತಿ ಅಕ್ಷತೆಯಾಯಿತು.

ಶಾಂತೆರುದ್ರನೂ ಹೊರಟುಹೋಗಿದ್ದ. ಶಂಕರನೂ ಬರಲಿಲ್ಲ. ಉತ್ಸವ ಏಕೋ ಸುಬ್ರಹ್ಮಣ್ಯನಿಗೆ 'ಬೇಕೋ' ಎನ್ನಿಸಿತು.

"ನವರಾತ್ರಿ ರಜದಲ್ಲಿಯಾದರೂ ನೀನು ಹುಟ್ಟಬಾರದಾಗಿತ್ತೇನೋ ರವಿ. ಮುಂಚೆ ಹುಟ್ಟಿ ಎಷ್ಟು ಫಜೀತಿ ಮಾಡಿಬಿಟ್ಟೆ ನೋಡು. ನಿನ್ನ ಪ್ರೀತಿಯ ಚಿಕ್ಕಪ್ಪನೇ ನಿನ್ನ ಹುಟ್ಟಿದ ಹಬ್ಬಕ್ಕೆ ಬರಲಿಲ್ಲ"

ಎಂದು ಸುಬ್ರಹ್ಮಣ್ಯ ಮಗನನ್ನು ಏಡಿಸುವನು. ಪಾರ್ವತಮ್ಮನವರು ಮಗನ ಉದ್ಗಾರ ಕೇಳಿ ನಗುತ್ತಿದ್ದರು.

ಆರತಿ ಅಕ್ಷತೆಗೆ ಗೌರಿ ಮಗನನ್ನೆತ್ತಿಕೊಂಡು ಕೂಡುವ ದಿನ ಹೊಸ ಸೀರೆಯೊಂದನ್ನು ತೆರಬೇಕೆಂದು ಸುಬ್ರಹ್ಮಣ್ಯನಿಗೆ ಇಚ್ಛೆಯಾಗಿತ್ತು. ಅವನು ಗೌರಿಗೆ ಆ ಸೂಚನೆಯಿತ್ತಾಗ ಅವಳು ಮುಖ ಗಂಟು ಹಾಕಿಕೊಂಡು

"ನನಗೇಕೆ ಸೀರೆ?" ಎಂದಳು.

"ಮಗನ ಹುಟ್ಟಿದ ಹಬ್ಬ—ಸಂತೋಷವಾಗಿ ನೀನು ಹೊಸ ಸೀರೆ ಉಡಲಿ ಎಂದು ನನ್ನ ಅಪೇಕ್ಷೆ."

"ನನಗೇನೂ ಬೇಕಾಗಿಲ್ಲ. ಮನೆಯಲ್ಲಿಯೇ ಬೇಕಾದಷ್ಟು ಸೀರೆಗಳಿವೆ. ಏನು ಬೇಕಾದರೂ ನಿಮ್ಮ ಮಗನಿಗೆ ಮಾಡಿ."

"ನನ್ನ ಮಗ—ನಿನ್ನ ಮಗ ಅಲ್ಲವೇನು?"

"ಅವನು ಗುಣದಲ್ಲಿ ಯಾರನ್ನು ಹೋಲುತ್ತಾನೋ!"

"ನಿನ್ನನ್ನೇ ಹೋಲಲಿ ಗೌರಿ—ಆದರೆ ನಿನ್ನ ಸಿಟ್ಟು ಮಾತ್ರ ಕಲಿಯದಿರಲಿ."

"ನನ್ನ ಸಿಟ್ಟೊಂದೇ ನಿಮ್ಮ ಕಣ್ಣಿಗೆ ಬೀಳುವುದು."

"ಸಿಟ್ಟೊಂದೇ ಕಣ್ಣಿಗೆ ಬಿದ್ದಿದ್ದರೆ ನಿನ್ನನ್ನು ಮಾತನಾಡಿಸುವ ಗೋಜಿಗೇ ಹೋಗುತ್ತಿರಲಿಲ್ಲ."

"ಮಾತನಾಡಿಸಬೇಡಿ."

"ಹೆಣ್ಣಿನ ಮನಸ್ಸು ಮಲ್ಲಿಗೆಗಿಂತ ಕೋಮಲ ಎಂದು ಕೇಳಿದ್ದೆ."

"ಅಲ್ಲ-ಅದು ಕಗ್ಗಲ್ಲಿಗಿಂತಲೂ ಕಠಿಣ."

"ಅಮ್ಮನ ಮನಸ್ಸನ್ನರಿತಿರುವ ನಾನು ಆ ಆಪಾದನೆ ಮಾಡಲಾರೆ."

"ಅಮ್ಮ ಇರುವಾಗ ನಿಮಗೇನು ಚಿಂತೆ."

"ನನ್ನ ವಿಷಯ ಮಾತನಾಡುವಂತೆ ಅಮ್ಮನ ವಿಷಯ ಮಾತ್ರ ಮಾತನಾಡಬೇಡ."

"ನನಗೆ ಮಾತನಾಡುವುದಕ್ಕೆ ಬರುವುದಿಲ್ಲ."

"ಹಾಗೇ ಕಾಣುತ್ತದೆ."

"ನಿಮ್ಮ ಹಾಗೆ ಮಾತಿನಲ್ಲಿ ಜೇನು ತುಂಬಿ ಮನಸ್ಸಿನಲ್ಲಿ ನಂಜಿಟ್ಟು ಕೊಳ್ಳುವುದನ್ನು ನಾನು ಕಲಿತಿಲ್ಲ."

"ಗೌರೀ............"

"ಧ್ವನಿ ಎತ್ತರಿಸಿದರೆ ಏನೂ ಪ್ರಯೋಜನವಿಲ್ಲ. ಬಾಯಿಜೋರಿಗೆ ನಾನು ಹೆದರುವಳಲ್ಲ."

"ಧರ್ಮಕ್ಕಾದರೂ ಹೆದರಬೇಡವೇ?"

"ನಿಮ್ಮ ಧರ್ಮ ನನಗೆ ಬೇಕಿಲ್ಲ."

"ನಿನಗೇನು ಬೇಕು?"

.............................

"ನಿನಗೇನು ಬೇಕೆಂಬುದೂ ನಿನಗೆ ಗೊತ್ತಿಲ್ಲ. ಚಂಡಿಹಿಡಿಯುವ ಮಕ್ಕಳಂತೆ ಆಡುತ್ತಿರುವೆ."

"ನಾನು ಚಂಡಿ."

"ಮಾತಿಗೆ ಮಾತು ಬೆಳಸುವುದರಿಂದ ಏನು ಪ್ರಯೋಜನ."

"ನಾನೇನು ನಿಮ್ಮನ್ನು ಮಾತನಾಡಿಸಿಕೊಂಡು ಬರಲಿಲ್ಲವಲ್ಲ."

"ಇಲ್ಲ—ನಾನೇ ಮಾತನಾಡಿಸಿಕೊಂಡು ಬಂದೆ. ಅದೂ ಒಂದು ಅಪರಾಧವೇ?"

"ನೀವು ಮನೆಯ ಯಜಮಾನರಲ್ಲವೇ?–ನೀವು ಏನು ಮಾಡಿದರೂ ಅಪರಾಧವಿಲ್ಲ."

"ನನ್ನ ಯಜಮಾನಿಕೆ ಎಂದೋ ಮಣ್ಣುಗೂಡಿಹೋಯಿತು."

"ಮಣ್ಣುಗೂಡಿಸಿದವರು ಯಾರು?"

"ನನ್ನ ದುಷ್ಕರ್ಮ."

"ನಿಮ್ಮ ದುಷ್ಕರ್ಮಕ್ಕೆ ಇನ್ನೊಬ್ಬರನ್ನೇಕೆ ಆಕ್ಷೇಪಿಸುವಿರಿ?"

"ನಾನು ಆಕ್ಷೇಪಿಸುತ್ತಿಲ್ಲ–ನಮ್ಮ ವೈಮನಸ್ಯ ಪರಿಹರಿಸಲು ಪ್ರಯತ್ನಿಸುತ್ತಿದ್ದೇನೆ."

"ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡಿ."

"ನಾನು ಮಾತನಾಡಿಸುವುದೂ ಬೇಕಾಗಿಲ್ಲವೇ?"

"ನನಗೇನೂ ಬೇಕಾಗಿಲ್ಲ–ಈ ಪ್ರಪಂಚವೇ ಬೇಕಾಗಿಲ್ಲ."

ಸುಬ್ರಹ್ಮಣ್ಯನಿಗೆ ಮನೆಯಲ್ಲಿ ನಿಲ್ಲಲಾಗಲಿಲ್ಲ.

ಗೌರಿಯನ್ನು ಪುನಃ ಮಾತನಾಡಿಸುವ ಪ್ರಯತ್ನ ಅವನು ಮಾಡಲಿಲ್ಲ.

ಗೌರಿ ಸೆಟೆದುಕೊಂಡೇ ಇದ್ದಳು. ಪಾರ್ವತಮ್ಮನವರು ಅವಳಿಗೆ ವಿವೇಕ ಹೇಳಲೆತ್ನಿಸಿ ವಿಫಲರಾಗಿದ್ದರು. ಗೌರಿಯ ಇತ್ತಂಡವಾದ ಅವರಿಗೆ ಜುಗುಪ್ಸೆಯನ್ನುಂಟುಮಾಡಿತು.

ಗೌರಿಯ ಬಗ್ಗೆ ಪಾರ್ವತಮ್ಮನವರು ಅಸಮಾಧಾನಗೊಳ್ಳಲು ಇನ್ನೂ ಒಂದು ಕಾರಣ ಒದಗಿತು.

ಕಮಲಮ್ಮನ ಜತೆ ಗೌರಿ ವಿಶೇಷ ಸ್ನೇಹ ಬೆಳಸಲಾರಂಭಿಸಿದ್ದಳು. ಮನೆಯ ವಾತಾವರಣ ಇಷ್ಟು ಕಲುಷಿತವಾಗಿ, ಗೌರಿಗೂ ಸುಬ್ರಹ್ಮಣ್ಯನಿಗೂ ವೈಮನಸ್ಯ ಬೆಳೆಯಲು ಕಮಲಮ್ಮನ 'ಹರುಕುಬಾಯಿ'ಯೇ ಕಾರಣವಾಗಿತ್ತು. ಗಂಡನಿಗೂ ತನಗೂ ಮನಸ್ತಾಪ ತಂದಿಟ್ಟ ಕಮಲಮ್ಮನ ಸ್ನೇಹ ಗೌರಿ ಹೇಗೆ ಬೆಳಿಸಲು ಸಾಧ್ಯವೆನ್ನುವುದೇ ಪಾರ್ವತಮ್ಮನವರಿಗೆ ಬಗೆಹರಿಯದ ಪ್ರಶ್ನೆಯಾಯಿತು.

ಕಮಲಮ್ಮ ಗೌರಿಯನ್ನು ನೋಡಲು ಬರುವುದೂ, ಗೌರಿ ಅವಳನ್ನು ಕಾಣಲು ಅವಳ ಮನೆಗೆ ಹೋಗುವುದೂ ಹೆಚ್ಚಾಗುತ್ತ ಬಂತು.

ಕಮಲಮ್ಮ ಮತ್ತೆ ಏನೋ ಒಳಸಂಚು ಮಾಡಿ ಗೌರಿಗೂ, ಸುಬ್ರಹ್ಮಣ್ಯ ನಿಗೂ ಶಾಶ್ವತ ವೈಷಮ್ಯ ತಂದಿಟ್ಟುಬಿಡುತ್ತಾಳೆಂದು ಹೆದರಿದ ಪಾರ್ವ ತಮ್ಮನವರು ಒಂದು ದಿನ ಗೌರಿಯನ್ನು ಹತ್ತಿರ ಕೂಡಿಸಿಕೊಂಡು,

"ಗೌರಮ್ಮ, ಗಿರಿಜಾಕಲ್ಯಾಣದ ಹಾಡು ಕೇಳಿರುವೆಯಾ?" ಎಂದು ಕೇಳಿದರು.

ಗೌರಿ ಆಲಸ್ಯದಿಂದ "ಕೇಳಿದ್ದೇನೆ ಅತ್ತೆ" ಎಂದಳು.

"ಹಾಡಿನಲ್ಲಿ ಒಂದು ಸ್ವಾರಸ್ಯವಾದ ವಿಷಯವಿದೆ—ಹೇಳುತ್ತೇನೆ ಕೇಳು, ಬೇಸರಪಟ್ಟುಕೊಳ್ಳಬೇಡ."

ಅತ್ತೆಯನ್ನು ಉದ್ಧಾರಮಾಡುವಂತೆ ಗೌರಿ "ಹೇಳಿ ಅತ್ತೆ—ಕೇಳು ತ್ತೇನೆ" ಎಂದಳು.

"ಶಿವನನ್ನೇ ಮದುವೆಯಾಗಬೇಕೆಂದು ಗಿರಿಜೆ ಹಟ ಹಿಡಿಯು ತ್ತಾಳೆ. ಅವಳ ತಂದೆ ತಾಯಿ ಬೇಡವೆನ್ನುತ್ತಾರೆ. ಗಿರಿಜೆ ಕೇಳುವುದಿಲ್ಲ. ಶಿವನ ಮನ ಒಲಿಸಲು ಘೋರವಾದ ತಪಸ್ಸಿಗೆ ಕೂಡುತ್ತಾಳೆ. ಬೇಸಿಗೆ ಯಲ್ಲಿ ಅಗ್ನಿಯ ಮಧ್ಯೆ ಕುಳಿತು, ಹಿಮಗಾಲದಲ್ಲಿ ನೀರಿನಲ್ಲಿ ಕುಳಿತು ತಪ ಸ್ಸನ್ನಾಚರಿಸುತ್ತಾಳೆ.

"ಗಿರಿಜೆಯನ್ನು ಪರೀಕ್ಷಿಸಬೇಕೆಂದು ಶಿವ ವಟುವಿನಂತೆ ವೇಷ ಧರಿಸಿ ಅವಳಿದ್ದಲ್ಲಿಗೆ ಬಂದು,

'ಸುಂದರಿ ಇಂಥ ಘೋರ ತಪಸ್ಸನ್ನು ಏಕೆ ಆಚರಿಸುತ್ತಿರುವೆ?' ಎಂದು ಕೇಳುತ್ತಾನೆ. ಗಿರಿಜೆ ವಟುವನ್ನು ಸ್ವಾಗತಿಸಿ ಅವನ ಆತಿಥ್ಯ ಮಾಡಿ, ಭಕ್ತಿಯಿಂದ ನಮಸ್ಕರಿಸಿ

'ನನ್ನ ಇಷ್ಟದೈವ—ಪರಮೇಶ್ವರ ನನ್ನ ಪತಿಯಾಗಬೇಕೆಂದು ತಪ ಸ್ಸುಮಾಡುತ್ತಿದ್ದೇನೆ. ತ್ಯಾಗರಾಜನಾದ ಅವನನ್ನು ತ್ಯಾಗದಿಂದಲೇ ಒಲಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೇನೆ'

ಎಂದು ಹೇಳಲು ವಟು ವಿಕಟವಾಗಿ ನಕ್ಕು 'ನೀನೆಂಥ ಮೂರ್ಖ ಳಮ್ಮ! ಪರ್ವತನಂದಿನಿ, ನೀನು ರಾಜಕುಮಾರಿ. ಸರ್ವಾಂಗಸುಂದರಿ. ದಾಸದಾಸೀ ಜನಗಳಿಂದ ಸೇವೆ ಮಾಡಿಸಿಕೊಳ್ಳುವವಳು. ಮೃದು ತಲ್ಪದ ಮೇಲೆ ಮಲಗಿ ನಿದ್ರಿಸುವವಳು. ಪಂಚಭಕ್ಷ್ಯ ಪರಮಾನ್ನವನ್ನು

ಭುಜಿಸುವವಳು. ನೀನೆಲ್ಲಿ, ಆ ಶಿವನೆಲ್ಲಿ. ಅವನು ಮಹಾಕುರೂಪಿ. ಗಜಚರ್ಮಾಂಬರಧಾರಿ, ಮೈಗೆಲ್ಲಾ ಹಾವು ಬಿಗಿದುಕೊಂಡು ಬೂದಿ ಬಳಿದುಕೊಂಡು ಶ್ಮಶಾನದಲ್ಲಿ ವಾಸಿಸುತ್ತಾನೆ. ನರಕಪಾಲವೇ ಅವನ ಪಾನಪಾತ್ರೆ. ಪ್ರೇತವನವೇ ಅವನ ವಾಸಸ್ಥಾನ. ಕಂದಮೂಲಗಳೇ ಅವನ ಆಹಾರ. ಭೂತಪಿಶಾಚಿಗಳೇ ಅವನ ಪರಿವಾರ. ಇಂಥವ ನೊಂದಿಗೆ ನೀನು ಸಂಸಾರ ಮಾಡಬಲ್ಲೆಯಾ?" ಎಂದು ಕೇಳುತ್ತಾನೆ.

ಗಿರಿಜೆಗೆ ಬ್ರಹ್ಮಾಂಡ ಕೋಪ ಬಂದಿತಂತೆ.

'ನನ್ನ ಪತಿ–ನನ್ನ ಆರಾಧ್ಯಮೂರ್ತಿ–ಜಗದ್ವಂದ್ಯ ವಿಭು, ಅವನನ್ನು ನನ್ನೆದುರಿಗೇ ದೂಷಿಸುವೆಯಾ? ಬ್ರಾಹ್ಮಣ ವಟುವೆಂದು ಆದರಿಸಿ ಉಪ ಚರಿಸಿದರೆ, ನನ್ನ ಸ್ವಾಮಿಯನ್ನು ನಿಂದಿಸುವೆಯಾ' ಎಂದು ನೆಲದ ಮೇಲಿದ್ದ ವಿಭೂತಿ ಗಡ್ಡೆ ತೆಗೆದು ವಟುವಿನ ಮೇಲೆ ಒಗೆದಳಂತೆ. ವಟು ವಿನ ಕಪಟವೇಷ ಜಾರಿ ಶಿವ ಎದುರು ನಿಂತನಂತೆ. ಸತ್ಯಕ್ಕೆ ಅಪಚಾರ ಮಾಡಲು ಶಿವ ಪ್ರಯತ್ನಮಾಡಿದರೂ ಸಾಧ್ಯವಾಗುವುದಿಲ್ಲ, ಎಂದು ಹಾಡು ಸೂಚಿಸುತ್ತದೆ."

"ಈ ಕಥೆ ನನಗೇಕೆ ಹೇಳಿದಿರಿ ಅತ್ತೇ ?"

"ಸುಮ್ಮನೆ ಹೇಳಿದೆ ಅಷ್ಟೇ. ಕಥೆ ಚೆನ್ನಾಗಿತ್ತು. ನೀನೂ ಕೇಳಲಿ ಎಂದು ಹೇಳಿದೆ."

"ಪತಿನಿಂದೆಗೆ ನಾನು ಅವಕಾಶಕೊಡುತ್ತಿರುವೆನೆಂದು ನೀವು ಸೂಚಿ ಸುತ್ತಿರುವಿರಿ."

"ಹೌದು ಗೌರಾ—ಅದಕ್ಕೇ ನಾನು ಕಥೆ ಹೇಳಿದ್ದು. ಕಮಲಮ್ಮನ ಸಹವಾಸ ಯೋಗ್ಯವಾದುದಲ್ಲ. ನಮ್ಮ ಸಂಸಾರ ಚೆನ್ನಾಗಿರುವುದನ್ನು ನೋಡಿದರೆ ಅವಳಿಗೆ ಸಹನೆಯೇ ಇಲ್ಲ. ತೊಟ್ಟಿಲಿಟ್ಟ ದಿನ ಅವಳೇನು ಮಾಡಿದಳೆಂಬುದನ್ನು ಜ್ಞಾಪಿಸಿಕೋ. ಅಂಥವರಿಂದ ದೂರವಿರುವುದೇ ಲೇಸು."

"ಮನೆಯನ್ನೇ ನನಗೆ ಸೆರೆಮನೆ ಮಾಡುತ್ತಿರುವಿರಲ್ಲಾ ಅತ್ತೆ. ನಾನು ಒಂದು ಕಡೆ ಹೋಗಿಬರಬಾರದು. ಒಬ್ಬರ ಕೂಡ ಮಾತಾಡ ಕೂಡದು ಎಂದು ಹೊಸ ಆಜ್ಞೆ ವಿಧಿಸುತ್ತಿರುವಿರಲ್ಲಾ !"

"ಗೌರಾ, ಈಚೆಗೆ ನಿನ್ನ ಸಂಗಡ ಮಾತನಾಡುವುದಕ್ಕೇ ಹೆದರಿಕೆಯಾಗುತ್ತದಮ್ಮ. ಏನು ಹೇಳಿದರೂ ತಪ್ಪು ತಿಳಿದುಕೊಳ್ಳುತ್ತೀ."

"ಹೋಗಲಿ ಬಿಡಿ ಅತ್ತೆ. ನನ್ನ ಸ್ವಭಾವವೇ ಅಂಥಹದು." ಎಂದವಳೇ ಎದ್ದು ಹೊರಟುಹೋದಳು.

ಅತ್ತೆ ಸೊಸೆಯರ ಸಂಭಾಷಣೆ ಕೇಳುತ್ತಿದ್ದ ನಿಂಗವ್ವ ಹಣೆ ಹಣೆ ಗಟ್ಟಿಸಿಕೊಂಡು "ಈಯಮ್ಮಂಗೆ ಬುದ್ಧೀನೇ ಕೆಟ್ಹೋಗೈತ್ರವ್ವಾ" ಎಂದಳು.

ಅತ್ತೆಯ ಹಿತೋಕ್ತಿ ಗೌರಿಯ ಮನಸ್ಸಿನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲ.

ಗೌರಿ, ಕಮಲಮ್ಮನ ಸ್ನೇಹಕ್ಕೆ ಸ್ವಲ್ಪವೂ ಚ್ಯುತಿ ಬರಲಿಲ್ಲ.

## ೩೭

ನವರಾತ್ರಿ ರಜಕ್ಕೆ ಶ್ರೀಧರನ ಜತೆ ಕೃಷ್ಣರಾಜನಗರಕ್ಕೆ ಹೋಗ ಬೇಕೆಂಬ ಚಾಪಲ್ಯವನ್ನೂ ತಡೆದುಕೊಂಡು ಶಂಕರ ತಾವರೆಕೆರೆಗೆ ಹೋಗಲು ನಿಶ್ಚಯಿಸಿದ.

ಕೃಷ್ಣರಾಜನಗರದಲ್ಲಿ ಶ್ರೀಧರನ ಮನೆಯ ವಾತಾವರಣ ಪ್ರಿಯ ವಾಗಿತ್ತು. ಬಡತನವಿದ್ದರೂ ತೃಪ್ತಿ ಶಾಂತಿಗಳಿದ್ದುವು. ಮನೆಯವರಲ್ಲಿ ಒಮ್ಮತಿಸಮ್ಮತಿಯಿತ್ತು. ಮನೆಯ ಹಿತಕ್ಕಾಗಿ ಎಲ್ಲರೂ ಸ್ವಸುಖವನ್ನು ತ್ಯಾಗಮಾಡಲು ಸಿದ್ಧರಾಗಿದ್ದರು. ಎಲ್ಲಕ್ಕೂ ಹೆಚ್ಚಾಗಿ ಶ್ರೀಧರನ ಸಂಗ ವಿರುತ್ತಿತ್ತು.

ತಾವರೆಕೆರೆಯ ವಾತಾವರಣ ತದ್ವಿರುದ್ಧವಾಗಿತ್ತು. ಮನೆ ಅಶಾಂ ತಿಯ ತೌರಾಗಿತ್ತು. ಸಂಪತ್ತು ತುಂಬಿ ತುಳುಕುತ್ತಿದ್ದರೂ ತೃಪ್ತಿಯಿಲ್ಲ, ಶಾಂತಿಯಿಲ್ಲ. ಮನೆಯಲ್ಲಿ ಎಲ್ಲರಿಗೂ ಚಿಂತೆ. ತಮ್ಮ ತಮ್ಮ ಭಾವನಾ ದ್ವೀಪಗಳಿಂದ ಯಾರೂ ಹೊರಗೆ ಬರಲೊಲ್ಲರು. ಹದಿನೈದು ದಿವಸಗಳ ರಜವನ್ನು ಊರಿನಲ್ಲಿ ಕಳೆಯುವುದೆಂತು? ಜತೆಗೂ ಯಾರೂ ಇಲ್ಲ. ಶಾಂತರುದ್ರನೂ ಹೊಸಪೇಟೆಗೆ ಹೊರಟುಹೋಗಿದ್ದ. ಸುಬ್ರಹ್ಮಣ್ಯನಿಗೆ ಕೈತುಂಬ ಕೆಲಸ. ಒಂದು ವೇಳೆ ಅವನಿಗೆ ಪುರಸತ್ತಿದ್ದರೂ ಅವನೊಂ ದಿಗೆ ಸಲಿಗೆಯಿಂದ ವರ್ತಿಸಲು ಸಾಧ್ಯವಿರಲಿಲ್ಲ.

ಒಂದು ತತ್ತ್ವಪರಿಪಾಲನೆಗಾಗಿ ಶಂಕರ ಊರಿಗೆ ಬಂದ. 'ನಗರಕ್ಕೆ ಶ್ರೀಧರ ಹೋಗದಿದ್ದರೆ ಅವನ ತಾಯಿ ನೊಂದುಕೊಳ್ಳುತ್ತಿದ್ದರು. ಹಾಗೆಯೇ ನಾನು ಬರದಿದ್ದರೆ ನನ್ನ ತಾಯಿಯೂ ನೊಂದುಕೊಳು ತ್ತಿದ್ದರು. ತಾಯಿಗೆ ನಾನು ಹೆಚ್ಚಿನ ಉಪಕಾರ ಮಾಡಬೇಕಾದ ಅಗತ್ಯ ವಿಲ್ಲ. ಅವರ ಮನಸ್ಸಿಗೆ ಅನಾವಶ್ಯಕ ವ್ಯಥೆಯನ್ನುಂಟುಮಾಡದಿದ್ದರೆ ಸಾಕು' ಎಂದುಕೊಂಡ.

ತಮ್ಮನನ್ನು ಕಂಡ ಕೂಡಲೆ ಸುಬ್ರಹ್ಮಣ್ಯ ಶಾಂತರುದ್ರ ಬಂದಿದ್ದ ಸಂಗತಿ ತಿಳಿಸಿ

"ನಾವು ಯಾರೂ ಹೊಸಪೇಟೆಗೆ ಬರಲಿಲ್ಲವೆಂದು ಬಹಳ ಆಕ್ಷೇಪಣೆ ಮಾಡಿದನಪ್ಪಾ. ನೀನಾದರೂ ಹೋಗಬೇಕಂತೆ."

"ನನಗೂ ಹೋಗುವ ಆಸೆಯಿದೆಯಣ್ಣಾ. ಹಂಪೆ ನೋಡಬೇಕೆಂದು ಬಹಳ ದಿವಸಗಳಿಂದ ತವಕಪಡುತ್ತಿದ್ದೇನೆ. ಹೋಗುವುದಕ್ಕೆ ಪುರಸತ್ತೇ ಸಿಕ್ಕುವುದಿಲ್ಲ."

"ಓದು ಹೇಗೆ ಸಾಗಿದೆ?"

"ಚೆನ್ನಾಗಿ ಸಾಗಿದೆ."

"ಶಾಸ್ತ್ರಿಗಳು—ಶ್ರೀಧರ ಚೆನ್ನಾಗಿದ್ದಾರೆಯೇ ?"

"ಚೆನ್ನಾಗಿದ್ದಾರೆ."

ಮುಂದೆ ಏನು ಮಾತನಾಡಬೇಕೆಂಬುದು ಇಬ್ಬರಿಗೂ ತೋರುತ್ತಿರಲಿಲ್ಲ.

ಮೈಸೂರು ವಿಳಾಸಕ್ಕೆ ಬಂದಿದ್ದ, ಅಣ್ಣನ ಕಾಗದ ನೋಡಿ ಶಂಕರನಿಗೆ ಒಂದು ನಂಬಿಕೆಯಾಗಿತ್ತು. 'ಅಣ್ಣ ತನ್ನ ಪಾಪಬಾಂಧವ್ಯ ನೀಗಿಕೊಂಡಿದ್ದಾನೆ. ಅವನ ಮನಸ್ಥೈರ್ಯ ಅತ್ತಿಗೆಯ ಮನಸ್ಸಿಗೆ ಸಂತೋಷ ವುಂಟುಮಾಡಿರಲೇಬೇಕು. ಅಣ್ಣ, ಅತ್ತಿಗೆಯರ ಮಧ್ಯೆ ಇದ್ದ ವಿರಸ ಕಳೆದು ಸ್ನೇಹ ಮೂಡಿರಬೇಕು. ಅವರ ಜೀವನದ ಕಾರ್ಮೋಡ ಜಾರಿ, ಬೆಳಗಿನ ಕಳೆ ಬಿತ್ತರಿಸಿರಬೇಕು' ಎಂದು ನಿರೀಕ್ಷಿಸಿದ್ದ ಶಂಕರನ ಕನಸು ಒಡೆದು ನುಚ್ಚುನೂರಾಯಿತು.

ಅಣ್ಣ, ಅತ್ತಿಗೆಯ ಸಂಬಂಧ ಮತ್ತಷ್ಟು ವಿರಸಕ್ಕೆ ವಿರೋಧಕ್ಕೆ ಎಡೆಕೊಟ್ಟಿದ್ದುದನ್ನು ಕಂಡು ಅವನ ಮನಸ್ಸು ಮಮ್ಮಲ ಮರುಗಿತು.

ತಮ್ಮನ ಆಂಹತಿಯನ್ನು ಸುಬ್ರಹ್ಮಣ್ಯ ಅರ್ಥಮಾಡಿಕೊಂಡಿದ್ದ. ಶಂಕರನ ಮನಸ್ಸನ್ನು ಸಂತೋಷಗೊಳಿಸಬೇಕೆಂಬ ಉತ್ಕಟಾಕಾಂಕ್ಷೆಯೂ ಸುಬ್ರಹ್ಮಣ್ಯನಿಗಿತ್ತು. ಆದರೆ ಅದನ್ನು ಹೇಗೆ ಸಾಧಿಸಬೇಕೆಂಬುದು ಅವನಿಗೆ ಭಾಸವಾಗಿರಲಿಲ್ಲ.

ಒಂದು ದಿನ ಸುಬ್ರಹ್ಮಣ್ಯನಿಗೆ ಥಟ್ಟನೆ ರಾಮುಸಾಗರದ ನೆನಪಾಗಲು ತಾಯಿಯ ಬಳಿಗೆ ಬಂದು, "ಅಮ್ಮ, ನಾವು ರಾಮುಸಾಗರಕ್ಕೆ ಹೋಗಿ ಬಹಳ ದಿನಗಳಾದುವಲ್ಲನೇ ?" ಎಂದ.

"ನೀನು ಸಣ್ಣವನಾಗಿದ್ದಾಗ ಅವರ ಜತೆ ಹೋದದ್ದು. ಈಚೆಗೆ ಎಲ್ಲಿಗೂ ಹೋಗಿಯೇ ಇಲ್ಲವಲ್ಲ."

"ಶಂಕರ ರಾಮಸಾಗರ ನೋಡಿಯೇ ಇಲ್ಲ."

"ಹೌದು, ಗೌರಿಯೂ ನೋಡಿಲ್ಲ."

"ನಾಳೆ ನಾಡಿದ್ದು ಏಕೆ ಎಲ್ಲರೂ ಹೋಗಿಬರಕೂಡದು."

"ಹಬ್ಬ ಸಾಲು. ಹೇಗೆ ಹೋಗುವುದೋ ಸುಬ್ಬೂ."

"ಹಬ್ಬ ಅಲ್ಲೇ ಮಾಡಿದರಾಯಿತು. ಶ್ರೀರಾಮನ ಸಾನ್ನಿಧ್ಯದಲ್ಲಿ...."

ಪಾರ್ವತಮ್ಮನವರು ಸ್ವಲ್ಪ ಕಾಲ ಯೋಚಿಸಿ "ಅದು ನಿಜವೇ. ಅಲ್ಲೇ ಮಾಡಬಹುದು."

"ಇಲ್ಲೇ ಅಡಿಗೆಮಾಡಿ ಕಟ್ಟಿಕೊಂಡು ಹೋದರಾಯಿತು."

"ಮೈಲಿಗೆಯಲ್ಲಿ ಅನ್ನ ಹೇಗೆ ತಿನ್ನುವುದೋ ಸುಬ್ಬು—ಅದೂ ಹಬ್ಬದ ದಿನಗಳಲ್ಲಿ. ಒಂದು ಕೆಲಸ ಮಾಡು. ಬೇಗ ಗಾಡಿ ಕಟ್ಟಿಸು. ಏಳು ಗಂಟೆಯೊಳಗೆ ನಾವು ರಾಮಸಾಗರ ತಲುಪಿದರೆ ಅಲ್ಲೇ ಅಡಿಗೆ ಮಾಡಿ ನಿಮಗೆಲ್ಲಾ ಹನ್ನೆರಡು ಗಂಟೆ ವೇಳೆಗೆ ಬಡಿಸುತ್ತೇನೆ."

"ಏಳು ಗಂಟೆಗೆ ನಾವು ಅಲ್ಲಿರಬೇಕಾದರೆ ಐದು ಗಂಟೆಗೇ ಗಾಡಿ ಕಟ್ಟಿಸಬೇಕು."

"ರಾಮಸಾಗರ ಎಷ್ಟು ಮೈಲಿ ಆಗುತ್ತದೆ ಹೇಳು?"

"ಐದಾರು ಮೈಲಿಯಾಗಬಹುದು."

"ಆರು ಗಂಟೆಗೆ ಗಾಡಿ ಕಟ್ಟಿಸಪ್ಪ—ನಾವು ಎಂಟು ಗಂಟೆಗೆ ಅಲ್ಲಿಗೆ ಹೋದರೂ ಪರವಾಯಿಲ್ಲ. ದೇವರಿಗೆ ಅಭಿಷೇಕಮಾಡಿಸಿ, ಚೆನ್ನಾಗಿ ಪೂಜೆ ಮಾಡಿಸು. ನಮ್ಮ ಮನೆ ಕಾಡುತ್ತಿರುವ ಕೆಟ್ಟಗ್ರಹ ಬಿಟ್ಟು ಹೋದರೆ ಸಾಕಾಗಿದೆ."

ಅಣ್ಣನ ಸಲಹೆಯನ್ನು ಶಂಕರ ಅನುಮೋದಿಸಿ ಸಂತೋಷ ವ್ಯಕ್ತ ಮಾಡಿದ. ಗೌರಿ ಮಾತ್ರ ಯಾವ ಉತ್ಸಾಹವನ್ನೂ ತೋರಲಿಲ್ಲ.

ಚೌತಿಯ ದಿನ ರಾಮಸಾಗರಕ್ಕೆ ಹೋಗುವುದೆಂದು ನಿಶ್ಚಯ ವಾಯಿತು. ಪ್ರಯಾಣ ಸಿದ್ಧತೆ ಮಾಡಿಕೊಳ್ಳುವುದಕ್ಕೆ ಪಾರ್ವತಮ್ಮ ನವರ ಕಾಲ ವಿನಿಯೋಗವಾಯಿತು. ಅತ್ತೆ ಕರೆದಾಗ ಗೌರಿ ಬಂದು ಅವರು ಹೇಳಿದ ಕೆಲಸ ಮಾಡಿಕೊಡುತ್ತಿದ್ದಳು.

ನೆನಸಿದ ಬಾದಾಮಿಯ ಸಿಪ್ಪೆ ಸುಲಿಯುತ್ತಾ ಗೌರಿ "ರಾಮಸಾಗರಕ್ಕೆ ಯಾರು ಯಾರು ಹೋಗುವುದು ಅತ್ತೆ?" ಎಂದು ಕೇಳಿದಳು. ಪಾರ್ವತಮ್ಮನವರು

"ನಾವೇ—ಮನೆಯವರು. ಏಕೆ ?"

"ಕಮಲಕ್ಕನ್ನ ಕರೆಯೋಣಾಂತಿದ್ದೆ."

ಪಾರ್ವತಮ್ಮನವರಿಗೆ ಕಾಲಿನಿಂದ ನೆತ್ತಿಯ ವರೆಗೆ ಕೋಪವೇರಿದರೂ ತೋರಿಸಿಗೊಳ್ಳದೆ

"ಮನೆಯವರಷ್ಟೇ ಜನ ಹೋಗುವುದೆಂದು ನಿರ್ಧರಿಸಿರುವಾಗ ಕಮಲಮ್ಮನನ್ನು ಹೇಗೆ ಜತೆಯಲ್ಲಿ ಕರೆದುಕೊಂಡು ಹೋಗುವುದು ಗೌರಿ ?"

"ಹೋಗೋ ಗಾಡಿ ಹೋಗುತ್ತದೆ, ಬರೋ ಗಾಡಿ ಬರುತ್ತದೆ. ಅವರೊಬ್ಬರು ಬಂದರೇನು ?"

"ಸುಬ್ಬು ಬೇಸರಪಟ್ಟುಕೊಳ್ಳುತ್ತಾನೆ."

"ಅವರೇಕೆ ಬೇಸರಪಟ್ಟುಕೊಳ್ಳಬೇಕು ?"

"ನಮ್ಮ ಮನೆಯಲ್ಲಿ ಇಷ್ಟು ಹಗರಣವಾಗುವುದಕ್ಕೆ ಕಮಲಮ್ಮ ಮಾಡಿರುವ ಸಹಾಯ ಯಾರೂ ಮರೆಯಲು ಸಾಧ್ಯವಿಲ್ಲ ಗೌರಿ. ಅವಳು ಬರುವುದು ನನಗೂ ಇಷ್ಟವಿಲ್ಲ."

"ಮಾಡಿದವರ ಪಾಪ ಆಡಿದವರ ಬಾಯಲ್ಲಿ ಎಂದು ಹೇಳಿದ ಹಾಗಾಯಿತು."

"ಇರಬಹುದು. ಕಂಡವರ ಮನೆ ವ್ಯವಹಾರಕ್ಕೆ ಜನ ಅನಾವಶ್ಯಕವಾಗಿ ಕೈಹಾಕದಿದ್ದರೆ ಬದುಕಿಕೊಳ್ಳಬಹುದು. ಉಗುರಿನಲ್ಲಿ ತೆಗೆಯಬಹುದಾದುದನ್ನು ಕೊಡಲಿಯಿಂದ ಕಡಿಯುವಂತೆ ಮಾಡುತ್ತಾರೆ ಕೆಲವು ಪುಣ್ಯಾತ್ಮರು."

"ಕಮಲಕ್ಕನ ವಿಷಯ ನೀವು ತಪ್ಪು ತಿಳಿದುಕೊಂಡಿದ್ದೀರಿ ಅತ್ತೆ."

"ಇರಬಹುದು."

ಗೌರಿ ತನ್ನ ಅತೃಪ್ತಿಯನ್ನು ಬಾದಾಮಿಯ ಮೇಲೆ ತೀರಿಸಿಕೊಂಡು ಒಳಕ್ಕೆದ್ದು ಹೋದಳು.

ರಾಮಸಾಗರದಲ್ಲಿದ್ದ ಶ್ರೀರಾಮದೇವರ ದೇವಾಲಯ ಪ್ರಸಿದ್ಧ ಜಕಣಾಚಾರಿಯು ಕಟ್ಟಿಡ ಎಂದು ಹೆಸರು ಪಡೆದಿತ್ತು. ದೇವಾಲಯುದ ಒಳ ಹೊರ ವಲಯಗಳು ಹೊಯ್ಸಳ ಶಿಲ್ಪಸಂಪ್ರದಾಯಕ್ಕೆ ಸೇರಿದುದೆನ್ನುವುದು ನಿರ್ವಿವಾದವಾಗಿತ್ತು. ಜಕಣಾಚಾರಿ ಕಟ್ಟಡವೆಂದು ಪ್ರತೀತಿಪಡೆದಿದ್ದ ಹೊಯ್ಸಳ ಶಿಲ್ಪಸಂಪ್ರದಾಯದಲ್ಲಿ ಶ್ರೀರಾಮ ದೇವಾಲಯ ಹೇಗೆ ಬಂದಿತೆನ್ನುವುದು ಅನೇಕ ಊಹಾಪೋಹಗಳಿಗೆ ಆಸ್ಪದವಿತ್ತಿತ್ತು. ಪ್ರಾಕಾರದಲ್ಲಿದ್ದ ಕೆತ್ತನೆಯ ಮೂರ್ತಿಗಳನ್ನೂ, ಭಾರತ ಭಾಗವತಗಳ ಚಿತ್ರಸರಣಿಯನ್ನೂ ನೋಡುವಾಗ ರಾಮದೇವರ ಮಂದಿರದಲ್ಲಿ ಒಂದು ಕಾಲಕ್ಕೆ ಚನ್ನಕೇಶವಸ್ವಾಮಿಯೋ, ವೀರ ನಾರಾಯಣಸ್ವಾಮಿಯೋ ಪ್ರತಿಷ್ಠಿತವಾಗಿದ್ದಿರಬೇಕು. ಟಿಪ್ಪುವಿನ ಕಾಲದಲ್ಲಿ ಶ್ರೀರಂಗಪಟ್ಟಣಕ್ಕೆ ಬಂದ ಫ್ರೆಂಚರು, ತಾವರೆಕೆರೆಯ ಮೇಲೇ ಹಿರೋಡೆ ತಲುಪಿದ್ದರು. ರಾಮಸಾಗರದ ದೇವಾಲಯುದ ಮೂಲ ವಿಗ್ರಹ ಅವರ ಕೈಗೆ ಸಿಕ್ಕಿ ಪುಡಿಪುಡಿಯಾಗಿರಬೇಕು. ಇಲ್ಲದಿದ್ದರೆ ಯಾವನಾದರೂ ಫ್ರೆಂಚ್ ದಳವಾಯಿ ಆ ವಿಗ್ರಹದ ಸೌಂದರ್ಯಕ್ಕೆ ಮರುಳಾಗಿ ಅದನ್ನು ತನ್ನ ಊರಿಗೆ ಸಾಗಿಸಿರಬೇಕು.

ಈ ದೇವಾಲಯ ಬಹಳ ಕಾಲ 'ದೇವರಿಲ್ಲದ ದೇಗುಲ' ವಾಗಿ ಪಾಳು ಬಿದ್ದಿದ್ದುದಂತೂ ನಿಜ. ರಾಮಸಾಗರದ ಗೌಡ, ಪ್ರಕೃತ ಜೀವಂತರಾಗಿದ್ದ ಕೆಂಗೇಗೌಡರ ಅಜ್ಜ ಹನುಮೇಗೌಡ, ದೇವಾಲಯವನ್ನು ಜೀರ್ಣೋದ್ಧಾರ ಮಾಡಿ ಪುಣ್ಯಭಾಗಿಯಾದ. ಹನುಮೇಗೌಡನ ಕಾಲಕ್ಕೇ ಚೆನ್ನಕೇಶವಸ್ವಾಮಿಯ ಸ್ಥಾನದಲ್ಲಿ ರಾಮದೇವರ ಪ್ರತಿಷ್ಠೆಯಾಗಿದ್ದರೂ ಆಗಿರಬಹುದು.

ಹನುಮೇಗೌಡ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದುದಲ್ಲದೆ, ಪೂಜೆ ಪುರಸ್ಕಾರಾದಿಗಳು ಶಾಶ್ವತವಾಗಿ ನಡೆದುಕೊಂಡು ಬರುವಂತೆ ದೇವಸ್ಥಾನಕ್ಕೆ ಗದ್ದೆ, ತೋಟಗಳನ್ನೂ ದಾನಮಾಡಿ, ಅರ್ಚಕರ ಮನೆತನಕ್ಕೆ ಶಾಶ್ವತವಾಗಿ ನಡೆದುಬರುವಂತೆ ದತ್ತಿಗಳನ್ನಿತ್ತು ಕೀರ್ತಿಶಾಲಿಯಾದ. ದೇವಸ್ಥಾನದಲ್ಲಿ ಪೂಜೆ, ಅಭಿಷೇಕ ಅವಿಚ್ಛಿನ್ನವಾಗಿ ನಡೆಯುತ್ತಿದ್ದುವು.

ತಾವರೆಕೆರೆ ಬಿಟ್ಟು ಹೊರಟರೆ ಐದು ಮೈಲಿ ರಾಜಮಾರ್ಗದಲ್ಲಿ ಹೋಗಬೇಕಾಗಿತ್ತು. ಅಲ್ಲಿಂದ ಬಲಕ್ಕೆ ತಿರುಗಿ ಒಂದು ಮೈಲಿ ಹೋಗುವಲ್ಲಿ ರಾಮಸಾಗರ ಕೆರೆಯ ದಂಡೆ ಸಿಕ್ಕುತ್ತಿತ್ತು. ದಂಡೆಯತ್ತ ಸೊಗಸಾದ ಬಾಳೆ, ತೆಂಗಿನ ತೋಟ. ತೋಟಕ್ಕೂ ಕೆರೆಗೂ ಮಧ್ಯೆಯಿದ್ದ ದಂಡೆಯ ಮೇಲೇ ಊರು ಪ್ರವೇಶಿಸಬೇಕಾಗಿತ್ತು. ಊರಿನ ಕೊನೆಗೇ ಶ್ರೀರಾಮ ದೇವಾಲಯ. ದೇವಾಲಯದ ಎಡಬದಿಯಲ್ಲಿಯೇ ರಾಮಸಾಗರ ಹರಿಯುತ್ತಿತ್ತು. ಎತ್ತರವಾದ ದಿಣ್ಣೆಯ ಮೇಲೆ ಕಟ್ಟಲ್ಪಟ್ಟಿದ್ದ ದೇವಾಲಯ, ನೇತ್ರಾನಂದಕರವಾಗಿ ಊರನ್ನೇ ದಿಟ್ಟಿಸಿ ನೋಡುತ್ತ ನಿಂತಿತ್ತು.

ಸುಬ್ರಹ್ಮಣ್ಯ ಬೆಳಿಗ್ಗೆ ಐದು ಗಂಟೆಗೇ ಗಾಡಿ ಕಟ್ಟಿಸಿ ಮನೆಯವರನ್ನೆಲ್ಲಾ ಹೊರಡಿಸಿದ. ಏಳು ಗಂಟೆಯ ವೇಳೆಗೆ ಗಾಡಿ ರಾಮಸಾಗರ ಮುಟ್ಟಿತು.

ಪಾರ್ವತಮ್ಮನವರು ಗಾಡಿಯಿಂದ ಇಳಿದೊಡನೆಯೇ ಛತ್ರವನ್ನು ಶುದ್ಧಿಮಾಡಿ ಒಲೆ ಹೊತ್ತಿಟ್ಟು ಬಿಸಿಬಿಸಿ ಕಾಫಿ ಮಾಡಿ ಸುಬ್ರಹ್ಮಣ್ಯ, ಶಂಕರನಿಗೆ ಕೊಟ್ಟರು. ಗೌರಿ ಬೇಡವೆನ್ನುತ್ತಿದ್ದರೂ ಕೇಳದೆ, ಅವಳಿಗೆ ಸ್ವಲ್ಪ ಕಾಫಿ ಕುಡಿಸಿದರು.

ಶಂಕರ ರಾಮದೇವಾಲಯದ ಶಿಲ್ಪಸೌಂದರ್ಯದಲ್ಲಿ ಮೈ ಮರೆತುಬಿಟ್ಟ. ಮೈ ತುಂಬಿ, ಎದೆ ತುಂಬಿ ದಿಟ್ಟರಾಗಿ ನಿಂತಿದ್ದ ಮದನಿಕೆಯರು, ನಿತ್ಯ ಜೀವನದ ವಿವಿಧ ಚಟುವಟಿಕೆಗಳಲ್ಲಿ ಆಸಕ್ತರಾಗಿದ್ದ ಸಾಮಾನ್ಯ ಜನರು, ಧರ್ಮ ಸಂಸ್ಥಾಪನೆಗಾಗಿ ಅವತಾರವೆತ್ತಿ ಬಂದ ವರಾಹ, ನಾರಸಿಂಹ, ವಾಮನ, ರಾಮ, ಕೃಷ್ಣರ ಚರಿತ್ರೆಗಳು ಸಾದ್ಯಂತವಾಗಿ ಚಿತ್ರಿತವಾಗಿದ್ದುವು. ಶ್ರೀಧರನನ್ನೂ ಶಾಸ್ತ್ರಿಗಳನ್ನೂ ಕರೆದುಕೊಂಡು ಬರಲಿಲ್ಲವಲ್ಲಾ ಎಂದು ಶಂಕರ ವಿಷಾದಪಟ್ಟುಕೊಂಡ.

ಅಡಿಗೆಯ ಜವಾಬ್ದಾರಿಯನ್ನು ಪಾರ್ವತಮ್ಮನವರೇ ಸಂಪೂರ್ಣವಾಗಿ ಹೊತ್ತುಕೊಂಡು ಸೊಸೆಗೆ ವಿರಾಮವಿತ್ತರು. ರವಿಯನ್ನಾಡಿಸುತ್ತ ಗೌರಿ ದೇವಾಲಯದ ಎದುರಿಗಿದ್ದ ಮರದ ಕೆಳಗೆ ಸ್ವಚಿಂತನೆಯಲ್ಲಿ ನಿಮಗ್ನಳಾದಳು. ಗೌರಿ ಒಬ್ಬಳೇ ಕುಳಿತಿರುವುದನ್ನು ನೋಡಿ ಸುಬ್ರಹ್ಮಣ್ಯನೂ

ಸಮೀಪದಲ್ಲಿ ಕುಳಿತುಕೊಂಡು "ದೇವಸ್ಥಾನ ನೋಡುವುದಿಲ್ಲವೆ ಗೌರಿ?" ಎಂದು ಮಾತನ್ನಾರಂಭಿಸಿದ.

ಗೌರಿ ನಿರುತ್ಸಾಹದಿಂದ "ನೋಡಿದರಾಯಿತು" ಎಂದಳು.

"ಇನ್ನೂ ನನ್ನ ಮೇಲೆ ಕೋಪವೆ?"

"ನಿಮ್ಮ ಮೇಲೆ ನನಗೇಕೆ ಕೋಪ?"

"ಏಕೆ ಎನ್ನುವುದು ನಿನಗೇ ಗೊತ್ತು."

"ಹೆಣ್ಣಿನ ಕೋಪ ದವಡೆಗೆ ಮೂಲ."

"ಇಲ್ಲ ಗೌರಿ—ಇನ್ನು ಎಂದೆಂದಿಗೂ ನಿನ್ನ ಮೇಲೆ ಕೈಮಾಡುವುದಿಲ್ಲ. ಅಮ್ಮನಿಗೆ ಮಾತು ಕೊಟ್ಟಿದ್ದೇನೆ."

"ಹೋಗಲಿ ಬಿಡಿ."

"ನಿನಗೆ ನಾನು ಮಾಡಿರುವ ಅನ್ಯಾಯ ಸರಿಪಡಿಸಬೇಕೆಂದು ತವಕ ಪಡುತ್ತಿದ್ದೇನೆ. ಮನೆಯಲ್ಲಿಯೇ ಇದ್ದು ನಿನಗೂ ಬೇಸರವಾಗಿರಬಹುದು—ನಡೀ ನಾಲ್ಕು ದಿನ ಮೈಸೂರಿಗೆ ಹೋಗಿ ಬರೋಣ."

"ನಾನು ಎಲ್ಲಿಗೂ ಬರುವುದಿಲ್ಲ."

"ಜೀವಮಾನವೆಲ್ಲಾ ನಾವು ಹೀಗೇ ಕಳೆಯಬೇಕೇ?"

"ಇನ್ನು ಹೇಗೆ ಕಳೆಯಬೇಕು?"

"ಅನ್ಯೋನ್ಯವಿಲ್ಲದ ಜೀವನ..............."

"ನನ್ನ ಕಷ್ಟ ಸುಖ ಯಾರಿಗೆ ಬೇಕಾಗಿದೆ."

"ನನಗೆ ಬೇಕಾಗಿದೆ."

"ನಿಮಗೆ ಬೇಕಾಗಿದ್ದರೆ ನಾನೇಕೆ ವ್ಯಸನಪಡುತ್ತಿದ್ದೆ."

"ಮನುಷ್ಯನಾಗಿ ಹುಟ್ಟಿದ ಮೇಲೆ ತಪ್ಪುಮಾಡದೆಯೇ ಇರಲು ಸಾಧ್ಯವೇ ?"

"ಗುಲಗಂಜಿಯ ಕಪ್ಪು ಅದಕ್ಕೆ ಗೊತ್ತಾಗುವುದಿಲ್ಲವಂತೆ!"

"ಈ ಗುಲಗಂಜಿಗೆ ಗೊತ್ತಾಗಿದೆ."

"ಬಾಯಲ್ಲಿ ಹೇಳಿದರೆ ಏನು ಪ್ರಯೋಜನ?"

"ಇನ್ನು ಹೇಗೆ ಹೇಳಬೇಕು. ಹೃದಯ ಬಿಚ್ಚಿ ತೋರಿಸಲು ಸಾಧ್ಯವೇ ?"

"ಕಾರ್ಯದಲ್ಲಿ ಮಾಡಿ ತೋರಿಸಬೇಕು."

"ಆ ಕೆಲಸವನ್ನು ಮಾಡಿಯೇ ಇರುವೆನಲ್ಲಾ!"

"ನಿಮ್ಮ ಮಾತನ್ನು ಹೇಗೆ ನಂಬಲಿ?"

"ಮಾತು ನಂಬಬೇಡ. ಕೃತಿಯನ್ನು ನಂಬು."

"ಒಂದು ಕಾಲದಲ್ಲಿ ನಂಬುತ್ತಿದ್ದೆ."

"ನಿಜ."

"ಏನೂ ಅರಿಯದ ನನಗೆ ಮೋಸಮಾಡಿದಿರಿ."

"ನಿಜ."

"ನಾನು ಪೂಜಿಸುತ್ತಿದ್ದ ದೇವರನ್ನು ನಾನೇ ನಿರಾಕರಿಸುವಂತೆ ಮಾಡಿದಿರಿ."

"ನಿನ್ನ ದೇವರು ಯಾವುದು?"

"ನೀವು."

"ನಿನ್ನ ಭಕ್ತಿ ನಿಜವಾದರೆ ನಿನ್ನ ದೇವರೂ ನಿಜ."

"ನನ್ನ ಭಕ್ತಿ ಸುಳ್ಳೇ?"

"ಹಾಗೆನ್ನಲಾರೆ. ನಿನ್ನ ದೇವರು ಸುಳ್ಳೇ?"

"ಸುಳ್ಳಲ್ಲವೆಂದುಕೊಂಡಲ್ಲವೇ ನಾನು ಮೋಸಹೋದುದು."

"ನೀನು ಮೋಸಹೋಗಿಲ್ಲ."

"ಅದು ನಿಮ್ಮ ಅಭಿಪ್ರಾಯ."

"ಮಾತಿಗೆ ಮಾತು ಬೆರಸುವುದರಿಂದ ಏನು ಪ್ರಯೋಜನ? ಮನಸ್ಸಿಗೆ ಮನಸ್ಸು ಬೆರಸಬೇಕು."

"ನನ್ನ ಮನಸ್ಸು ಒಡೆದುಹೋಗಿದೆ."

"ಅದನ್ನು ಕೂಡಿಸಲು ನನಗೆ ಅವಕಾಶ ಕೊಡು. ರುಚಿಯಾದುದನ್ನು ಮರೆತು ಅರುಚಿಯಾದುದನ್ನು ಜ್ಞಾಪಿಸಿಕೊಳ್ಳುವುದರಿಂದ ಏನು ಸಾರ್ಥಕ?"

"ನನ್ನ ಮನಸ್ಸು ಕೂಡಲೆ ಸ್ಥಿಮಿತಕ್ಕೆ ಬರುವುದಿಲ್ಲ. ನನಗೆ ಕೆಲವು ದಿನ ಅವಕಾಶ ಕೊಡಿ."

"ಅಗತ್ಯವಾಗಿ ಆಗಬಹುದು. ಆದರೆ ನೀನು ನನಗೊಂದು ಮಾತುಕೊಡಬೇಕು."

"ಏನದು ಹೇಳಿ."

"ನನ್ನ ದುರ್ವರ್ತನೆ ಮರೆತು, ಸದ್ವಿಚಾರಗಳನ್ನು ಕುರಿತು ಚಿಂತಿಸುತ್ತೇನೆಂದು ವಾಗ್ದಾನಮಾಡಬೇಕು."

"ಆಗಲಿ. ಪ್ರಯತ್ನಿಸುತ್ತೇನೆ."

ಸುಬ್ರಹ್ಮಣ್ಯನ ಮನಸ್ಸು ತುಸು ಹಗುರವಾಯಿತು. ರವಿಯನ್ನೆತ್ತಿಕೊಂಡು, "ಅಮ್ಮ ಏನು ಮಾಡುತ್ತಿದ್ದಾಳೆ ನೋಡು ಹೋಗು" ಎಂದು ಹೆಂಡತಿಗೆ ಹೇಳಿ ಶಂಕರನನ್ನರಸುತ್ತಾ ದೇವಾಲಯದ ಬಳಿಗೆ ಬಂದ.

ಶಂಕರ 'ನರಸಿಂಹಾವತಾರ'ದ ಮೂರ್ತಿಯನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದ. ಅಣ್ಣ ಬಂದುದನ್ನು ನೋಡಿ

"ಈ ದೇವಸ್ಥಾನ ಇಷ್ಟು ಸುಂದರವಾಗಿದೆಯೆಂಬ ಕಲ್ಪನೆಯೇ ನನಗಿರಲಿಲ್ಲ. ಹಿತ್ತಲ ಗಿಡ ಮದ್ದಲ್ಲ ಎನ್ನುವುದು ನಿಜ."

"ನಾನೂ ದೇವಸ್ಥಾನ ನೋಡಿ ಬಹಳ ದಿವಸಗಳಾಗಿದ್ದುವು."

ಶಂಕರ ಸುಬ್ರಹ್ಮಣ್ಯನ ಕೈಯಿಂದ ರವಿಯನ್ನೆತ್ತಿಕೊಂಡು ಆಡಿಸುತ್ತ

"ಮಹಾಶಿಲ್ಪಿ ಕಗ್ಗಲ್ಲಿನಲ್ಲಿ ದೇವಮಂದಾರಗಳನ್ನರಳಿಸಿದ್ದಾನೆ."

"ನಾನೂ ಅದೇ ಕೆಲಸ ಮಾಡಬೇಕಾಗಿದೆ ಶಂಕರ."

"ಮಹಾಶಿಲ್ಪಿಯಾಗಬೇಕೆಂದಿರುವೆಯಾ ?"

"ಪ್ರತಿಯೊಬ್ಬ ಮನುಷ್ಯನೂ ಮಹಾಶಿಲ್ಪಿಯಾಗಲೇಬೇಕಲ್ಲವೇ—ಪರಿಸ್ಥಿತಿಯೂ ಕೆಲವರನ್ನು ಮಹಾಶಿಲ್ಪಿಗಳನ್ನಾಗಿ ಮಾಡುತ್ತದೆ."

"ಈಗ ನಿನ್ನ ಮಾತು ಅರ್ಥವಾಯಿತಣ್ಣ."

"ನಿನ್ನ ಅತ್ತಿಗೆಯ ಕೋಪವಿನ್ನೂ ಇಳಿದಿಲ್ಲ ಶಂಕರ."

"ಬಲ್ಲೆ—ನಾವೆಲ್ಲಾ ನಿನ್ನ ಕಡೆ ಎಂದು ಭಾವಿಸಿಕೊಂಡು ಅತ್ತಿಗೆ ನಮ್ಮೆಲ್ಲರ ಮೇಲೂ ಸಿಟ್ಟಾಗಿದ್ದಾಳೆ."

"ಲೋಕವೇ ತನಗೆ ಅಪಕಾರ ಮಾಡುತ್ತಿದೆ ಎಂಬ ಭಾವನೆ ಅವಳಿಗೆ ಬಂದಿದೆ."

"ಆ ಭಾವನೆ ಹೋಗಲಾಡಿಸಬೇಕು."

"ಪ್ರಯತ್ನಿಸುತ್ತಿದ್ದೇನೆ. ನೀವೂ ಪ್ರಯತ್ನಿಸಿ ನನಗೆ ಉಪಕಾರ ಮಾಡಬೇಕು."

"ನಾವು ನಿನಗೆ ಉಪಕಾರ ಮಾಡುವುದೇ ! ಏನಣ್ಣಾ ನೀನಾಡುವ ಮಾತು ?"

"ಹೌದು, ಶಂಕರ. ನಿಮ್ಮ ನೆರವನ್ನು ಕೇಳುವ ಅಧಿಕಾರವನ್ನೇ ನಾನು ಕಳೆದುಕೊಂಡಿದ್ದೇನೆ."

"ಎಂದಿಗೂ ಇಲ್ಲ. ಅತ್ತಿಗೆಯ ಮನಸ್ಸಿಗೆ ಶಾಂತಿ ತರುವುದು ನಮ್ಮ ಕರ್ತವ್ಯವೂ ಆಗಿದೆ. ಅತ್ತಿಗೆ ಈಗೇನನ್ನುತ್ತಾಳೆ?"

"ಸ್ವಲ್ಪ ಸ್ವಲ್ಪ ದಾರಿಗೆ ಬರುತ್ತಿದ್ದಾಳೆ. ನನ್ನ ಮನಸ್ಸು ಕೂಡಲೆ ಸ್ಥಿಮಿತಕ್ಕೆ ಬರುವುದಿಲ್ಲ, ಸ್ವಲ್ಪ ದಿನ ಕಾಲಾವಕಾಶ ಕೊಡಿ, ಎನ್ನುತ್ತಾಳೆ."

"ಅವಳು ಹೇಳುವುದೂ ನ್ಯಾಯವೇ."

"ಕಮಲಮ್ಮ, ನರ್ಮದಾ ಆರುತ್ತಿರುವ ಬೆಂಕಿಗೆ ಎಣ್ಣೆ ಹೊಯ್ದು ಕೆರಳಿಸುತ್ತಾರೆ. ಅವರ ಚಾಡಿನುಡಿಗಳಿಗೆ ಗೌರಿ ಈಗ ತುಂಬ ಬೆಲೆ ಕೊಡುತ್ತಿದ್ದಾಳೆ."

"ಅತ್ತಿಗೆ ಹೋದಂತೆಯೇ ನಾವೂ ಸದ್ಯಕ್ಕೆ ಹೋಗುವುದೊಳ್ಳೆಯದು. ಅಸ್ಥಿರತೆ ಮನಸ್ಸನ್ನು ದುರ್ಬಲ ಮಾಡುತ್ತದೆ. ದುರ್ಬಲ ಮನಸ್ಸಿಗೆ ಅಗ್ರಾಹ್ಯವಾದುದು ಗ್ರಾಹ್ಯವಾಗುತ್ತದೆ; ಗ್ರಾಹ್ಯವಾಗಬೇಕಾದುದು ಅಗ್ರಾಹ್ಯವಾಗುತ್ತದೆ."

"ನೀನೂ ಅವಳಿಗೆ ಆಗಾಗ್ಗೆ ವಿವೇಕ ಹೇಳುತ್ತಿರು ಶಂಕರ."

"ಪ್ರಾಯದಲ್ಲಿ ಅತ್ತಿಗೆಗಿಂತ ನಾನು ಚಿಕ್ಕವನಲ್ಲವೇ?"

"ಇರಬಹುದು—ಆದರೆ ವಿವೇಕದಲ್ಲಿ ದೊಡ್ಡವನು."

"ನಡಿಯಣ್ಣ. ಅಮ್ಮ ಏನು ಮಾಡುತ್ತಿದ್ದಾಳೋ ನೋಡೋಣ." ಎಂದು ಸುಬ್ರಹ್ಮಣ್ಯನನ್ನು ಕರೆದುಕೊಂಡು ಛತ್ರದ ಬಳಿಗೆ ಬಂದ.

ಪಾರ್ವತಮ್ಮನವರು ಉಪ್ಪಿಟ್ಟು, ಸಜ್ಜಿಗೆ ಮಾಡಿ ಮಕ್ಕಳನ್ನು ಕೂಗುವುದರಲ್ಲಿದ್ದರು.

"ನೂರು ವರ್ಷ ಆಯುಸ್ಸು ನಿಮಗೆ. ಇನ್ನೇನು ಕೂಗಬೇಕೆಂದಿದ್ದೆ" ಎಂದು ಮಕ್ಕಳನ್ನು ಕೂಡಿಸಿ ಅವರಿಗೆ ಉಪಾಹಾರ ಬಡಿಸಿ, ಬಿಸಿಬಿಸಿ ಕಾಫಿ ಕೊಟ್ಟರು.

"ಅಡಿಗೆ ಏನು ಮಾಡುತ್ತೀಯಮ್ಮ?"

"ತಿಂಡಿ ತಿನ್ನುವುದೇ ಮುಗಿದಿಲ್ಲ. ಆಗಲೇ ಊಟದ ಯೋಚನೆ ಯೇನೋ ನಿನಗೆ ಶಂಕರ!"

"ರಾಮಸಾಗರದ ಹವಾಗುಣ ಹಾಗಿದೆಯಮ್ಮ."

"ಹಬ್ಬದಡಿಗೆ ಮಾಡುತ್ತೇನೆ ಸುಮ್ಮನಿರು."

"ಅತ್ತಿಗೆ ಚಿತ್ರಾನ್ನ ಬಲು ಚೆನ್ನಾಗಿ ಮಾಡುತ್ತಾಳಮ್ಮ."

"ಹೌದಪ್ಪಾ–ನನ್ನದೆಲ್ಲಾ ಹಳೇಕಾಲದ ಅಡಿಗೆ. ಆದರೆ ಇವತ್ತು ಗೌರಿ ಕೈಯಲ್ಲಿ ನಾನೇನೂ ಮಾಡಿಸುವುದಿಲ್ಲ ಶಂಕರ. ಒಂದು ದಿನ ವಾದರೂ ಅವಳು ಬಿಡಿಬೀಸಾಗಿರಲಿ. ಗಾಣವೆತ್ತಿನ ಹಾಗೆ ದುಡಿಯೋದು ಇದ್ದೇ ಇದೆ."

ಅಲ್ಲಿಯೇ ಇದ್ದ ಗೌರಿ "ನಾನು ಅಡಿಗೆ ಮಾಡುತ್ತೇನೆ ಅತ್ತೇ" ಎಂದಳು.

ಶಂಕರ ನಸುನಗುತ್ತ "ಬೇಡ ಅತ್ತಿಗೆ. ಅಮ್ಮ ನಿನಗೆ ಇವತ್ತು ರಜಾ ಕೊಟ್ಟಿದ್ದಾಳೆ. ಅದನ್ನು ಉಪಯೋಗಿಸಿಕೊಂಡುಬಿಡು. ನಾಳೆ ಇಂಥ ಅವಕಾಶ ಸಿಕ್ಕದೆಹೋಗಬಹುದು." ಎಂದ.

ಪಾರ್ವತಮ್ಮನವರು ಹುಸಿಮುನಿಸು ತೋರುತ್ತ

"ಇವನ ಕಿತಾಪತಿ ನೋಡೇ ಗೌರಾ. ನೀನೇ ಹೇಳು—ನಾನು ಕೆಟ್ಟ ಅತ್ತೆಯೇ–ಸೊಸೆಯನ್ನು ಹುರಿದುಕೊಂಡು ಮುಕ್ಕುತ್ತೇನೆಯೇ?"

"ಆ ಮಾತು ಯಾವ ಬಾಯಲ್ಲಿ ಹೇಳಲಿ ಅತ್ತೆ. ಏಳೇಳು ಜನ್ಮ ದಲ್ಲಿ ಪುಣ್ಯಮಾಡಿ ನಿಮ್ಮಂಥ ಅತ್ತೆಯನ್ನು ಪಡೆದಿದ್ದೇನೆ."

"ಅತ್ತಿಗೆಯನ್ನು ನೀನೇನೂ ಮಾತಿನಲ್ಲಿ ಸೋಲಿಸುವುದಕ್ಕಾಗುವು ದಿಲ್ಲಮ್ಮಾ."

ಪಾರ್ವತಮ್ಮನವರು ಹಿಗ್ಗುತ್ತ "ನೀನು ಹೀಗೇ ಹರಟೆ ಹೊಡೆ ಯುತ್ತ ಕುಳಿತುಕೋ—ಸಂಜೆ ಐದು ಗಂಟೆಗೆ ಅಡಿಗೆ ಮಾಡಿ ಹಾಕು ತ್ತೇನೆ" ಎಂದು ಬೆದರಿಕೆ ಹಾಕಿದರು.

"ಬೇಡಮ್ಮ—ಹನ್ನೆರಡು ಗಂಟೆಗೆ ಸರಿಯಾಗಿ ಪೊಗದಸ್ತು ಊಟ ಹಾಕಿ ಬಿಡು." ಎಂದು ಹೊರಟುಹೋದ.

ಗೌರಿಯೂ ಪ್ರಸನ್ನಳಾಗಿದ್ದಳು. ಅತ್ತೆಯ ಜತೆಯಲ್ಲಿ ತಾನೂ ಕೆಲಸಕ್ಕೆ ನಿಂತಳು. ಪಾರ್ವತಮ್ಮನವರು ನಿಂಗವ್ವನನ್ನು ಕರೆದು ಅವಳ ಕೈಗೆ ಉಪಾಹಾರ ಹಾಕಿದರು. ನಿಂಗವ್ವ ಗೌರಿಯ ಪ್ರಸನ್ನವದನಕಂಡು

"ಗೌರವ್ವ ನಗನಗತ ಇದ್ರೆ ಚಂದ್ರಪ್ಪ ಕೂಡ ನಾಚ್ಕೊಂತಾನ್ರವ್ವಾ" ಎಂದಳು.

ಪಾರ್ವತಮ್ಮನವರ ಸಂತೋಷ ಉಕ್ಕಿ ಹರಿಯಿತು. ನಿಂಗವ್ವನ ಮೇಲೆ ಸುಳ್ಳುಕೋಪ ನಟಿಸುತ್ತಾ "ಸಾಕು ಹೋಗೇ ನೀನೊಬ್ಬಳು." ಎಂದರು.

ರವಿಯ ಯೋಗಕ್ಷೇಮ ನೋಡಿಕೊಳ್ಳುವ ಭಾರ ಸುಬ್ರಹ್ಮಣ್ಯನ ಮೇಲೆ ಬಿತ್ತು.

ಹೊಯ್ಸಳ ಶಿಲ್ಪದ ಕಲಾಪೂರ್ಣ ವಾತಾವರಣದಲ್ಲಿ ಶಂಕರ 'ಕಠೋಪನಿಷತ್' ಹಿಡಿದು ಕುಳಿತ.

ನಚಿಕೇತನ ನಿರ್ಭಯತೆ, ಸತ್ಯನಿಷ್ಠೆ, ಆತ್ಮವಿದ್ಯಾಭಿಲಾಷೆಗಳನ್ನು ಕಂಡು ಭಗವಾನ್ ಧರ್ಮಾವತಾರ ಅವನಿಗೆ ಮೂರು ವರಗಳನ್ನು ಅನುಗ್ರಹಿಸಿದ್ದ. ಭಗವಂತನ ದಿವ್ಯ ಕರುಣೆಯ ಕಂದನಾದ ನಚಿಕೇತ ತನಗೆ ಬೇಕಾದ ಮೂರು ವರಗಳನ್ನು ನಿವೇದಿಸುತ್ತಾನೆ.

'ನಾನು ಮರಳಿ ತಂದೆಯ ಬಳಿಗೆ ಹೋದಾಗ ಅವನು ನನ್ನ ಮೇಲಣ, ಸಿಟ್ಟು ಮರೆತು ನನ್ನನ್ನು ಪ್ರೀತಿಯಿಂದ ಕಾಣಬೇಕು.'

'ಸ್ವರ್ಗದಲ್ಲಿ ಭಯದ ಹೆಸರಿಲ್ಲ. ಹಸಿವು, ನೀರಡಿಕೆಗಳ ಕಾಟವಾಗಲಿ ಮೃತ್ಯುಭೀತಿಯಾಗಲಿ ಇಲ್ಲ. ಸ್ವರ್ಗಸಾಧನವಾದ ಅಗ್ನಿವಿದ್ಯೆಯನ್ನು ಅನುಗ್ರಹಿಸು.'

'ಮನುಷ್ಯನ ಮರಣಾನಂತರ ಆತ್ಮವಿದೆಯೆಂದು ಕೆಲವರೂ, ಆತ್ಮವಿಲ್ಲವೆಂದು ಕೆಲವರೂ ವಾದಿಸುತ್ತಾರೆ. ಈ ಬಗ್ಗೆ ನಿಶ್ಚಿತ ಜ್ಞಾನವನ್ನು ಅನುಗ್ರಹಿಸು.'

—ಪ್ರೀತಿ, ನಿರ್ಭಯತೆ, ಜ್ಞಾನ ಇವು ಮೂರೂ ಬೇಕೆಂದು ಮನುಷ್ಯ ಹಾತೊರೆಯುತ್ತಾನೆ. ನಚಿಕೇತನಂಥ ಧೀಮಂತ ಸಾಕ್ಷಾತ್ ಮೃತ್ಯುದೇವನ ಮನೆಗೇ ಹೋಗಿ ಈ ವರಗಳನ್ನು ಪಡೆದು ಬರಲು ಅಂಜಲಿಲ್ಲ.

ಶಂಕರನ ಮನಸ್ಸಿನಲ್ಲಿಯೂ ಅದೇ ಕಾತರ, ಅದೇ ಆತುರ. ಬುದ್ಧಿಗತವಾಗಿದ್ದ ಜ್ಞಾನವನ್ನೂ ಆತ್ಮಸ್ಥ ಮಾಡಿಕೊಂಡು, ಇಂದ್ರಿಯ ಗಳಿಗೂ ಅಂತಃಕರಣ ಚತುಷ್ಟಯಗಳಿಗೂ ಅತೀತವಾಗಿದ್ದುದನ್ನರಿಯು ವುದು ಹೇಗೆ, ಎನ್ನುವ ಪ್ರಬಲ ಪ್ರಶ್ನೆ ಶಂಕರನನ್ನು ಕಾಡುತ್ತಿತ್ತು.

ಅವನ ಚಿಂತನೆಯ ಯಾನ ಮುನ್ನಡೆದಿತ್ತು. ಅನಂತ ಆಕಾಶದಲ್ಲಿ ವಿಹರಿಸುವ ವಿಹಂಗಮಕ್ಕೆ ಕಾಲದ ಅರಿವಿದ್ದೀತೇ? ದೇವಾಲಯದ ವ್ಯಕ್ತ ಸೌಂದರ್ಯ ಕಂಡು, ಅವ್ಯಕ್ತ ಸೌಂದರ್ಯ ಅನುಭವಿಸಿದ್ದ ಶಂಕರನಿಗೆ ವ್ಯಕ್ತಾವ್ಯಕ್ತಗಳ ನಡುವಣ ತೆರೆಯೊದರೂ ಬಹು ತೆಳ್ಳನೆಯದೆಂಬ ಭಾವ ನೆಯೂ ಹುಟ್ಟಿತ್ತು. ರಸಾನುಭವ ಗುಹ್ಯಾಂತರ್ಗತವಾದ ಪೂರ್ಣ ಯೋಗದೆಡೆಗೆ ಅವನನ್ನು ಎಳೆದೊಯ್ದಿತ್ತು. ಮನಸ್ಸಿನಲ್ಲಿ ಅಪೂರ್ವ ಆನಂದ. ಈಶ್ವರಾಂಶವಾದ ರಸಸಮುದ್ರವನ್ನೇ ಅಗಸ್ತ್ಯನಂತೆ ಅವನು ಏಕಾಪೋಶನ ತೆಗೆದುಕೊಂಡಂತಾಗಿತ್ತು.

ಮಧ್ಯಾಹ್ನದ ಸೂರ್ಯ ನೆತ್ತಿ ಸುಡುತ್ತಿದ್ದರೂ ತದೇಕಧ್ಯಾನ ಚಿತ್ತ ನಾಗಿ ಕುಳಿತಿದ್ದ ತಮ್ಮನನ್ನು ಕಂಡು ಸುಬ್ರಹ್ಮಣ್ಯ "ಸ್ನಾನ ಮಾಡೇಳು ಶಂಕರ. ಅರ್ಚಕರು ಪೂಜೆ ಮಾಡಲು ಕಾಯುತ್ತಿದ್ದಾರೆ" ಎಂದು ಹೇಳಿದ.

'ನಾನು ಪೂಜೆಯಲ್ಲಿಯೇ ಇದ್ದೆ' ಎಂದು ಹೇಳಲು ಮುಂದಾದ ಶಂಕರ ಮೌನತಾಳಿ ಅಣ್ಣನನ್ನನುಸರಿಸಿ ಹೋದ.

ಪಾರ್ವತಮ್ಮನವರು, ಗೌರಿ, ನಿಂಗವ್ವ, ಸುಬ್ರಹ್ಮಣ್ಯ ಎಲ್ಲರೂ ದೇವಾಲಯದಲ್ಲಿ ಸೇರಿದ್ದರು. ಶಂಕರನೂ ಸ್ನಾನ ಮುಗಿಸಿ ಬಂದು ಅವರನ್ನು ಕೂಡಿಕೊಂಡ.

ಪೂಜೆಯಾಯಿತು—ಮಹಾ ಮಂಗಳಾರತಿಯಾಯಿತು. ಪಾರ್ವ ತಮ್ಮನವರು ಮೆಲ್ಲನೆ ಮಗನ ಬಳಿ ಬಂದು "ಬೇಗ ಮದುವೆ ಮಾಡಿ ಸೂಂತ ರಾಮದೇವರನ್ನು ಕೇಳಿಕೊಳ್ಳೋ ಶಂಕರ" ಎಂದರು.

ಶಂಕರ ಅತ್ತಿಗೆಯ ಕೈಯಲ್ಲಿದ್ದ ರವಿಯನ್ನೆತ್ತಿಕೊಂಡು ಅವನ ಎರಡು ಕೈಗಳನ್ನೂ ಜೋಡಿಸಿ "ರವೀಗೆ ಪೂರ್ಣಜ್ಞಾನ ಕೊಡು ಪ್ರಭೂ" ಎಂದು ಪ್ರಾರ್ಥಿಸಿಕೊಂಡ.

ಪೂಜೆ ಮುಗಿದ ಮೇಲೆ ಎಲ್ಲರಿಗೂ ರಸಭೋಜನವಾಯಿತು. ಹಸಿವು ಖಾದ್ಯ ಪದಾರ್ಥಗಳ ರುಚಿಯನ್ನು ಮತ್ತಷ್ಟು ಹೆಚ್ಚಿಸಿತ್ತು. ಪಾರ್ವತಮ್ಮನವರು ತಾವೂ ಊಟ ಮುಗಿಸಿ, ನಿಂಗವ್ವನಿಗೂ ಉಣಬಡಿಸಿದರು.

ನಾಲ್ಕು ಗಂಟೆಯ ವರೆಗೆ ಯಾರೂ ಅಲ್ಲಾಡುವ ಸ್ಥಿತಿಯಲ್ಲಿರಲಿಲ್ಲ. ದೇವಾಲಯದ ಮುಂದಿದ್ದ ಮರಗಳ ನೆರಳಿನಲ್ಲಿ ಎಲ್ಲರೂ ಸುಖವಾಗಿ ವಿಶ್ರಮಿಸಿಕೊಂಡರು. ನಿಂಗವ್ವ ಉಳಿದಿದ್ದ ಅಡಿಗೆಯ ಪದಾರ್ಥಗಳನ್ನು ದೇವಾಲಯದ ಆಳಿಗೆ ಕೊಟ್ಟು ಪಾತ್ರೆಗಳನ್ನು ತೊಳೆದಿಟ್ಟಳು.

ಪಾರ್ವತಮ್ಮನವರು ಎದ್ದು ಊರಿಗೆ ಹೊರಡುವ ಸಿದ್ಧತೆ ಮಾಡಿದರು.

ಗಾಡಿ ಸಾವಕಾಶವಾಗಿ ರಾತ್ರಿ ಏಳು ಗಂಟೆಗೆ ಊರು ತಲುಪಿತು.

ಎಲ್ಲರ ಹೃದಯವೂ ಹಗುರವಾಗಿತ್ತು. ಮನಸ್ಸಿನ ಕತ್ತಲೆ ಹರಿದು ಬೆಳಕು ಮೂಡಿದಂತಾಗಿತ್ತು.

ಗೌರಿಯೂ ಸುಪ್ರಸನ್ನಳಾಗಿದ್ದಳು.

ನಿಂಗವ್ವ ಸುತ್ತಲೂ ನೋಟ ಬೀರಿ ಪಾರ್ವತಮ್ಮನವರ ಬಳಿ ಬಂದು

"ಸಂಕ್ರಪ್ಪ ಮನೆಗೆ ಬಂದ್ರೆ, ಎಲ್ಲಾರ ಮುಕಾನೂ ನಗನಗ್ತಾ ಇರತೈತ್ರವ್ವ" ಎಂದಳು.

"ಹೌದು ನಿಂಗೀ–ಶುದ್ಧವಾದ ಹಣತೆಯಲ್ಲೇ ಅಲ್ಲವೇ ಜ್ಯೋತಿ ಪ್ರಕಾಶಮಾನವಾಗಿರುವುದು." ಎಂದರು.

## ೩೮

ಸುಬ್ರಹ್ಮಣ್ಯ ಗೌರಿಯುರಲ್ಲಾಗಿದ್ದುದು 'ತಾತ್ಕಾಲಿಕ ಶಸ್ತ್ರವಿಸರ್ಜನೆ'ಯೇ ವಿನಾ 'ನಿತ್ಯ ಶಾಂತಿ'ಯಲ್ಲ. ರಾಮಸಾಗರದಿಂದ ತಂದ ಶಾಂತಿ ಒಂದೆರಡು ದಿನ ಮಾತ್ರ ಉಳಿಯಿತು. ಮಾರನೆಯ ದಿನ, ಕಮಲಮ್ಮ ಬಂದು ಹೋದ ಮೇಲೆ, ಗೌರಿಯ ಮನಸ್ಸು ಪೂರ್ವಸ್ಥಿತಿಯನ್ನು ಮುಟ್ಟಿತು.

ಗೌರಿಯಲ್ಲಾದ ಸೂಕ್ಷ್ಮ ಪರಿವರ್ತನೆಯನ್ನು ಶಂಕರ ಗ್ರಹಿಸಿದ. ಈ ದೌರ್ಬಲ್ಯವನ್ನು ಹೀಗೇ ಬೆಳೆಯಗೊಟ್ಟರೆ ನಾಳೆ ಅನಿವಾರಣೀಯ ವಾಗುತ್ತದೆಂಬ ಭೀತಿ ಅವನನ್ನು ಆವರಿಸಿತು. ತಾನು ತಾವರೆಕೆರೆಯಲ್ಲಿ ಇರುವಷ್ಟು ದಿನವಾದರೂ ಅತ್ತಿಗೆಯನ್ನು ಪ್ರಸನ್ನಚಿತ್ತಳನ್ನಾಗಿ ಮಾಡಿ, ಹಳೆಯ ಕಸರನ್ನು ಅವಳು ಮರೆಯಲು ಸಹಾಯಮಾಡಬೇಕೆಂದು ನಿರ್ಧರಿಸಿದ.

ರವಿಯ ಆಟ, ನಗೆ, ಸೂಕ್ಷ್ಮಚಲನವಲನವನ್ನು ಚಿತ್ರವತ್ತಾಗಿ ಅತ್ತಿಗೆಗೆ ಬಣ್ಣಿಸುವನು. ಅವನು ರವಿಯನ್ನು ಅನುಕರಿಸುತ್ತಾ ಅಣಕಿಸುವುದನ್ನು ಕಂಡು ಗೌರಿ ಗಹಗಹಿಸಿ ನಗುತ್ತಾ "ಅವನಿಗಿಂತ ನೀನು ಸಣ್ಣ ಮಗು ಕಣೋ ಶಂಕರ" ಎನ್ನುತ್ತಿದ್ದಳು.

ನಗೆಮಾತಿನೊಂದಿಗೆ ಆಗಾಗ್ಗೆ ಶಂಕರ ಗಂಭೀರ ಭಾವನೆಗಳನ್ನೂ ವ್ಯಕ್ತಪಡಿಸುತ್ತಿದ್ದ. ಗೌರಿ ಅವುಗಳನ್ನೂ ಸಮಾಧಾನಚಿತ್ತಳಾಗಿ ಕೇಳುವಳು.

"ದೇವರು, ಧರ್ಮ, ಅಧ್ಯಾತ್ಮ ಎಲ್ಲೋ ಇವೆ ಎಂದು ಜನ ತಿಳಿದಿದ್ದಾರೆ ಅತ್ತಿಗೆ. ಅವು ಎಲ್ಲರ ಮನೆಯಲ್ಲಿಯೂ ಇದೆ. ನನ್ನಿಂದ ಇತರರಿಗೆ ತೊಂದರೆಯಾಗಬಾರದು—ಹಿಂಸೆಯಾಗಬಾರದು—ಮನಃಕ್ಲೇಶ ವಾಗಬಾರದು ಎಂದುಕೊಂಡು, ಆದಷ್ಟು ಎಲ್ಲರ ಮನಕ್ಕೂ ಮುದ ನೀಡುವುದೇ ಅಧ್ಯಾತ್ಮ. ಎಲ್ಲಿ ಋಜುಭಾವನೆ, ಋಜುಜೀವನವಿದೆಯೋ ಅಲ್ಲಿಯೇ ಧರ್ಮವಿರುವುದು—ಭಗವಂತನೂ ಅಲ್ಲಿಯೇ ವಾಸಿಸುತ್ತಾನೆ.

"ಅತ್ತಿ ಹೇಳುವುದು ನಿಜ ಶಂಕರಾ. ನೀನು ಸನ್ಯಾಸಿಯಾಗುವ ಸಿದ್ಧತೆ ಮಾಡಿಕೊಳ್ಳುತ್ತಿರುವ ಹಾಗಿದೆ."

"ಸನ್ಯಾಸಿಯಾಗುವುದು ಸುಲಭ ಅತ್ತಿಗೆ, ಸಾಮಾಜಿಕನಾಗಿರುವುದು ಕಷ್ಟ."

"ನೀನು ವಿಚಿತ್ರವಾಗಿ ಮಾತನಾಡುವೆ ಶಂಕರೂ."

"ಇಲ್ಲ ಅತ್ತಿಗೆ. ಸನ್ಯಾಸಿಯಾಗಿ ಲೋಕದಿಂದ ದೂರ ನಿಲ್ಲುವುದು ಕಷ್ಟವಿಲ್ಲ. ಒಮ್ಮೆ ಮನಸ್ಸುಮಾಡಿದರೆ ಸಾಕು. ಸಾಮಾಜಿಕನಾಗಿ ಲೋಕದಲ್ಲಿಯೇ ಉಳಿಯುವುದು ತುಂಬ ಕಷ್ಟ. ನಿತ್ಯ ಮನಸ್ಸು ಮಾಡಬೇಕು. ನಿತ್ಯ ಸಮಸ್ಯೆಗಳನ್ನೆದುರಿಸಬೇಕು—ರಾಗದ್ವೇಷಗಳೊಂದಿಗೆ, ಕಾಮ ಲೋಭಗಳೊಂದಿಗೆ ನಿತ್ಯ ಹೋರಾಡಬೇಕು. ಕುರುಕ್ಷೇತ್ರ ಯುದ್ಧ ಕೂಡ ಮುಗಿದುಹೋಯಿತು— ಇದು ಮುಗಿಯದ ಕುರುಕ್ಷೇತ್ರ."

"ಮೈಸೂರಿನಲ್ಲಿ ತುಂಬ ಓದುತ್ತೀಯಾ ಶಂಕರ?"

"ಇಲ್ಲ ಅತ್ತಿಗೆ. ತುಂಬ ಓದುವುದಕ್ಕೆ ಪುರಸತ್ತೇ ಆಗುವುದಿಲ್ಲ. ಒಂದೊಂದು ದಿನ ಪಾಠಗಳು ಓದುವುದಕ್ಕೂ ವೇಳೆ ಸಾಲದಾಗುತ್ತದೆ."

"ರಾತ್ರಿ ಬಹಳ ಹೊತ್ತು ಓದಬೇಡಪ್ಪ. ಎಣ್ಣೆ ನೀರೂ ಇಲ್ಲ—ಕಣ್ಣಿಗೆ ತೊಂದರೆಯಾದೀತು."

"ಊರಿಗೆ ಬಂದು ಆರೈಕೆ ಮಾಡಿಕೊಳ್ಳುತ್ತೇನಲ್ಲಾ ಅತ್ತಿಗೆ."

"ಏನು ಆರೈಕೆಯೋ!"

"ನನಗೆ ಯಾವುದಕ್ಕೂ ಕೊರತೆಯಾಗಿಲ್ಲ ಅತ್ತಿಗೆ. ತಂದೆಯಿಲ್ಲ ಎನ್ನುವ ದುಃಖವನ್ನು ಅಣ್ಣ ಮರೆಸುತ್ತಾನೆ. ಅಮ್ಮ, ನೀನು ಇಬ್ಬರೂ ಉಭಯ ತಾಯಿಯರಾಗಿ ನನ್ನ ಯೋಗಕ್ಷೇಮ ನೋಡಿಕೊಳ್ಳುತ್ತೀರಿ."

ಶಂಕರನ ಪರಿಶುದ್ಧ ಅಂತರಂಗದ ಕರೆಗೆ ಗೌರಿಯ ಮನಸ್ಸು ಓಗೊಡುತ್ತಿತ್ತು. ಅವನ ಮಾತುಗಳು ಬರಡು ಭೂಮಿಯಲ್ಲಿ ಭಾವನೆಯ ಬೆಳೆಯನ್ನು ಬಿತ್ತುತ್ತಿದ್ದುವು. ಕ್ಷಣ ಕಾಲ ಗೌರಿ ಸ್ವಯಂ ನಿರ್ಮಿತ ಕಾರಾಗೃಹದಿಂದ ಪಾರಾಗಿ ಚೇತೋಹಾರಿಯಾದ ಪ್ರಕೃತಿಯ ಸಿರಿಬನದಲ್ಲಿ ವಿಹರಿಸುತ್ತಿದ್ದಳು.

ಶಂಕರನ ಪ್ರಯಾಣದ ದಿನಗಳು ಸಮೀಪಿಸಿದುವು. ಏಕಾದಶಿಯ

ದಿನ ಪ್ರಯಾಣ ಮಾಡಲೇಬೇಕೆಂದು ಶಂಕರ ನಿಶ್ಚಯಿಸಿಕೊಂಡಿದ್ದ.

ಒಂದು ದಿನ ಗೌರಿ "ನಿನಗೇನು ಇಷ್ಟ ಶಂಕರ?" ಎಂದು ಕೇಳಿದಳು.

"ಎಲ್ಲವೂ ನನಗೆ ಇಷ್ಟವಾದುವೇ."

"ಹಾಗಲ್ಲಪ್ಪಾ-ತಿಂಡಿಪದಾರ್ಥಗಳಲ್ಲಿ ನಿನಗೆ ಯಾವುದರ ಮೇಲೆ ಹೆಚ್ಚು ಪ್ರೀತಿ?"

"ಪ್ರೀತಿಯಿಂದ ಕೊಟ್ಟ ಎಲ್ಲ ತಿಂಡಿ ಪದಾರ್ಥಗಳ ಮೇಲೂ ನನಗೆ ಇಷ್ಟ ಅತ್ತಿಗೆ."

"ಹೋಗಪ್ಪಾ—ಒಂದಕ್ಕೂ ನೇರವಾಗಿ ಉತ್ತರ ಕೊಡುವುದಿಲ್ಲ. ಬೇಸಿನ್ ಉಂಡೆ ಇಷ್ಟವೇ?"

"ಹೂ—ಇಷ್ಟ."

"ಈ ಸಾರೆ ನಾನು ಬೇಸಿನ್ ಉಂಡೆ ಮಾಡಿಕೊಡುತ್ತೇನೆ. ಮೈಸೂರಿಗೆ ತೆಗೆದುಕೊಂಡು ಹೋಗಿ ನಾಲ್ಕು ದಿನ ಇಟ್ಟುಕೊಂಡು ತಿನ್ನು."

"ಯಾರಿಗೂ ಕೊಡಬಾರದೇ ಅತ್ತಿಗೆ?"

"ಊರಿಗೆಲ್ಲಾ ಹಂಚಿದರೆ ನಿನಗೆ ಉಳಿಯುವುದೇನು?"

"ತೃಪ್ತಿ."

"ವೇದಾಂತ ಹೊಟ್ಟೆ ತುಂಬಿಸುತ್ತೇನೋ ಶಂಕರ?"

"ತುಂಬಿಸುತ್ತದೆ ಅತ್ತಿಗೆ. ಬೇಸಿನ್ ಉಂಡೆಗಿಂತಲೂ ರುಚಿಕರವಾದ ಒಂದು ಪದಾರ್ಥ ಮಾಡಿಕೊಡುವೆಯಾ ಅತ್ತಿಗೆ?"

"ಹೇಳು—ಅವಶ್ಯಕವಾಗಿ ಮಾಡಿಕೊಡುತ್ತೇನೆ."

"ನಾನು ಹೇಳಿದ ಮೇಲೆ ಒಲ್ಲೆಯೆನ್ನಕೂಡದು."

"ಇಲ್ಲ-ಹೇಳು."

"ಅಣ್ಣನ ಅಪರಾಧ ಕ್ಷಮಿಸುವೆಯಾ?"

ಗೌರಿಯ ಮುಖ ಗಂಭೀರವಾಯಿತು.

"ಪಶ್ಚಾತ್ತಾಪದಿಂದ ಅವನು ಪರಿಶುದ್ಧನಾಗಿದ್ದಾನೆ ಅತ್ತಿಗೆ. ಧರ್ಮರಾಯನೂ ಒಮ್ಮೆ ನರಕ ದರ್ಶನ ಮಾಡಬೇಕಾಯಿತಂತೆ. ಅಣ್ಣನೂ ನರಕ ದರ್ಶನ ಮಾಡಿ ಅದರ ದಳ್ಳುರಿಯ ಬೇಗೆ ಅನುಭವಿಸಿ

ಡ್ಡಾನೆ. ಚಿನ್ನವನ್ನು ಒಮ್ಮೆ ಬೆಂಕಿಗೆ ಹಾಕಿ ಕರಗಿಸಿ, ಒಡವೆಗಳನ್ನು ಮಾಡಿಸುತ್ತೇವೆ. ಮಾಡಿದ ಒಡವೆಯನ್ನು ಮತ್ತೆ ಬೆಂಕಿಗೆ ಹಾಕಿದರೆ ಅದರ ಆಕಾರ ಕೆಡುತ್ತದೆ."

"ನನ್ನ ಕೋಪ ನಿಷ್ಕಾರಣವಾದುದೇ ಶಂಕರ?"

"ಇಲ್ಲ ಅತ್ತಿಗೆ-ಅಣ್ಣನೂ ಆ ಮಾತು ಹೇಳುವುದಿಲ್ಲ. ಆದರೆ ನಿನ್ನ ಕೋಪ ಸ್ವಲ್ಪ ಪ್ರಮಾಣ ಮೀರಿದೆ. ತುಂಟ ಮಗುವನ್ನು ಬೆತ್ತದಲ್ಲಿ ಹೊಡೆದರೆ ತಡೆದುಕೊಳ್ಳುತ್ತದೆ-ದೊಣ್ಣೆ ತೆಗೆದುಕೊಂಡು ಹೇರಿದರೆ..............."

"ನಿನ್ನ ಮನಸ್ಸಿಗೆ ತುಂಬ ವ್ಯಥೆಯಾಗಿದೆಯಲ್ಲವೇ ಶಂಕರ?"

"ತಾಯಿತಂದೆಯಲ್ಲಿ ವಿರಸ ಮೂಡಿದರೆ ಮಕ್ಕಳಿಗೆ ಸಂತೋಷವಿರುತ್ತದೆಯೇ? ಪ್ರೀತಿ, ವಿಶ್ವಾಸದ ಅಭಿವ್ಯಕ್ತತೆ ಕೇವಲ ಕ್ರಿಯಾಲೋಕಕ್ಕೆ ಸೇರಿದುದಲ್ಲ ಅತ್ತಿಗೆ—ಭಾವನಾಲೋಕಕ್ಕೂ ಸೇರಿದ್ದು. ನನಗೆ ನೀನು ಒಳ್ಳೆಯದು ಮಾಡಿದರೆ ಸಾಲದು. ನನಗೆ ಒಳ್ಳೆಯದಾಗಬೇಕೆಂದು ಚಿಂತನೆಯನ್ನೂ ಮಾಡಬೇಕು. ಪ್ರಭಾವ ಶಾಲಿಯಾದ ವಿದ್ಯುತ್ಕಿರಣಗಳನ್ನು ಹೊರಚೆಲ್ಲುವ ಶಕ್ತಿಯನ್ನು ಭಾವನೆ ಪಡೆದಿದೆ."

"ಅತ್ತೆಮ್ಮನವರ ಮನಸ್ಸಿಗೆ—ನಿನ್ನ ಮನಸ್ಸಿಗೆ ವ್ಯಥೆಯಾಗದಂತೆ ಇರಬೇಕೆಂದು ಪ್ರಯತ್ನಿಸುತ್ತಿದ್ದೇನೆ ಶಂಕರ. ನನ್ನ ಮಾತು ನಂಬು. ಕಾಹಿಲೆಯಲ್ಲಿ ದೀರ್ಘಕಾಲ ನರಳಿ ಇದೇ ಎದ್ದ ಹಾಗಾಗಿದೆ ನನ್ನ ಸ್ಥಿತಿ. ಅದು ಮೊದಲಿನಂತಾಗಬೇಕಾದರೆ ಕೆಲವು ದಿನಗಳು ಹಿಡಿಯಬಹುದು."

"ನಾನು ಆತುರಪಡುತ್ತಿಲ್ಲ. ಅಣ್ಣನಿಗೂ ನಿನಗೂ ಮಧ್ಯೆ ಅಡ್ಡ ಗೋಡೆ ಏಳಬಾರದೆಂದು ನನ್ನ ಪ್ರಾರ್ಥನೆ. ನಿರಾಶೆಗೊಂಡ ಮನಸ್ಸು ತೀರ ಹದಗೆಟ್ಟುಹೋಗುವ ಸಂಭವವೂ ಇದೆ."

ಗೌರಿ ಶಂಕರನ ಸೂಚನೆಗೆ ಒಪ್ಪಿಗೆಯನ್ನಿತ್ತಳು. ತಾನು ಈ ಬಾರಿ ಊರಿಗೆ ಬಂದುದು ಸಾರ್ಥಕವಾಯಿತೆಂದುಕೊಂಡ.

ಏಕಾದಶಿಯ ದಿನ ಶಂಕರ ಪ್ರಯಾಣಕ್ಕೆ ಸಿದ್ಧನಾದ. ತಾಯಿ ಒಂದು ಬುಟ್ಟಿ ತುಂಬ ತಿಂಡಿಪದಾರ್ಥ ತುಂಬಿ ಶಂಕರನ ಕೈಗಿತ್ತರು. ಗೌರಿ ಒಂದು ಡಬ್ಬದ ತುಂಬ ಬೇಸಿನ್ ಉಂಡೆ ತುಂಬಿ ಕೊಟ್ಟಳು.

ಸುಬ್ರಹ್ಮಣ್ಯನೇ ಬಸ್ ಸ್ಟ್ಯಾಂಡಿನ ವರೆಗೆ ಬಂದು ತಮ್ಮನನ್ನು ಬೀಳ್ಕೊಟ್ಟ.

ಶಂಕರನ ಪ್ರಾರ್ಥನೆ ನಿರರ್ಥಕವಾಗಲಿಲ್ಲ. ಗಂಡನ ಮೇಲಿದ್ದ ಆಕ್ರೋಶವನ್ನಡಗಿಸಲು ಗೌರಿ ತ್ರಿಕರಣಪೂರ್ವಕವಾಗಿ ಪ್ರಯತ್ನಿಸ ಲಾರಂಭಿಸಿದಳು. ಒಮ್ಮೊಮ್ಮೆ ಹಳೆಯ ನೆನಪುಗಳು ಚಿತ್ತಫಲಕದ ಮೇಲೆ ಸುಳಿದು ಅವಳನ್ನು ಖಿನ್ನಳನ್ನಾಗಿ ಮಾಡುತ್ತಿದ್ದುವು.

ಸುಬ್ರಹ್ಮಣ್ಯನೂ ಸಹನೆ ಬೆಳಸಿಕೊಂಡಿದ್ದ. ಹೆಂಡತಿ ಖಿನ್ನಳಾಗಿದ್ದು ದನ್ನು ಕಂಡರೆ ನಲ್ಮಾತುಗಳಿಂದ ಅವಳನ್ನು ಸಮಾಧಾನ ಪಡಿಸಲೆತ್ನಿ ಸುತ್ತಿದ್ದ. ಅವಳ ಮನೋಗತವನ್ನರ್ಥಮಾಡಿಕೊಂಡು ಅದನ್ನು ಅನು ಸರಿಸಲು ಪ್ರಯತ್ನಿಸುತ್ತಿದ್ದ.

ಇಬ್ಬರೂ ತೆರೆ ಸರಿಸಲು ಪ್ರಯತ್ತಿಸುತ್ತಿದ್ದರು. ಪಾರ್ವತಮ್ಮ ನವರು, ನಿಂಗವ್ವ ಅವರ ಬೆಂಬಲಕ್ಕೆ ನಿಲ್ಲುತ್ತಿದ್ದರು.

ಕಮಲಮ್ಮ ಮಧ್ಯೆ ಮಧ್ಯೆ ಬಿರುಗಾಳಿ ಎಬ್ಬಿಸುತ್ತಿದ್ದಳು.

'ಇನ್ನು ಈ ಮನೆಯ ಹೊಸಿಲೊಳಗೆ ಕಾಲಿಡಬೇಡ' ಎಂದು ಕಮಲಮ್ಮನಿಗೆ ಹೇಳಿಬಿಡಲು ಪಾರ್ವತಮ್ಮನವರು ಯೋಚಿಸುತ್ತಿದ್ದರು. ಆದರೆ ಅವರ ಸಂಸ್ಕಾರ ಅಡ್ಡಿ ಬರುತ್ತಿತ್ತು. 'ಮನೆಗೆ ಬಂದವರನ್ನು ಅಪಮಾನಗೊಳಿಸುವುದು ಹೇಗೆ?'

'ಅಪಮಾನ ಮಾಡದಿದ್ದರೆ–ಖಂಡಿತವಾಗಿ ಹೇಳದಿದ್ದರೆ, ಕಮಲಮ್ಮ ತನ್ನ ಮನೆಯನ್ನೇ ಮುರಿಯುತ್ತಾಳೆ.'

'ಮುರಿಯುವುದಕ್ಕೆ ಕಟ್ಟುವುದಕ್ಕೆ ಅವಳು ಯಾರು?—ಭಗ ವಂತನ ದಯೆ ಬಂದರೆ ಗುಡಿಸಲು ಅರಮನೆಯಾಗುತ್ತದೆ–ಅವನ ದಯೆ ತಪ್ಪಿದರೆ ಅರಮನೆ ಗುಡಿಸಲಾಗುತ್ತದೆ.'

ಕಮಲಮ್ಮನ ಪಿಸುಣನುಡಿಗಳಿಗೆ ಕಿವಿಗೊಡದಿರಲು ಗೌರಿಯೂ ಪ್ರಯತ್ನಿಸುತ್ತಿದ್ದಳು. ಚಾಣಾಕ್ಷಳಾದ ಕಮಲಮ್ಮ ದಿನದಿನಕ್ಕೆ ತನ್ನ ತಂತ್ರ ಬದಲಾಯಿಸಿ ಗೌರಿಯ ಮನಸ್ಸಿನ ಮೇಲೆ ಪ್ರಭುತ್ವಮಾಡಲು ಹವಣಿಸುತ್ತಿದ್ದಳು.

# ೩೯

ಶಂಕರನ ನಿತ್ಯಜೀವನ ಯಥಾಕ್ರಮದಂತೆ ಸಾಗಿತ್ತು. ಪರೀಕ್ಷೆ ಹತ್ತಿರವಾಗುತ್ತಿದ್ದುದರಿಂದ ಪ್ರಾತಃಕಾಲದ ಗಾಳಿ ಸಂಚಾರವನ್ನು ಅವನೂ ಶ್ರೀಧರ ನಿಲ್ಲಿಸಬೇಕಾಯಿತು. ಆದರೆ ವಾರಕ್ಕೊಮ್ಮೆ ಶಾಸ್ತ್ರಿಗಳ ಮನೆಗೆ ಹೋಗಿ ಬರುವುದು ಮಾತ್ರ ತಪ್ಪಲಿಲ್ಲ.

ಕ್ರಿಸ್‌ಮಸ್ ರಜದಲ್ಲಿ ಖಂಡಿತವಾಗಿ ತಾವರೆಕೆರೆಗೆ ಬರುವುದಕ್ಕೆ ಶ್ರೀಧರ ಒಪ್ಪಿಕೊಂಡಿದ್ದ. ರಾಮಸಾಗರದ ದೇವಾಲಯದ ವರ್ಣನೆ ಶಂಕರನ ಬಾಯಲ್ಲಿ ಕೇಳಿದ ಮೇಲಂತೂ ಶ್ರೀಧರ ಆ ಭವ್ಯ ದೇವಾಲಯ ನೋಡಲು ತವಕ ಪಡುತ್ತಿದ್ದ. ಶಾಸ್ತ್ರಿಗಳೂ ಅವರ ಜತೆ ಹೊರಡಲು ಒಪ್ಪಿಕೊಂಡಿದ್ದರು.

ಕ್ರಿಸ್‌ಮಸ್ ರಜ ಬಂದೀತೇ ಎಂದು ಶಂಕರ ಕಾಯುತ್ತಿದ್ದ. ಎಷ್ಟು ಬೇಗ ಶ್ರೀಧರನನ್ನೂ ಶಾಸ್ತ್ರಿಗಳನ್ನೂ ಕರೆದುಕೊಂಡು ಹೋಗಿ ರಾಮದೇವಾಲಯ ತೋರಿಸುವೆನೋ ಎಂದವನು ಆತುರಪಡುತ್ತಿದ್ದ. ಶಂಕರ, ಶ್ರೀಧರ, ಶಾಸ್ತ್ರಿಗಳು ಬರುವ ವಿಷಯ ಕೇಳಿ ಸುಬ್ರಹ್ಮಣ್ಯ ಸಂತೋಷ ವ್ಯಕ್ತ ಮಾಡಿ ಕಾಗದ ಬರೆಯುತ್ತಾ,

'ನಿನ್ನ ಅತ್ತಿಗೆ ತುಂಬ ಸುಧಾರಿಸಿದ್ದಾಳೆ. ಅವಳ ಹಟಮಾರಿತನ, ಕೋಪ ಬಹುಮಟ್ಟಿಗೆ ಕಡಮೆಯಾಗಿದೆ' ಎಂದು ತಿಳಿಸಿದ್ದ.

ಶಂಕರ ಊರಿಗೆ ಹೊರಡುವ ಸಿದ್ಧತೆ ಮಾಡಿಕೊಳ್ಳುತ್ತಿರುವಾಗಲೇ ಶಾಸ್ತ್ರಿಗಳು, "ನಾನು ಬರಲು ಸಾಧ್ಯವಿಲ್ಲ ಶಂಕರ್. ವಿಶ್ವವಿದ್ಯಾನಿಲಯದ ಪ್ರತಿನಿಧಿಯಾಗಿ, ಕಲ್ಕತ್ತೆಯಲ್ಲಿ ನಡೆಯುವ ಭಾರತ ಐತಿಹಾಸಿಕ ಸಮ್ಮೇಳನಕ್ಕೆ ಹೋಗಬೇಕಾಗಿದೆ. ಅಲ್ಲಿ ನಾನೊಂದು ಪ್ರಬಂಧ ಓದಬೇಕಾಗಿದೆ" ಎಂದುಬಿಟ್ಟರು. ಶಂಕರನ ಉತ್ಸಾಹ ಅರ್ಧ ಇಳಿದು ಹೋಯಿತು. ಶ್ರೀಧರನಾದರೂ ಬರುವನಲ್ಲಾ ಎಂದವನು ತೃಪ್ತಿ ಪಟ್ಟುಕೊಳ್ಳುವುದರಲ್ಲಿ ಶ್ರೀಧರ ತನ್ನ ತಂದೆಯ ಕಾಗದ ತೋರಿಸಿದ. ಶ್ರೀಧರನ ತಾಯಿ ಕಾಹಿಲೆ ಮಲಗಿದ್ದರು. ಶ್ರೀಧರ ಕೃಷ್ಣರಾಜನಗರಕ್ಕೆ ಹೋಗಲೇ ಬೇಕಾಗಿತ್ತು.

ಶಂಕರ ಏಕಾಂಗಿಯಾಗಿ ಊರಿಗೆ ಹೊರಟ. ತನ್ನ ಮನೋರಥ ಇಂತು ಭಗ್ನವಾದುದಕ್ಕೆ ಅವನಿಗೆ ಅಪರಿಮಿತ ದುಃಖವಾಗಿತ್ತು. ತನ್ನಷ್ಟಕ್ಕೆ ತಾನೇ 'ಸುಖೇ ದುಃಖೇ ಸಮೇಕೃತ್ವಾ' ಎಂದುಕೊಳ್ಳುವನು.

ಮನೆಯ ವಾತಾವರಣ ಆಶಾಜನಕವಾಗಿತ್ತು. ತಾಯಿ, ನಿಂಗವ್ವ ಅತ್ತಿಗೆ ಎಲ್ಲರ ಮುಖದ ಮೇಲೂ ನಗೆ ಲಾಸ್ಯವಾಡುತ್ತಿತ್ತು. ರವಿ ಮೂರೇ ತಿಂಗಳಲ್ಲಿ ಮೈ ತುಂಬಿಕೊಂಡು, ಕಣ್ಮನಗಳನ್ನು ತುಂಬುತ್ತಿದ್ದ. ಶಂಕರ ತಾನು ಮೈಸೂರಿನಿಂದ ತಂದಿದ್ದ ಆಟದ ಸಾಮಾನುಗಳನ್ನು ರವಿಯ ಮುಂದೆ ಸುರಿದು ತಾನೂ ಅವನ ಜತೆಯಲ್ಲಿ ಆಟವಾಡುತ್ತ ಕುಳಿತುಕೊಳ್ಳುವನು. ಪಾರ್ವತಮ್ಮನವರು ಮಗನ ಬಾಲಕ್ರೀಡೆ ನೋಡಿ "ಎಷ್ಟು ಆಟದ ಸಾಮಾನು ತಂದಿರುವೆಯೋ ಶಂಕರ" ಎಂದು ಕೇಳಿದರೆ ಗೌರಿ ನಸುನಗುತ್ತ.

"ಅವುಗಳನ್ನು ರವಿಗೋಸ್ಕರ ಅವನು ತಂದಿಲ್ಲ ಅತ್ತೇ. ತನಗೋಸ್ಕರವೇ ತಂದುಕೊಂಡಿದ್ದಾನೆ." ಎನ್ನುವಳು.

"ಅಲ್ಲಾಮ್ಮ. ತನಗೇನೂ ತಂದುಕೊಡಲಿಲ್ಲವೆಂದು ಅತ್ತಿಗೆಗೆ ಹೊಟ್ಟೆಯ ಕಿಚ್ಚು" ಎಂದು ಶಂಕರನೂ ಪ್ರತಿವಾದ ಹೂಡುವನು. ಅತ್ತಿಗೆ, ಮೈದುನರಿಗೆ ಪುಟ್ಟ ಕಾಳಗವೇ ಸಂಭವಿಸುತ್ತಿತ್ತು. ಒಮ್ಮೊಮ್ಮೆ ವಾದದ ಭರದಲ್ಲಿ ಗೌರಿ ಶಂಕರನ ಕೂದಲು ಕೆದರಿಬಿಡುವಳು. ಶಂಕರ ಅತ್ತಿಗೆಯ ಜಡೆ ಹಿಡಿದೆಳೆದು ಗೋಳಾಡಿಸುವನು.

ಅತ್ತಿಗೆ ಮೈದುನರ ಜಗಳ ನೋಡಿ ಸುಬ್ರಹ್ಮಣ್ಯನೂ ನಕ್ಕು ಸುಮ್ಮನಾಗುವನು. ಒಂದೊಂದು ದಿನ ಇಬ್ಬರೂ ವ್ಯಾಜ್ಯ ಕಾದು ಸುಬ್ರಹ್ಮಣ್ಯನಲ್ಲಿಗೇ ಹೋಗಿ ನಿರ್ಣಯಕ್ಕೆ ಬರುತ್ತಿದ್ದರು. ಸುಬ್ರಹ್ಮಣ್ಯ ಒಬ್ಬರ ಪರವಾಗಿ ನಿರ್ಣಯ ಹೇಳಿದರೆ ಇನ್ನೊಬ್ಬರು ಅವನನ್ನು ಆಕ್ಷೇಪಿಸುವರು.

ಒಂದು ದಿನ ಸುಬ್ರಹ್ಮಣ್ಯ ಮನೆಯಲ್ಲಿರಲಿಲ್ಲ. ತೊಟ್ಟಿಯಲ್ಲಿ ಗೌರಿ, ಶಂಕರರ ಚೆಲ್ಲಾಟ ನಡೆಯುತ್ತಿತ್ತು. ರವಿಯ ಆಟದ ಸಾಮಾನೊಂದನ್ನೆತ್ತಿಕೊಂಡು ಗೌರಿ ಶಂಕರನ ಮೇಲೆ ಎಸೆದಳು; ಶಂಕರ ಅದನ್ನೇ ಕೈಗೆತ್ತಿಕೊಂಡು ಗೌರಿಯ ಮೇಲೆ ಎಸೆದ.

ಸಕ್ಕರೆ ಸಾಲ ಕೇಳಲು ಬಂದಿದ್ದ ಕಮಲಮ್ಮ ಅವರಿಬ್ಬರ ಆಟ ನೋಡಿಕೊಂಡು ಒಳಗೂ ಕಾಲಿಡದೆ ಹೋಗಿಬಿಟ್ಟಳು.

ಮೂರನೆಯ ದಿನ ಸಂಜೆ ಗೌರಿಯನ್ನು ಹುಡುಕಿಕೊಂಡು ಬಂದ ಕಮಲಮ್ಮ ಸಾವಕಾಶವಾಗಿ ಕುಳಿತಳು. ಗೌರಿ ಬಾಚಣಿಗೆ ಪೆಟ್ಟಿಗೆ ತಂದು ಕಮಲಮ್ಮನ ಮುಂದಿಟ್ಟಳು. ಕಮಲಮ್ಮ ಗೌರಿಯ ಜಡೆ ಬಿಚ್ಚುತ್ತಾ "ಶಂಕರ ಎಲ್ಲಿ?" ಎಂದು ಕೇಳಿದಳು.

"ಅಣ್ಣ ತಮ್ಮ ಇಬ್ಬರೂ ಎಲ್ಲೋ ಹೋದರಮ್ಮ" ಎಂದು ಗೌರಿ ಉತ್ತರಿಸಿದಳು.

"ಶಂಕರ ಬಂದರೆ ಈ ಮನೆ ಎಷ್ಟೋ ಗೆಲುವಾಗಿರತ್ತೆ ಗೌರಿ."

"ಹೌದು ಕಮಲಕ್ಕ–ಶಂಕರನದು ಬಲು ಹುಡುಗಾಟಿಕೆ."

"ನಿನ್ನ ಗಂಡನೂ ಈಗ ಸಂಭಾವಿತನಾದ ಹಾಗೆ ಕಾಣತ್ತೆ."

"ಅವರು ಒಳ್ಳೆಯವರು ಕಮಲಕ್ಕ—ನಾನು ತಪ್ಪು ತಿಳಿದು ಕೊಂಡಿದ್ದೆ."

"ನಾನೇ ಹೇಳುತ್ತಾ ಇರಲಿಲ್ಲವೇ ಗೌರಿ—ಸುಬ್ರಹ್ಮಣ್ಯ ಎಲ್ಲಾ ಸರಿ. ಆದರೆ...."

"ಆದರೆ....?"

"ಚಂದೊಳ್ಳೆ ಮುಖ ನೋಡಿ ಮನಸ್ಸು ಸೋಲುವ ಸ್ವಭಾವ."

"ಆ ಕಾಲ ಆಗಿಹೋಯಿತು ಕಮಲಕ್ಕ. ಈಗವರ ಮೇಲೆ ಚಕಾರ ಶಬ್ದ ಎತ್ತುವ ಹಾಗಿಲ್ಲ."

"ಶಂಕರ ಇನ್ನೂ ಎಷ್ಟು ದಿವಸ ಇರುತ್ತಾನೆ?"

"ರಜ ಮುಗಿಯುವ ವರೆಗೂ ಇರುತ್ತಾನೆ."

"ಈ ಸಲ ಪರೀಕ್ಷೆಗೆ ಕಟ್ಟುತ್ತಾನಲ್ಲವೇ?"

"ಹೌದು."

"ಮೈಸೂರಿಗೆ ಅವನು ಬೇಗ ಹೋಗಿ ಓದಿಕೊಳ್ಳಬೇಕಲ್ಲವೇ?"

"ಶಂಕರನ ವಿಷಯ ನೀವು ಕಾಣಿರಿ ಕಮಲಕ್ಕ. ಮುಂದಿನ ಕ್ಲಾಸಿನ ಪಾಠಗಳೂ ಅವನಿಗೆ ಈಗಾಗಲೇ ಬರುತ್ತವೆ. ಗೀತೆ, ಉಪ ನಿಷತ್ತು ಎಲ್ಲಾ ಉರುಹೊಡೆದುಬಿಟ್ಟಿದ್ದಾನೆ."

"ನಿನ್ನ ಕಂಡರೆ ಶಂಕರನಿಗೆ ತುಂಬ ಪ್ರೀತಿ ಗೌರಿ."

"ಹೌದು ಕಮಲಕ್ಕ. ಅವನ ಬುದ್ಧಿ ಮಾತು ಕೇಳಿ ನನಗೆಷ್ಟೋ

ತಿಳಿವಳಿಕೆ ಬಂತು. ನನಗೂ ಅವರಿಗೂ ಇದ್ದ ವೈಮನಸ್ಯ ಹೋಗಲಾಡಿಸುವುದಕ್ಕೆ ತುಂಬ ಕಷ್ಟಪಟ್ಟೆ."

"ಆ ಮಂಗಳೆ ವಿಷಯ ಈಚೆಗೇನಾದರೂ ಗೊತ್ತಾಯಿತೇನೇ ಗೌರಾ?"

"ನನಗೆ ಹೇಗೆ ಗೊತ್ತಾಗಬೇಕು?"

"ಸುಬ್ರಹ್ಮಣ್ಯ ಏನೂ ಹೇಳಲಿಲ್ಲವೇ?"

"ಅವಳ ಹೆಸರೇ ಎತ್ತುವುದಿಲ್ಲ.—ನಿಮ್ಮ ಕಿವಿಗೆ ಏನಾದರೂ ಬಿದ್ದಿದೆಯೇ?"

"ಮೊನ್ನೆ ಯಾವುದೋ ಪೇಪರಿನಲ್ಲಿ ಅವಳ ಫೋಟೋ ಬಂದಿತ್ತಂತಮ್ಮ. ಮದರಾಸಿನಲ್ಲಿ ಸಿನಿಮಾ ನಟಿಯಾಗಿದ್ದಾಳಂತೆ. ಈಗ ಅವಳ ಹೆಸರು ಮಂಗಳೆ ಅಲ್ಲ—ಜ್ಯೋತ್ಸ್ನಾದೇವಿ."

"ಇಷ್ಟೆಲ್ಲ ನಿಮಗೆ ಯಾರು ಹೇಳಿದರ್ರೀ?"

"ನಮ್ಮ ಮನೆಯವರು ಪೇಪರ್ ತಂದು ತೋರಿಸಿ 'ಇವಳು ಯಾರು ಹೇಳು' ಎಂದರು. ನಾನು 'ಮಂಗಳೆಯಲ್ಲವೇ?' ಎಂದೆ. 'ಹೌದು. ಈಗವಳು ಜ್ಯೋತ್ಸ್ನಾದೇವಿ ಆಗಿದ್ದಾಳೆ ನೋಡು' ಎಂದರು."

ಗೌರಿಯ ಹೊಟ್ಟೆಯಲ್ಲಿ ತಳಮಳವಾಯಿತು. ತನ್ನ ಗಂಡನಿಗೂ ಈ ಸುದ್ದಿ ಗೊತ್ತಾಗಿರಬಹುದೇ? ಮಂಗಳೆಯನ್ನು ಕಾಣುವ ಆಶೆ ಇನ್ನೂ ಅವನ ಮನಸ್ಸಿನಲ್ಲಿರಬಹುದೇ? ಎಂಬ ಚಿಂತೆ ಅವಳನ್ನು ಬಾಧಿಸತೊಡಗಿತು.

"ಕಮಲಕ್ಕ, ಈ ವಿಷಯ ಅವರ ಕಿವಿಯ ಮೇಲೆ ಹಾಕಬೇಡಿ ಎಂದು ನಿಮ್ಮ ಯಜಮಾನರಿಗೆ ತಿಳಿಸ್ರೀ."

"ಹತ್ತು ಕಡೆ ಓಡಾಡುವ ಗಂಡಸರಿಗೆ ತಿಳಿಯದೇ ಇರುತ್ಯೇನಮ್ಮ. ಪೇಪರಿನವರು ಒಂದೂ ಎರಡೂ ಹಾಳೆ ಅಚ್ಚುಮಾಡುತ್ತಾರೆಯೇ?"

ಎಂದು ಸಂಶಯದ ಬೀಜವನ್ನು ಕಮಲಮ್ಮ ಗೌರಿಯ ಹೃದಯದಲ್ಲಿ ನಾಟಿಯೇ ಬಿಟ್ಟಳು. ನಿಲುಗಡೆಗೆ ಬರುತ್ತಿದ್ದ ಗೌರಿಯ ಮನಸ್ಸು ಅಲ್ಲಕಲ್ಲೋಲವಾಯಿತು. ಆ ರಾತ್ರಿ ಗೌರಿ ಸುಬ್ರಹ್ಮಣ್ಯನಿಗೆ ಮುಖ ಕೊಟ್ಟು ಮಾತನಾಡಲಿಲ್ಲ.

ಗೌರಿಯಲ್ಲಾದ ಪರಿವರ್ತನೆಯನ್ನು ಸುಬ್ರಹ್ಮಣ್ಯ ಕೂಡಲೆ ಗ್ರಹಿ

ಸಲಾಗಲಿಲ್ಲ. ಮಾರನೆಯ ದಿನವೂ ಮಂಕಾಗಿದ್ದ ಗೌರಿಯನ್ನು ನೋಡಿ

"ಏಕೆ ಹೀಗಿದ್ದೀಯಾ?" ಎಂದು ಕೇಳಿದ.

"ಮೈಯಲ್ಲಿ ಸರಿಯಿಲ್ಲ. ತಲೆ ನೋಯುತ್ತಿದೆ."

"ಡಾಕ್ಟರನ್ನು ಕರೆದುಕೊಂಡು ಬರಲೇ?"

"ಏನೂ ಬೇಡ—ತಲೆನೋವು ಮೂಗುನೋವಿಗೆಲ್ಲಾ ಡಾಕ್ಟರೇಕೆ? ಹೋಗುತ್ತದೆ."

ಸುಬ್ರಹ್ಮಣ್ಯ ಕೇಳಿದಾಗಲೆಲ್ಲಾ ತಲೆನೋವು, ಹೊಟ್ಟೆನೋವಿನ ಕಾರಣವನ್ನು ಗೌರಿ ಹೇಳುತ್ತಿದ್ದಳೇ ವಿನಾ ತನ್ನ ಮನಸ್ಸಿನ ದುಗುಡ ವನ್ನು ತಿಳಿಸುತ್ತಿರಲಿಲ್ಲ. ಸುಬ್ರಹ್ಮಣ್ಯ ಅವಳ ವಿವರಣೆಯನ್ನು ಅಕ್ಷ ರಶಃ ನಂಬಿದ. ಔಷಧ ತೆಗೆದುಕೊಳ್ಳೆಂದು ಒತ್ತಾಯ ಮಾಡಿದರೆ ಗೌರಿ ಬೇಸರ ಪಟ್ಟುಕೊಂಡಾಳೆಂದು ತಟಸ್ಥನಾದ.

ಸುಬ್ರಹ್ಮಣ್ಯನ ತಾಟಸ್ಥ್ಯಕ್ಕೆ ಗೌರಿ ವಿಪರೀತಾರ್ಥ ಕಲ್ಪನೆ ಮಾಡಿ ದಳು. 'ಅವರ ಮನಸ್ಸು ಮತ್ತೆ ಮಂಗಳೆಯ ಧ್ಯಾನದಲ್ಲಿ ಮಗ್ನವಾಗಿದೆ. ನಾನು ಆರೋಗ್ಯವಾಗಿಲ್ಲವೆಂದು ಹೇಳಿದರೂ ಅವರು ಲಕ್ಷ್ಯವೇ ಮಾಡು ವುದಿಲ್ಲ' ಎಂದು ತರ್ಕ ಮಾಡಿಕೊಂಡಳು.

ಕ್ಷಣಕ್ಷಣಕ್ಕೆ ಬದಲಾಯಿಸುತ್ತಿದ್ದ ಗೌರಿಯ ಮನೋಗತವನ್ನು ಅರಿಯಲಾರದೆ ಸುಬ್ರಹ್ಮಣ್ಯ ಚಿಂತಾಪರವಶನಾದ.

ಸುಮ್ಮನೆ ಕೂಡುವುದು ಕಮಲಮ್ಮನ ಜಾಯಮಾನಕ್ಕೆ ಬಂದು ದಲ್ಲ. ಮಂಗಳೆ ಸಿನಿಮಾ ತಾರೆಯಾದ ಸುದ್ದಿಯನ್ನು ಸುಬ್ರಹ್ಮಣ್ಯನ ಕಿವಿಯ ಮೇಲೆ ಹಾಕುವುದಿಲ್ಲವೆಂದು ಅವಳು ಆಶ್ವಾಸನ ಕೊಟ್ಟಿದ್ದರೂ ಅದನ್ನು ಪರಿಪಾಲಿಸಬೇಕೆಂಬ ಇಚ್ಛೆ ಸ್ವಲ್ಪವೂ ಇರಲಿಲ್ಲ. ದಾಸಪ್ಪನ ಮುಖಾಂತರ ಆ ಸುದ್ದಿ ಸುಬ್ರಹ್ಮಣ್ಯನ ಕಿವಿ ಮುಟ್ಟಿತು.

'ನಾನು ಮದರಾಸಿಗೇಕೆ ಹೋಗಿ ಬರಬಾರದು' ಎಂಬ ಭಾವನೆ ಸುಬ್ರಹ್ಮಣ್ಯನ ಮನಸ್ಸಿನಲ್ಲಿ ಹೊಳೆಯಿತು. 'ಮಂಗಳೆಗಾಗಿ ಸಹಸ್ರಾರು ರೂಪಾಯಿ ಖರ್ಚುಮಾಡಿದ್ದೇನೆ. ಅವಳು ಭೀಮಾಚಾರಿ ಪಾಲಾಗುವು ದನ್ನು ಹೇಗೆ ನೋಡಿಕೊಂಡಿರಲಿ' ಎಂಬ ಯೋಚನೆ ಹೊಳೆಯಿತು.

ಮರುಕ್ಷಣವೇ ವಿವೇಕೋದಯವಾಗಿ 'ಆದದ್ದು ಆಗಿಹೋಯಿತು.

ಭಗವದನುಗ್ರಹದಿಂದ ಈ ಅನಿಷ್ಟ ಸಹವಾಸ ಬಿಡುಗಡೆಯಾಯಿತು. ಮನೆ ಈಗ ಶಾಂತವಾಗುತ್ತದೆ. ಅಮ್ಮ, ಗೌರಿ, ಶಂಕರ ಎಲ್ಲರೂ ಗೆಲುವಾಗಿದ್ದಾರೆ. ಪುನಃ ಈ ಕರ್ಮದ ಕತ್ತರಿಗೆ ಸಿಲುಕಿ ಮನೆಯನ್ನು ನರಕ ಮಾಡಲೇ' ಎಂದುಕೊಂಡ.

ಗೌರಿಯ ಆಗ್ರಹ, ಅಸಮಾಧಾನವೆಲ್ಲಾ ಸುಬ್ರಹ್ಮಣ್ಯನ ಬಗ್ಗೆ ಮಾತ್ರವಿತ್ತು. ಮನೆಯಲ್ಲಿ ಇತರರೊಂದಿಗೆ ಅವಳು ಸೌಜನ್ಯದಿಂದಲೇ ವರ್ತಿಸುತ್ತಿದ್ದಳು. ಶಂಕರನೊಂದಿಗೆ ಯಥಾಪ್ರಕಾರ 'ಹುಡುಗಾಟಿಕೆ' ಯಿಂದಲೇ ಇರುತ್ತಿದ್ದಳು.

ಸಂಶಯದ ದ್ವಿತೀಯ ಬೀಜವನ್ನು ಸುಬ್ರಹ್ಮಣ್ಯನ ಮನಸ್ಸಿನಲ್ಲಿ ಬಿತ್ತಲು ಕಮಲಮ್ಮ ತಡಮಾಡಲಿಲ್ಲ. ಒಂದು ದಿನ ಸುಬ್ರಹ್ಮಣ್ಯ ಶಂಕರನನ್ನು "ನಿನಗೆ ಇನ್ನೂ ಎಷ್ಟು ದಿನ ರಜವಿದೆ ಶಂಕರ?" ಎಂದು ಕೇಳಿದ.

"ಇನ್ನೂ ಒಂದು ವಾರವಿದೆ."

ರಜಾ ಮುಗಿಯುವುದರೊಳಗೆ ತಾನೆಲ್ಲಿ ಮೈಸೂರಿಗೆ ಹೊರಟು ಹೋಗುವೆನೋ ಎಂದು ಅಣ್ಣ ಯೋಚಿಸುತ್ತಿರಬಹುದೆಂದು ಭಾವಿಸಿಕೊಂಡು ಶಂಕರ "ರಜಾ ಮುಗಿದ ಮೇಲೇ ಮೈಸೂರಿಗೆ ಹೋಗುತ್ತೇನಣ್ಣಾ" ಎಂದ. ಸುಬ್ರಹ್ಮಣ್ಯ ಸಂತೋಷವನ್ನಾಗಲಿ ಅಸಂತೋಷವನ್ನಾಗಲಿ ವ್ಯಕ್ತಮಾಡಲಿಲ್ಲ.

ದಾಸಪ್ಪ ಹೇಳಿದ್ದ ಮಾತು ಸುಬ್ರಹ್ಮಣ್ಯನ ಚಿತ್ತವನ್ನು ಒಂದೇ ಸಮನೆ ಕೊರೆಯುತ್ತಿತ್ತು.

"ಒಳ್ಳೆಯ ಕಡೆ ನೋಡಿ ಶಂಕರನಿಗೆ ಬೇಗ ಮದುವೆ ಮಾಡಿಬಿಡು ಸುಬ್ರಹ್ಮಣ್ಯ. ವಯಸ್ಸಾದ ಹುಡುಗ ಮದುವೆಯಾಗದೆ ಇರುವುದು ಚೆನ್ನಲ್ಲ. ಅದೂ ಅಲ್ಲದೆ ಅತ್ತಿಗೆ ಮೈದುನ ವಿಶ್ವಾಸವಾಗಿದ್ದಾರೆ. ಜನ ಅಪಾರ್ಥ ಕಲ್ಪಿಸಿ ಹೊಲಸು ಮಾತನಾಡುವುದಕ್ಕೆ ಅವಕಾಶ ಕೊಡಬಾರದು."

'ಅತ್ತಿಗೆ ಮೈದುನ ವಿಶ್ವಾಸವಾಗಿದ್ದಾರೆ.'

'ಜನ ಹೊಲಸುಮಾತನಾಡುತ್ತಾರೆ.'

ಈ ಎರಡು ವಿಷಬಾಣಗಳೂ ಸಾವಕಾಶವಾಗಿ ತಮ್ಮ ಪ್ರಭಾವ ಬೀರಲಾರಂಭಿಸಿದ್ದುವು.

ಶಾಂತಸ್ಥಿತಿಯಲ್ಲಿ ಒಮ್ಮೊಮ್ಮೆ ಸುಬ್ರಹ್ಮಣ್ಯನೇ ತನ್ನ ಅವಿವೇಕಕ್ಕೆ ವಿಷಾದಪಡುತ್ತಿದ್ದ.

'ಶಂಕರನ ಮನಸ್ಸು ಮಗುವಿನ ಮನಸ್ಸು. ಅವನ ಅಂತರಂಗ ಬಹಿರಂಗವೆರಡೂ ಕನ್ನಡಿಯಂತೆ ಶುದ್ಧ. ಉದಾತ್ತ ಧ್ಯೇಯಗಳನ್ನಿಟ್ಟು ಕೊಂಡು ಅವನು ಜೀವನ ಆರಂಭಿಸಿದ್ದಾನೆ. ಶಂಕರನನ್ನು ದುರಾಚಾರಿ ಯೆನ್ನಬಹುದೇ ?'

'ಗೌರಿಯನ್ನು ಶಂಕರ ಪ್ರೀತಿಸುತ್ತಾನೆ. ತಾಯಿಯನ್ನು ಮಗ ಪ್ರೀತಿಸುವಂತೆ ಪ್ರೀತಿಸುತ್ತಾನೆ—ಅದರಲ್ಲಿ ತಪ್ಪೇನು ?'

'ಗೌರಿಯ ಶೀಲ ಶಂಕಿಸಲೇ? ನನ್ನ ಮೇಲೆ ಅವಳು ಮುನಿಸು ತೋರಿ ದಳು. ನನ್ನನ್ನು ಕಸಕ್ಕಿಂತ ಕಡೆಯಾಗಿ ಕಂಡಳು. ಯಾವಾಗ ನನಗೆ ಅವಳ ಸಂಗ, ಸ್ನೇಹ, ಅಂತಃಕರಣ ಬೇಕಾಗಿತ್ತೋ ಆಗ ಅವಳು ನಿರಾಕರಿ ಸಿದಳು. ಆದರೆ ಅವಳ ನಿಷ್ಕಲ್ಮಷ ಜೀವನದ ಮೇಲೆ ನಾನೇ ಮಸಿ ಬಳಿಯಲೀ?'

ಎಂದು ಯೋಚಿಸುತ್ತಿದ್ದ. ಅನಿರೀಕ್ಷಿತವಾಗಿ ಒದಗಿದ ಈ ಸಮಸ್ಯೆ ಯನ್ನು ಹೇಗೆ ಬಗೆಹರಿಸಬೇಕೆಂಬುದು ಸುಬ್ರಹ್ಮಣ್ಯನಿಗೆ ತಿಳಿಯದಾಯಿತು.

ಆದರೆ ಸುಬ್ರಹ್ಮಣ್ಯ ಸೂಕ್ಷ್ಮವಾಗಿ ಶಂಕರ, ಗೌರಿಯರ ಮಾತುಕತೆ, ಚಲನವಲನಗಳನ್ನು ಗಮನಿಸಲಾರಂಭಿಸಿದ. ಅವರಲ್ಲಿ ಬೆಳೆದಿದ್ದ 'ಅತಿ ಸಲಿಗೆ' ಒಮ್ಮೊಮ್ಮೆ ಅವನ ಮನಸ್ಸನ್ನು ಚುಚ್ಚುತ್ತಿತ್ತು. 'ಛೆ! ಇದರಲ್ಲೇನಿದೆ ?' ಎಂದು ತನಗೆ ತಾನೇ ಬುದ್ಧಿ ಹೇಳಿಕೊಳ್ಳುತ್ತಿದ್ದ.

ಎರಡು ಮೂರು ದಿನ ಸುಬ್ರಹ್ಮಣ್ಯ ಗೌರಿಯರಲ್ಲಿ ಮೌನ ಹೋರಾಟ ಸಾಗಿತು.

ಸುಬ್ರಹ್ಮಣ್ಯ ಮಾತನಾಡಿಸಿದರೆ ಗೌರಿ ಮಾತಾಡುತ್ತಿರಲಿಲ್ಲ.

ಶಂಕರ ಮಾತನಾಡಿಸಿದರೆ ನಸುನಗುತ್ತ ಉತ್ತರಕೊಡುತ್ತಿದ್ದಳು.

ಸುಬ್ರಹ್ಮಣ್ಯ ರೂಮು ಪ್ರವೇಶಿಸಿದೊಡನೆಯೇ ಗೌರಿ ಹೊರಕ್ಕೆ ಬರುತ್ತಿದ್ದಳು.

ಶಂಕರ ರೂಮು ಪ್ರವೇಶಿಸಿದರೆ ಅವನೊಂದಿಗೆ ಬಹಳ ಹೊತ್ತು ಮಾತನಾಡುತ್ತಿದ್ದಳು. ತಾನೇ ರವಿಯನ್ನೆತ್ತಿ ಅವನ ಕೈಯಲ್ಲಿಡುತ್ತಿದ್ದಳು.

ಸುಬ್ರಹ್ಮಣ್ಯನ ಚಿತ್ತವನ್ನು ಸಂಶಯದ ಕರಾಳ ರಾಕ್ಷಸ ಸೆರೆಹಿಡಿದ.

'ರವಿ....ರವಿ....ನನ್ನ ಮಗ !—ನನ್ನ ಮಗನೇ ?'

ಎಂಬ ಚಿಂತೆ ಗರಗಸದಂತೆ ಅವನನ್ನು ಕೊಯ್ಯತೊಡಗಿತು.

ಒಂದು ಸಂಜೆ ಸುಬ್ರಹ್ಮಣ್ಯ ತನ್ನ ರೂಮು ಪ್ರವೇಶಿಸುವಲ್ಲಿ ಶಂಕರ ಹೊರಬಿದ್ದ. ಅವನ ತಲೆಗೂದಲು ಕೆದರಿಹೋಗಿತ್ತು. ಮುಖದಲ್ಲಿ ಮಂದಹಾಸ ಮೂಡಿತ್ತು. ಸುಬ್ರಹ್ಮಣ್ಯ ಒಳಕ್ಕೆ ಬಂದಕೂಡಲೇ ಗೌರಿಯು ಹೊರಕ್ಕೆ ಬಂದಳು.

ಸುಬ್ರಹ್ಮಣ್ಯ ರೂಮಿನಲ್ಲಿ ಒಬ್ಬನೇ ಕುಳಿತು ಚಿಂತಿಸಲಾರಂಭಿಸಿದ. ಅವನ ರಕ್ತ ಕುದಿಯ ತೊಡಗಿತ್ತು.

ಅದೇ ರಾತ್ರಿ ಅಣ್ಣತಮ್ಮ ಜತೆಯಲ್ಲಿಯೇ ಊಟಕ್ಕೆ ಕುಳಿತರು. ಗೌರಿಯೇ ಬಡಿಸಿದಳು. ಸುಬ್ರಹ್ಮಣ್ಯನ ಗಂಟಲಲ್ಲಿ ಅನ್ನವಿಳಿಯಲಿಲ್ಲ—ಶಂಕರ ಮೃದುವಾಗಿ

"ಯಾಕಣ್ಣಾ—ಮೈಯಲ್ಲಿ ಚೆನ್ನಾಗಿಲ್ಲವೇ?" ಎಂದು ಕೇಳಿದ.

"ನನಗೇನು ಧಾಡಿ" ಎಂದು ಸುಬ್ರಹ್ಮಣ್ಯ ಒರಟಾಗಿ ಉತ್ತರಿಸಿದ.

ಶಂಕರ ಮಾತು ಬೆಳಸದೆ ಊಟ ಮುಗಿಸಿಕೊಂಡು ತನ್ನ ರೂಮು ಸೇರಿದ.

ಸುಬ್ರಹ್ಮಣ್ಯ ಯಾರೊಂದಿಗೂ ಮಾತನಾಡದೆ ತನ್ನ ರೂಮು ಸೇರಿದ.

ಗೌರಿ ಮನೆಗೆಲಸ ಮುಗಿಸಿಕೊಂಡು ನಿಂಗವ್ವನಿಗೆ ಬಡಿಸಿ ಮುಸುರೆ ಪಾತ್ರೆಗಳನ್ನು ಹೊರಗೆ ಹಾಕಿ, ತಾಂಬೂಲದ ತಟ್ಟೆ ತೆಗೆದುಕೊಂಡು ರೂಮಿನೊಳಗೆ ಬಂದಳು.

ಸ್ವಲ್ಪ ಹೊತ್ತು ಮೌನ ವ್ಯಾಪಿಸಿತ್ತು.

'ಕೇನೋಪನಿಷತ್' ಓದುತ್ತ ಕುಳಿತಿದ್ದ ಶಂಕರ ಥಟ್ಟನೆ ಬೆಚ್ಚಿಬಿದ್ದ. ಅವನ ಚಿತ್ತೈಕಾಗ್ರತೆಗೆ ಭಂಗ ಬಂದಿತ್ತು. ಅಣ್ಣನ ರೂಮಿನಿಂದ ಕೇಳಿ ಬಂದ ಶಬ್ದ ಅವನನ್ನು ಚಕಿತನನ್ನಾಗಿ ಮಾಡಿತ್ತು. ಅವನ ಲಕ್ಷ್ಯ ಅನೈಚ್ಛಿಕವಾಗಿ ಅತ್ತ ಕಡೆ ಹೋಯಿತು.

ನಾಲ್ಕಾರು ನಿಮಿಷ ಕಳೆದಿರಬಹುದು.

ಸುಬ್ರಹ್ಮಣ್ಯನ ರೂಮಿನಿಂದ ಮತ್ತೆ ಶಬ್ದ ಕೇಳಿಬಂತು.

ಅಣ್ಣ ಅತ್ತಿಗೆಯನ್ನು ಹೊಡೆಯುತ್ತಿದ್ದಾನೆಂಬುದು ಶಂಕರನಿಗೆ ಖಚಿತವಾಯಿತು.

'ಏಕೆ? ಅತ್ತಿಗೆ ಏನು ಅಪರಾಧ ಮಾಡಿದಳು?'

ಅತ್ತಿಗೆ ಅಳುತ್ತಿದ್ದಳು.

ಅಣ್ಣನನ್ನು ಹೊರಗೆ ಕರೆದು ಮಾತನಾಡಿಸಬೇಕೆಂದು ಶಂಕರ ಮೆಲ್ಲಗೆ ಬಾಗಿಲು ತೆಗೆದುಕೊಂಡು ಹೊರಬಿದ್ದ.

ಅಣ್ಣನ ರೂಮಿನಲ್ಲಿ ನಡೆಯುತ್ತಿದ್ದ ಸಂಭಾಷಣೆ ಸ್ಪಷ್ಟವಾಗಿ ಕೇಳಿ ಬರುತ್ತಿತ್ತು.

'ನನ್ನ ಮನೆಯಲ್ಲಿ–ನನ್ನ ಕಣ್ಣೆದುರಿಗೇ ಈ ಹೊಲಸೇ!'

'ನಾನೇನು ಮಾಡಿದೆ?'

'ಏನು ಮಾಡಿದೆ—ಮಹಾಪತಿವ್ರತೆ—ಏನೂ ಮಾಡಲಿಲ್ಲ.'

'ನನ್ನ ಪಾತಿವ್ರತ್ಯದ ಬಗ್ಗೆ ನೀವು ಕೆಟ್ಟ ಮಾತಾಡಬೇಡಿ.'

'ಸಾಕ್ಷಾತ್ ಸಾವಿತ್ರಿ; ಎಂಥ ಸೋಗು–ಎಷ್ಟು ಮೋಸ!'

'ನೀವು ಹೊಡೆದುದಕ್ಕೆ ನಾನು ಆಕ್ಷೇಪಿಸುವುದಿಲ್ಲ—ಇಂಥ ಕೆಟ್ಟ ಮಾತು ಆಡಬೇಡಿ.'

'ಸಾಕು ಬಾಯಿ ಮುಚ್ಚು—ಕುಲಗೆಟ್ಟ....'

'ನಿಮಗೇನು ಬುದ್ಧಿ ಕೆಟ್ಟಿದೆಯೋ?'

'ನಿನ್ನ ಸಹವಾಸ ಮಾಡಿದ ಮೇಲೆ ಕೆಡದೆ ಇರುತ್ತದೆಯೇ'

'ನನ್ನ ಸಹವಾಸವಲ್ಲ–ನಿಮ್ಮ ಮಂಗಳಿಯ ಸಹವಾಸ.'

ಸುಬ್ರಹ್ಮಣ್ಯ ಗೌರಿಗೆ ಬಿಗಿದ ಏಟಿನ ಶಬ್ದ ಕೇಳಿ ಶಂಕರ ತಲ್ಲಣಿಸಿದ.

'ನನ್ನ ನೀತಿ ಚೆನ್ನಾಗಿಲ್ಲ—ಅದು ಲೋಕಕ್ಕೇ ಗೊತ್ತಿದೆ—ನಿನ್ನ ನೀತಿ....?'

'ನನ್ನ ನೀತಿ ಏನಾಗಿದೆ?'

'ಏನಾಗಿದೆಯೋ! ಗೆದ್ದಲು ಹಿಡಿದುಹೋಗಿದೆ. ನನ್ನ ಮನೆಗೆ ಮಾರಿ ಬಂದ ಹಾಗೆ ಬಂದೆ.–ಈಗ ಈ ಮನೆ ನನ್ನದಲ್ಲ—ನನ್ನ ಹೆಂಡತಿ

ನನ್ನವಳಲ್ಲ—ನನ್ನ ಮಗು....ಅದು ಯಾರದೋ ಭಗವಂತನೇ ಬಲ್ಲ! ನನ್ನ ತಮ್ಮನ........'

ಶಂಕರ ಅಲ್ಲಿ ನಿಲ್ಲಲು ಸಾಧ್ಯವಾಗಲಿಲ್ಲ.

ಅವನಿಗೆ ಕಣ್ಣುಗತ್ತಲೆ ಕವಿದು ಬಂತು.

ದುಃಖಾತಿರೇಕದಿಂದ ಚೇತನಗಳು ಶೂನ್ಯವಾದುವು.

ಹಾಸಿಗೆಯ ಮೇಲೆ ಎಷ್ಟು ಹೊತ್ತು ಮಲಗಿದನೋ ಅವನಿಗೇ ತಿಳಿಯದು.

ಸ್ವಲ್ಪ ಹೊತ್ತು ಕಳೆದ ಮೇಲೆ ಕಣ್ಣಲ್ಲಿ ಧಾರಾ ಪ್ರವಾಹ ಹೊರಟಿತು.

ಕಣ್ಣಿನಿಂದೊಗೆದ ದುಃಖಾಶ್ರು ಅವನ ಬುದ್ಧಿಯನ್ನು ತಿಳಿಮಾಡಿತ್ತು.

ಎದ್ದು ಕುಳಿತವನೇ ಒಂದು ಕಾಗದ ಬರೆದಿಟ್ಟ.

ಗೂಟಕ್ಕೆ ನೇತುಹಾಕಿದ ಕೋಟನ್ನೆಳೆದುಕೊಂಡು ಧರಿಸಿ, ತಾನು ಓದುತ್ತಿದ್ದ ಗ್ರಂಥ ಕೈಯಲ್ಲಿ ಹಿಡಿದ.

ದೀಪವಾರಿಸಿ ಮೆಲ್ಲನೆ ಹೊರಗೆ ಅಡಿಯಿಟ್ಟ.

ಅಣ್ಣನ ರೂಮಿನಿಂದ ಅತ್ತಿಗೆಯ ಅಳುವಿನ ಧ್ವನಿ ಕೇಳಿ ಬರುತ್ತಿತ್ತು.

ಮೆಲ್ಲನೆ ಮನೆಯೊಳಗೆ ನಡೆದು, ನಿರಭ್ರ ಆಕಾಶದಂತೆ ಮಲಗಿ ನಿದ್ರಿಸುತ್ತಿದ್ದ ತಾಯಿದೇವಿಯನ್ನು ಕಣ್ತುಂಬ ನೋಡಿದ. ಅವಳ ಪಾದ ಮುಟ್ಟಬೇಕೆಂದು ಮನಸ್ಸು ನೊರೆಯಿತು. ಅವಳು ಎಚ್ಚರಗೊಳ್ಳುವಳೆಂಬ ಭಯ—ನಿಂತಲ್ಲಿಯೇ ಕೈಮುಗಿದ.

ಶಬ್ದವಾಗದಂತೆ ಹಿತ್ತಿಲ ಬಾಗಿಲು ತೆಗೆದುಕೊಂಡು ಹೊರಗೆ ಅಡಿಯಿಟ್ಟ. ಗೋಶಾಲೆಯ ಪಕ್ಕದಲ್ಲಿ ನಿಂಗವ್ವ ಮಲಗಿದ್ದಳು. ಶಂಕರ ಅವಳನ್ನು ದಿಟ್ಟಿಸಿ ನೋಡಿ ನಮಸ್ಕರಿಸಿದ. ನಿಂಗವ್ವನಿಗೆ ಥಟ್ಟನೆ ಎಚ್ಚರವಾಗಿ 'ಯಾರು?' ಎಂದಳು. ಶಂಕರ ಗೋಶಾಲೆಯ ಪಕ್ಕಕ್ಕೆ ಹೊರಳಿ ಕ್ಷಣಕಾಲ ನಿಂತ.

ನಿಂಗವ್ವ ಬುಡ್ಡಿ ಹಿಡಿದು ನೋಡಿದಳು.

ಯಾರೂ ಇಲ್ಲವೆಂದು ಧೈರ್ಯ ಮಾಡಿಕೊಂಡು ಮಲಗಿದಳು.

ಶಂಕರ ಮೆಲ್ಲನೆ ಹೊರಬಿದ್ದ.

ಠಸ್ತೆಯೂ ಆಯಾಸಗೊಂಡು ಗಾಢನಿದ್ರೆಯಲ್ಲಿ ಲೀನವಾಗಿತ್ತು.

ಅಲ್ಲಲ್ಲಿ ಒಂದೊಂದು ಬೀದಿ ನಾಯಿ ಬಗುಳುತ್ತಿತ್ತು.

ಮುಂದೆ ನಡೆಯುತ್ತ ಒಮ್ಮೆ ಹಿಂದಿರುಗಿ ಮನೆಯ ಕಡೆ ನೋಡಿದ. ಯಾವುದೋ ಸೆಳೆತ ಅವನನ್ನು ಒಂದು ಕ್ಷಣ ಸೆರೆಹಿಡಿದು ನಿಲ್ಲಿಸಿತು.

'ಛಿ!' ಎಂದುಕೊಂಡು ಶಂಕರ ನಿರ್ಧಾರದಿಂದ ಮುನ್ನಡೆದ.

ಒಮ್ಮೆಯೂ ಹಿಂದಿರುಗಿ ನೋಡಲಿಲ್ಲ.

ಹಿಂದಿರುಗಿ ನೋಡಲು ಅವನಿಗೆ ಧೈರ್ಯ ಸಾಲದಾಯಿತು.

ಅಮ್ಮ—ಅಣ್ಣ—ಅತ್ತಿಗೆ—ರವಿ—ನಿಂಗವ್ವ ಎಲ್ಲರನ್ನೂ ಬಿಟ್ಟು ಮುನ್ನಡೆದಿದ್ದ.

ರವಿಯ ಪುಟ್ಟ ಕೈಗಳು ಕರೆಯುತ್ತಿದ್ದುವು.

ತಾಯಿಯ ಹೃದಯ ಮಗನನ್ನಪ್ಪಲು ತವಕಪಡುತ್ತಿತ್ತು.

ಅಣ್ಣ, ಅತ್ತಿಗೆ ಇಬ್ಬರೂ ಸ್ವಾಗತ ಬಯಸುತ್ತಿದ್ದರು.

ನಿಂಗವ್ವ ಕೈ ಹಿಡಿದೆಳೆಯುತ್ತಿದ್ದಳು.

ಇತ್ತ ಎಲ್ಲರೂ ಕರೆಯುತ್ತಿದ್ದರು.

ಅತ್ತ ಯಾವುದೋ ಶಕ್ತಿ ಎಳೆಯುತ್ತಿತ್ತು.

ವ್ಯಕ್ತದಲ್ಲಿದ್ದುದು ಗೊತ್ತಾಗಿತ್ತು. ಇಷ್ಟೇ ಸುಖ ಇಷ್ಟೇ ದುಃಖ; ಇಷ್ಟೇ ಶಾಂತಿ ಇಷ್ಟೇ ಅಶಾಂತಿ !

ಅವ್ಯಕ್ತದಲ್ಲಿ ಏನಿತ್ತು ? ಶಾಂತಿಯೇ ಅಶಾಂತಿಯೇ? ಕರುಣೆಯೇ ಕಾಠಿಣ್ಯವೇ ?

ಯಾತ್ರಿಕ ನಡೆದೇ ಇದ್ದ.

ಕತ್ತಲು ಕಳೆಯುತ್ತ ಬಂದಿತ್ತು. ಅರುಣಚ್ಛಾಯೆ ಪಸರಿಸಲಾರಂಭಿಸಿತ್ತು.

ನಿತ್ಯ ಸೂರ್ಯಾಸ್ತ—ಸೂರ್ಯೋದಯ ! ನಿಯತಿಯ ಚಕ್ರದ ಅವ್ಯಾಹತ ಪರಿಭ್ರಮಣ !

ಸೂರ್ಯಾಸ್ತ ಕಂಡುದಾಯಿತು. ನನಗೆ ಸೂರ್ಯೋದಯವುಂಟೇ ? ಈ ಗಾಢಾಂಧಕಾರವನ್ನು ಅರುಣಕಿರಣ ಭೇದಿಸಬಲ್ಲುದೇ ?

**ಕೇನ ?** **ಕೇನ ?** **ಕೇನ ?**

"ಕೇನೇಷಿತಂ ಪತತಿ ಪ್ರೇಷಿತಂ ಮನಃ ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ |
ಕೇನೇಷಿತಾಂ ವಾಚಮಿಮಾಂ ವದಂತಿ ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ ||"

ಯಾರ ಇಚ್ಛೆಗನುಸರಿಸಿ, ಯಾರ ಪ್ರೇರಣೆಯಿಂದ, ಈ ಮನಸ್ಸು ತನ್ನ ವಿಷಯಗಳಲ್ಲಿ ತೊಡಗುವುದು? ಪ್ರಾಣವು ಮೊಟ್ಟಮೊದಲು ಯಾರ ಆಜ್ಞೆಯಿಂದ ತನ್ನ ಕರ್ಮವನ್ನಾರಂಭಿಸುವುದು? ಯಾರ ಇಚ್ಛೆಯಿಂದ ಜನರು ನುಡಿಯುವರು? ಕಣ್ಣು ಕಿವಿಗಳಿಗೆ ಆಜ್ಞೆಮಾಡುವ ದೇವತೆ ಯಾರು?

ಕೇನ?

ಕೇನ?

**ಕೇನ?**

## ೪೦

ಬೆಳಗಾಯಿತು.

ಪಾರ್ವತಮ್ಮನವರು ಬಚ್ಚಲು ಮನೆಯ ಒಲೆ ಹೊತ್ತಿಸುತ್ತ ಕುಳಿತಿದ್ದರು.

ಗೌರಿಯೆದ್ದು ಮುಖ ತೊಳೆಯಲು ಬಚ್ಚಲು ಮನೆಗೆ ಬಂದಳು. ಪಾರ್ವತಮ್ಮನವರು ಅವಳ ಮುಖ ನೋಡಿದರು. ಊದಿಕೊಂಡು ಕೆಂಪೇರಿದ್ದ ಅವಳ ಕಣ್ಣುಗಳು ಅರ್ಥಗರ್ಭಿತವಾಗಿದ್ದುವು. ಪಾರ್ವತಮ್ಮನವರು ಸೊಸೆಯನ್ನು

"ಅದೇನು ಗೌರಾ, ರಾತ್ರಿಯೆಲ್ಲಾ ರಾಮಾಯಣ?" ಎಂದರು.

ಗೌರಿಯ ಕಣ್ಣೀರೇ ಅತ್ತೆಗೆ ದೊರಕಿದ ಉತ್ತರ.

"ಸುಬ್ಬು ಬುದ್ಧೀನೇ ನೆಟ್ಟಗಿಲ್ಲಮ್ಮ. ನಾಲ್ಕು ದಿವಸ ಚೆನ್ನಾಗಿರುತ್ತಾನೆ; ನಾಲ್ಕು ದಿವಸ ಹುಲಿ ಹಾಗೆ ಆಡುತ್ತಾನೆ."

"ನನ್ನ ದುರದೃಷ್ಟ ಅತ್ತೆ. ನಾನು ಬದುಕಿರಬಾರದು. ಯಮಧರ್ಮರಾಯ ಬೇಗ ನನ್ನ ಕಣ್ಣು ಮುಚ್ಚಿಸಿದರೆ ಸಾಕು."

"ಕೆಟ್ಟಮಾತಾಡಬೇಡ ಸುಮ್ಮನಿರು. ಈ ಸಲ ಅವನನ್ನು ಚೆನ್ನಾಗಿ ತರಾಟಿಗೆ ತೆಗೆದುಕೊಳ್ಳುತ್ತೇನೆ."

ಸುಬ್ರಹ್ಮಣ್ಯ ಎದ್ದವನೇ ಮುಖ ತೊಳೆದುಕೊಂಡು, ಸ್ನಾನ ಮಾಡಿ ಒಂದು ಕಪ್ ಕಾಫಿ ಕುಡಿದು ಮನೆಬಿಟ್ಟು ಹೊರಟುಬಿಟ್ಟ. ಯಾರನ್ನೂ ಅವನು ಮಾತನಾಡಿಸಲಿಲ್ಲ. ತಿಂಡಿಗೂ ಕಾಯಲಿಲ್ಲ.

ಗಂಟೆ ಎಂಟಾಯಿತು.

ಒಂಭತ್ತು ಹೊಡೆಯಿತು.

ಶಂಕರನ ರೂಮಿನ ಕದ ಮುಚ್ಚಿಯೇ ಇತ್ತು. ಪಾರ್ವತಮ್ಮನವರು

"ಗೌರಾ, ಶಂಕರ ಎದ್ದನೇ?" ಎಂದು ಕೇಳಿದರು.

"ನಾನು ನೋಡಲಿಲ್ಲ ಅತ್ತೇ."

"ಇಷ್ಟು ಹೊತ್ತು ಅವನೆಂದಿಗೂ ಮಲಗುವವನಲ್ಲ"! ಎಂದು

ಕೊಂಡು ತಾವೇ ಹೋಗಿ ಶಂಕರನ ರೂಮಿನ ಬಾಗಿಲು ತೆಗೆದು ನೋಡಿದರು.

ಶಂಕರ ರೂಮಿನಲ್ಲಿರಲಿಲ್ಲ.

"ಇಷ್ಟುಬೇಗ ಎಲ್ಲಿಗೆ ಹೋದನೇ ಗೌರಾ?" ಎಂದು ಕೇಳಿದರು.

"ನಾನು ಕಾಣೆನಮ್ಮ" ಎಂದು ಹೇಳಿದಳು.

ಗಂಟೆ ಹತ್ತಾಯಿತು.

ಹನ್ನೊಂದು ಹೊಡೆಯಿತು.

ಪಾರ್ವತಮ್ಮನವರ ಮನಸ್ಸಿನಲ್ಲಿ ತವಕಹುಟ್ಟಿಕೊಂಡಿತು. ನಿಂಗವ್ವನನ್ನು ಕರೆದು "ಶಂಕರಾ ಜೋಯಿಸರ ಮನೆಗೇನಾದರೂ ಹೋಗಿದ್ದಾನೇನು ನೋಡು ನಿಂಗಿ" ಎಂದರು.

"ಅವನೆಲ್ಲಿಗೂ ಓಗಾಕಿಲ್ಲರಲ್ಲವ್ವಾ. ತ್ವಾಟದ ಕಡೆ ಓಗಿದ್ದಾನೋ ಏನೋ?".

"ಹೇಗಾದರೂ ಆಗಲಿ. ನೀನೊಮ್ಮೆ ನೋಡಿಕೊಂಡು ಬಾ."

ಹನ್ನೆರಡು ಗಂಟೆ ಬಾರಿಸಿತು.

ಶಂಕರ ಎಲ್ಲಿಯೂ ಕಾಣಲಿಲ್ಲವೆಂದು ನಿಂಗವ್ವನೂ ಬಂದು ಹೇಳಿದಳು.

ಪಾರ್ವತಮ್ಮನವರ ಮನಸ್ಸಿನ ಧಾವಂತ ಹೆಚ್ಚಿತು.

ಒಂದು ಗಂಟೆಯ ವೇಳೆಗೆ ಸುಬ್ರಹ್ಮಣ್ಯ ಮನೆಗೆ ಬಂದ. ಅವನ ಮುಖ ನೋಡಿದ ಕೂಡಲೆ ಪಾರ್ವತಮ್ಮನವರು

"ಬೆಳಿಗ್ಗೆಯಿಂದ ಶಂಕರ ಕಾಣಲೇ ಇಲ್ಲ ಸುಬ್ಬು" ಎಂದರು.

"ಎಲ್ಲಿಗೋ ಹೋಗಿದ್ದಾನೆ. ಬರುತ್ತಾನೆ."

"ನಿಂಗಿ ಹೋಗಿ ಹುಡುಕಿಕೊಂಡು ಬಂದಳು. ಎಲ್ಲಿಯೂ ಇಲ್ಲವಂತೆ."

"ಜೋಯಿಸರ ಮನೆ ನೋಡಿದಳೇ?"

"ಅಲ್ಲಿಯೂ ಇಲ್ಲವಂತೆ!"

ರಾತ್ರಿ ನಡೆದ ಪ್ರಕರಣ ಶಂಕರನಿಗೆ ತಿಳಿದಿರಬಹುದೇ ಎಂಬ ಅನುಮಾನ ಸುಬ್ರಹ್ಮಣ್ಯನ ಮನಸ್ಸಿಗೆ ಹೊಳೆಯಿತು.

"ಬರ್ತಾನೆ—ಎಲ್ಲಿಗೆ ಹೋಗುತ್ತಾನೆ. ಅವನೇನು ಎಳೆಯ ಮಗುವೇ?" ಎಂದು ಮಾತು ಹಾರಿಸಿಬಿಟ್ಟ.

ಪಾರ್ವತಮ್ಮನವರು ಸುಬ್ರಹ್ಮಣ್ಯ, ಗೌರಿ, ನಿಂಗವ್ವನಿಗೆ ಊಟಕ್ಕಿಟ್ಟರು.

"ನೀವೂ ಕುಳಿತುಕೊಳ್ಳಿ ಅತ್ತೆ" ಎಂದಳು ಗೌರಿ.

"ಶಂಕರನ್ನ ಬಿಟ್ಟು ನಾನು ಹೇಗೆ ಅನ್ನ ತಿನ್ನಲೇ ಗೌರಿ"

ಎಂದು ಪಾರ್ವತಮ್ಮನವರು ಬೀದಿಯ ಬಾಗಿಲಿನಲ್ಲಿ ಶಂಕರನ ದಾರಿ ಕಾಯುತ್ತಾ ಕುಳಿತರು.

ಸುಬ್ರಹ್ಮಣ್ಯ ರೂಮಿಗೆ ಹೋಗಿ ಮಲಗಿ ಸುಖವಾಗಿ ನಿದ್ರಿಸಿ ನಾಲ್ಕು ಗಂಟೆಗೆದ್ದವನು ಗೌರಿಯನ್ನು

"ಶಂಕರ ಬಂದನೇ?" ಎಂದು ಕೇಳಿದ.

"ಇಲ್ಲ" ಎಂದು ಕ್ಷೀಣಸ್ವರದಲ್ಲಿ ಗೌರಿ ಉತ್ತರಿಸಿದಳು.

ಬೀದಿಯ ಬಾಗಿಲಿನಲ್ಲಿ ಉಪವಾಸ ಕುಳಿತಿದ್ದ ತಾಯಿಯನ್ನು ನೋಡಿ ಸುಬ್ರಹ್ಮಣ್ಯ ಕೋಪದಿಂದ

"ನೀನೇಕಮ್ಮ ಉಪವಾಸ ಸಾಯಬೇಕು. ಎಲ್ಲೋ ಹೋಗಿದ್ದಾನೆ. ಬರುತ್ತಾನೆ. ಏಳು—ಊಟಮಾಡು."

"ಇಲ್ಲ ಸುಬ್ಬೂ............ನನ್ನ ,ಗಂಟಲಲ್ಲಿ ಅನ್ನ ಇಳಿಯಲ್ಲಪ್ಪ. ಯಾರೂ ನನ್ನ ಬಲವಂತ ಮಾಡಬೇಡಿ. ನನ್ನ ಮಗು ಮುಖ ನೋಡದೆ ಈ ಬಾಯಿಗೆ ನೀರೂ ಹಾಕಲಾರೆ." ಎಂದರು. ಶಂಕರ ಎಲ್ಲಿಗೆ ಹೋಗಿರಬಹುದೆಂಬ ಜಿಜ್ಞಾಸೆ ಸುಬ್ರಹ್ಮಣ್ಯನ ಮನಸ್ಸಿನಲ್ಲಿ ಆರಂಭವಾಯಿತು.

ಶಂಕರನ ರೂಮಿನಲ್ಲಿ ಸುಳುಹು ಸಿಕ್ಕಬಹುದೆಂದು ರೂಮಿನೊಳಗೆ ಪ್ರವೇಶಿಸಿದ. ಶಂಕರನ ಕಾಗದ ಸುಬ್ರಹ್ಮಣ್ಯನನ್ನೇ ಎದುರು ನೋಡುತ್ತ, ಮೇಜಿನ ಮೇಲಿದ್ದ ಎಲೆಕ್ಟ್ರಿಕ್ ದೀಪದ ಸ್ಟ್ಯಾಂಡಿನ ಬುಡದಲ್ಲಿ ಕುಳಿತಿತ್ತು.

ಕಾಗದವನ್ನು ಕೈಗೆತ್ತಿಕೊಂಡು ಸುಬ್ರಹ್ಮಣ್ಯ ಒಡೆದು ಓದಲು ಮೊದಲಿಟ್ಟ.-

“ಅಣ್ಣಾ,

ಈ ಕಾಗದ ನಿನಗೆ ಬರೆಯಬೇಕೋ ಬೇಡವೋ ಎಂದು ಬಹಳ ಯೋಚನೆ ಮಾಡಿ ಬರೆಯಲು ಮೊದಲು ಮಾಡಿದ್ದೇನೆ. ನನ್ನ ಮನಸ್ಸಿನಲ್ಲಿ ಹುದುಗಿರುವ ಭಾವನೆಗಳನ್ನೂ ಈಗ ನಾನು ಅನುಭವಿಸುತ್ತಿರುವ ವೇದನೆಯನ್ನೂ ಈ ಕಾಗದದಲ್ಲಿ ಕೂಲಂಕಷವಾಗಿ ನಿರೂಪಿಸಲು ಸಾಧ್ಯವಿಲ್ಲ.

ತೀರ್ಥರೂಪರು ದಿವಂಗತರಾದಾಗ ನಾನು ಬಹಳ ಸಣ್ಣವನು. ಅವರ ಸ್ಥಾನಕ್ಕೆ ನೀನೂ ಅತ್ತಿಗೆ ಬಂದಿರಿ. ಈ ವರೆಗೆ ನನ್ನನ್ನು ಮಗನಂತೆ ಪೋಷಿಸಿದಿರಿ. ತಂದೆಯ ಸಾವಿನ ದುಃಖವನ್ನು ನಿಮ್ಮ ಮಮತೆ ಮರೆಯಿಸಿತು. ನಿಮ್ಮ ವಿಶ್ವಾಸಕ್ಕೆ ಅಪವಾದ ಬರದಂತೆ ನಡೆದುಕೊಳ್ಳಬೇಕೆಂದು ನಾನೂ ಪ್ರಯತ್ನಿಸಿದೆ.

ಕೆಲವು ತಿಂಗಳ ಹಿಂದೆ ನನ್ನ ಮೈಸೂರು ವಿಳಾಸಕ್ಕೆ ಬೆಂಗಳೂರಿನಿಂದ ನೀನು ಬರೆದ ಕಾಗದ ನೆನಪಿರಬಹುದು. ಆ ಕಾಗದ ನಮ್ಮಲ್ಲಿ ಅನ್ಯಾದೃಶ ಮಧುರ ಮೈತ್ರಿಯನ್ನು ಬೆಳಸಿತು. ‘ಅಣ್ಣತನ’’ದ ಸಿಂಹಾಸನದಿಂದಿಳಿದು, ನೀನು ನನ್ನನ್ನು ಗೆಳೆಯನಂತೆ ಕಂಡೆ. ನಿನ್ನ ಸುಖದುಃಖವನ್ನು, ಕಷ್ಟಕಾರ್ಪಣ್ಯವನ್ನು ಹೇಳಿಕೊಂಡೆ. ಆ ವೇಳೆಗಾಗಲೇ **ಮಾನವ ಪುಂಗವ**ನಾಗಿದ್ದ ನನ್ನ ಅಣ್ಣ ಅಂದಿನಿಂದ ನನಗೆ **ದಿವ್ಯ ಮಾನವ**ನಾದ. ದೈವಿಕ ಶಕ್ತಿಯೊಂದು ನಮ್ಮ ಆತ್ಮಗಳನ್ನು ಬೆಸೆದಿತ್ತು.

ಶ್ರೀಮತಿ ಮಂಗಳಾಂಬನ ಪ್ರಕರಣದಿಂದ ನಿನ್ನಲ್ಲಿ ಅತ್ತಿಗೆಯಲ್ಲಿ ಹುಟ್ಟಿದ ವೈಮನಸ್ಯ, ವಿರಸ ನಿವಾರಣೆಯಾಗಿ ನಿಮ್ಮಿಬ್ಬರಲ್ಲಿ ಶಾಶ್ವತ ಪ್ರೇಮ ನೆಲೆಗೊಳ್ಳಬೇಕೆಂಬುದೇ ನನ್ನ ನಿತ್ಯ ಪ್ರಾರ್ಥನೆಯಾಯಿತು. ದುಃಖ, ಕೋಪ, ರೋಷ, ಅಪಮಾನಗಳಿಂದ ಮುದುಡಿಹೋಗಿದ್ದ ಅತ್ತಿಗೆಯ ಮನಸ್ಸು ವಿಕಾಸಗೊಂಡು ನಿನ್ನ ಜೀವನಕ್ಕೆ ಚೆಲುವನ್ನು, ಗೆಲುವನ್ನು, ಅಮರಾನಂದವನ್ನು ಒದಗಿಸಬೇಕೆಂದು ನಾನು ಅಪೇಕ್ಷಿಸಿದೆ. ಅತ್ತಿಗೆಯ ಮನಸ್ಸಿನ ಮಾಲಿನ್ಯ ಕಳೆಯಲು ನನ್ನ ಕೈಯಲ್ಲಾದ ಪ್ರಯತ್ನ ಮಾಡುವುದು ನನ್ನ ಕರ್ತವ್ಯವಾಗಿತ್ತು. ಆ ಪ್ರಯತ್ನ

ನಾನು ಮಾಡಿದೆ. ಪ್ರಾಯಶಃ ನನ್ನ ಪ್ರಯತ್ನ ಭಗವಂತನಿಗೆ ಪ್ರಿಯವಾಗಲಿಲ್ಲ.

ಈಗ ಸ್ವಲ್ಪ ಹೊತ್ತಿಗೆ ಮುಂಚೆ ಅತ್ತಿಗೆಗೂ ನಿನಗೂ ನಡೆದ ವಾಗ್ಯುದ್ಧ ನನ್ನ ಕಿವಿಯ ಮೇಲೆ ಬಿತ್ತು. ನಿಮ್ಮ ಮಾತುಗಳನ್ನು ಉದ್ದೇಶ ಪೂರ್ವಕವಾಗಿ ಹೊಂಚಿ ಕೇಳಲು ನಾನು ಯತ್ನಿಸಲಿಲ್ಲ. ಅತ್ತಿಗೆಗೆ ಏಟು ಬೀಳುತ್ತಿತ್ತು. ಅದನ್ನು ತಪ್ಪಿಸಲು ನಾನು ಹೊರಕ್ಕೆ ಬಂದೆ. ನಿಮ್ಮಲ್ಲಿ ವಾದವಾರಂಭವಾಗಿತ್ತು. ಅವುಗಳನ್ನು ಕೇಳಿಸಿಕೊಂಡೆ.

ನಿತ್ಯಪರಿಶುದ್ಧಳಾದ ಅತ್ತಿಗೆಯ ಬಗ್ಗೆ ನಿನಗೆ ಹುಟ್ಟಿರುವ ಅನುಮಾನ ಅಕ್ಷಮ್ಯವಾದುದು. ನನ್ನನ್ನು ಮಗನಂತೆ ಲಾಲಿಸಿ, ಪೋಷಿಸಿದ ಆ ತಾಯಿಯಲ್ಲಿ ನಾನು ಪಾಪಭಾವನೆ ತಳೆಯುವುದು ಸಾಧ್ಯವೇ? 'ನನ್ನ ಮಗ—ನನ್ನ ಮಗನಲ್ಲ' ಎಂದು ನೀನು ಹೇಳಿದಾಗ ನನ್ನ ಬಾಳು–ಬದುಕು ಎಲ್ಲವೂ ಮಣ್ಣುಗೂಡಿಹೋಯಿತು.

ಇಂದು ನಿಮ್ಮೆಲ್ಲರನ್ನೂ ಬಿಟ್ಟು ಹೋಗುತ್ತಲಿದ್ದೇನೆ. ನನ್ನ ಪೂರ್ವಾರ್ಜಿತ ಪಾಪಫಲದಿಂದಲೇ ಅಲ್ಲವೇ ಇಂಥ ಅವಾಚ್ಯ ಅಸಹ್ಯ ಆರೋಪ ಕೇಳಬೇಕಾಯಿತು. ಆ ಪಾಪಫಲ ನಾನು ಅನುಭವಿಸಬೇಕು—ಅದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ನನ್ನೀ ಹಾಳು ಮುಖ ನಿಮಗೆ ಮತ್ತೆ ತೋರಿಸುವುದಿಲ್ಲ. ವಿಶಾಲವಾದ ಈ ಪೃಥ್ವಿಯಲ್ಲಿ ನಾನೊಬ್ಬ ಅನಾಮಧೇಯನಾಗಿ ಎಲ್ಲಿಯೋ ಅಡಗಿಕೊಳ್ಳುತ್ತೇನೆ. ದಯವಿಟ್ಟು ನನ್ನನ್ನು ಹುಡುಕಿಸುವ ಪ್ರಯತ್ನಮಾಡಬೇಡ.

ನನಗೆ ಎರಡು ಉಪಕಾರ ಮಾಡಬೇಕಾಗಿ ಅತ್ಯಂತ ವಿನಯದಿಂದ ಪ್ರಾರ್ಥಿಸಿಕೊಳ್ಳುತ್ತೇನೆ. ತಾಯಿ ವೃದ್ಧೆ—ದುಃಖದಿಂದ ಜೀರ್ಣವಾಗಿರುವ ಆ ಜೀವದ ಯೋಗಕ್ಷೇಮ ನೋಡಿಕೊಳ್ಳುವ ಹೊಣೆ ನಿನ್ನದು. ಅತ್ತಿಗೆ ಗಾಯತ್ರಿಯಂತೆ ಪರಿಶುದ್ಧಳು. ಪಾಪದ ಚಿಂತನೆಯನ್ನೂ ಆಕೆ ಮಾಡಿಲ್ಲ. ನಿನ್ನ ಮನಸ್ಸಿನ ಮಾಲಿನ್ಯ ನೀಗಿಕೊಂಡು ಆಕೆಯನ್ನು ಗೌರವದಿಂದ ನೀನು ಕಾಣಬೇಕು.

ರವಿಯನ್ನು ಬಿಟ್ಟು ಹೋಗುತ್ತಿದ್ದೇನೆ— ನಿಮ್ಮೆಲ್ಲರನ್ನೂ ಬಿಟ್ಟು ಹೋಗುತ್ತಿದ್ದೇನೆ. ಮನಸ್ಸು ಭಾರವಾಗಿದೆ. ಆದರೆ ನನ್ನ ದಾರಿಯಲ್ಲಿ

ನಾನು ನಡೆಯಲೇ ಬೇಕು. ಇದರಿಂದ ನನಗೂ ಶ್ರೇಯಸ್ಸು—ನಿಮಗೂ ಶ್ರೇಯಸ್ಸು.—ಶಂಕರ"

ಕಾಗದ ಮುಗಿಯುತ್ತ ಬಂದಂತೆ ಸುಬ್ರಹ್ಮಣ್ಯನಿಗೆ ಕಣ್ಣುಗತ್ತಲೆ ಕವಿಯುತ್ತ ಬಂದಿತು. 'ಅಮ್ಮ' ಎಂದು ಚೀರಿ ಸ್ಮೃತಿ ತಪ್ಪಿ ಕೆಳಗೆ ಬಿದ್ದುಬಿಟ್ಟ. ಅವನು ಚೀರಿದ ಧ್ವನಿ ಕೇಳಿ ಪಾರ್ವತಮ್ಮನವರು, ಗೌರಿ, ನಿಂಗವ್ವ ಓಡಿಬಂದರು.

ಪಾರ್ವತಮ್ಮನವರು ಮಗನನ್ನು ತೊಡೆಯ ಮೇಲೆ ಮಲಗಿಸಿ ಕೊಂಡು ಶೈತ್ಯೋಪಚಾರ ಮಾಡಿದರು. ನಿಂಗವ್ವ ಗಾಳಿ ಬೀಸಿದಳು. ಗೌರಿ ಚಕಿತಳಾಗಿ ನಿಂತಿದ್ದಳು.

ಮೂರ್ಛೆತಿಳಿದೆದ್ದ ಸುಬ್ರಹ್ಮಣ್ಯ ಕೈಗಳಲ್ಲಿ ಮುಖ ಮುಚ್ಚಿಕೊಂಡು ಗಟ್ಟಿಯಾಗಿ ಅಳಲುಪಕ್ರಮಿಸಿದ.

"ಏನಾಯಿತು ಸುಬ್ರಹ್ಮಣ್ಯ—ಏಕೆ ಅಳುತ್ತಿರುವೆ?"

"ನಾನು ಮಹಾ ಪಾಪಿಯಮ್ಮ. ಮಹಾ ಪಾಪಿ."

"ಆದದ್ದೇನು ಹೇಳಬಾರದೇ?"

"ಶಂಕರ ಹೊರಟು ಹೋದನಮ್ಮ."

"ಶಂಕರ ಹೊರಟು ಹೋದ! ಎಲ್ಲಿಗೆ?"

"ಎಲ್ಲಿಗೆಂದು ತಿಳಿಸಿಲ್ಲ."

"ಯಾವಾಗ ಬರುತ್ತಾನಂತೆ!"

ಸುಬ್ರಹ್ಮಣ್ಯ ಗೌರಿಯ ಕೈಗೆ ಕಾಗದವನ್ನಿತ್ತ. ಅವಳು ಓದಿದಳು. ಪಾರ್ವತಮ್ಮನವರು ತಲೆಯ ಮೇಲೆ ಕೈಹೊತ್ತು ಕುಳಿತರು. ಒಂದೊಂದೇ ಹನಿ ಕಣ್ಣಿನಿಂದ ಜಾರಲು ಮೊದಲಾಯಿತು.

"ಶಂಕರನ ಶೀಲ ಶಂಕಿಸಿದ ಪಾಪಿ ನಾನು....ಒಬ್ಬರನ್ನೂ ಒಂದು ಮಾತು ಆಡದ ಶಂಕರನಂಥ ನಿಷ್ಕಲ್ಮಷ ಚಿತ್ತನನ್ನು ನಿಷ್ಕಾರಣವಾಗಿ ಆಕ್ಷೇಪಿಸಿದೆ. ಗೌರಿಯ ಶೀಲ ಶಂಕಿಸಿದೆ."

ಎನ್ನುತ್ತಾ ಮೇಲಕ್ಕೆ ಎದ್ದು ನಿಂತ. ಪಾರ್ವತಮ್ಮನವರೂ ಗಾಬರಿಯಾಗಿ ಎದ್ದು ನಿಂತು ಅವನ ತೋಳು ಹಿಡಿದುಕೊಂಡು

"ಎಲ್ಲಿಗೆ ಹೊರಟೆ ಸುಬ್ಬೂ?"

"ಶಂಕರನನ್ನು ಕರೆದುಕೊಂಡು ಬರುವ ವರೆಗೆ ಈ ಮನೆಯೊಳಗೆ ನಾನು ಕಾಲಿಡುವುದಿಲ್ಲ."

"ಈ ವೃದ್ಧಾಪ್ಯದಲ್ಲಿ ನಾನು ಒಬ್ಬ ಮಗನನ್ನು ಕಳೆದುಕೊಂಡಿರು ವುದು ಸಾಲದೇ..........."

"ನಾನು ನಿನ್ನ ಮಗನಾಗುವುದಕ್ಕೆ ಅರ್ಹನಲ್ಲಮ್ಮ, ನಾನೊಬ್ಬ ಬ್ರಹ್ಮರಾಕ್ಷಸ."

"ತಾಯಿಯ ಕಣ್ಣಲ್ಲಿ ಮಕ್ಕಳೆಲ್ಲರೂ ಒಂದೇ."

"ಶಂಕರನನ್ನು ನಾನು ಬಿಟ್ಟಿರಲಾರೆ."

"ದುಡುಕಬೇಡ—ಹುಡುಕಿಸು—ನೀನೂ ಹುಡುಕು."

"ನಿಮಗೆಲ್ಲಾ ಈ ಹಾಳು ಮುಖ ಹೇಗೆ ತೋರಿಸಲಿ"

"ಕೆಟ್ಟಮಾತು ನಿನ್ನ ಬಾಯಿಂದ ಉಛಾಯಿಸಿ ಹೊರಟುಬಿಟ್ಟಿತು. ನಿನ್ನ ಮನಸ್ಸಿನಲ್ಲಿ ಆ ಭಾವನೆ ಇಲ್ಲವಲ್ಲ."

"ಇಲ್ಲ—ಖಂಡಿತವಾಗಿಯೂ ಇಲ್ಲ. ಗೌರಿ ನನಗೆ ಕೊಡುತ್ತಿದ್ದ ಹಿಂಸೆಯಿಂದ ನನ್ನ ಬುದ್ಧಿಕೆಟ್ಟಿತು. ದುಡುಕಿ ಕೆಟ್ಟಮಾತು ಆಡಿದೆ."

"ಆದದ್ದು ಆಯಿತು. ಶಂಕರನನ್ನು ಹುಡುಕಿಸು. ನನ್ನ ಕಂದ ನನ್ನು ನೋಡದೆ ಬಹಳ ದಿವಸ ಇರಲಾರೆ" ಎಂದೆದ್ದು ಹೊರಟು ಹೋದರು.

ಗೌರಿಯ ಹಸ್ತ ಮೃದುವಾಗಿ ಸುಬ್ರಹ್ಮಣ್ಯನನ್ನು ನೇವರಿಸುತ್ತಾ

"ಇಷ್ಟೆಲ್ಲಾ ಅನರ್ಥಕ್ಕೆ ನಾನು ಕಾರಣ—ಇದೆಲ್ಲಾ ನನ್ನ ಹಟ ಮಾರಿತನದ ಫಲ.—ನನ್ನನ್ನು ಕ್ಷಮಿಸಬಲ್ಲಿರಾ?"

"ಗೌರಿ—ಗೌರಿ—ನಿನ್ನ ಶೀಲ ಶಂಕಿಸಿದ ಪಾಪಿ ನಾನು ಗೌರಿ."

ಗೌರಿ ಅವನನ್ನು ಮೆಲ್ಲನೆಬ್ಬಿಸಿ ರೂಮಿಗೆ ಕರೆದೊಯ್ದು ರವಿಯನ್ನು ಅವನ ಕೈಗಿತ್ತಳು.

ಪಾರ್ವತಮ್ಮನವರು ತುಳಸೀಕಟ್ಟೆ ಸೇರಿಬಿಟ್ಟಿದ್ದರು. ಎದುರಿಗೆ ನಿಂಗವ್ವ.

ಪಾರ್ವತಮ್ಮನವರ ಮನಸ್ಸು ಎಲ್ಲೋ ಹಾರಾಡುತ್ತಿದ್ದುದು ಥಟ್ಟನೆ

"ನಾನಿನ್ನೂ ಬದುಕಿರಬೇಕಲ್ಲವೇನೇ ನಿಂಗೀ."

"ಔದ್ರಮ್ಮಣ್ಣಿ."

"ನನ್ನ ಬಾಳಬಟ್ಟಲು ತುಂಬಿದೆ ನಿಂಗೀ."

"ಸುಬ್ಬಪ್ಪ ನಿಮ್ಮಗಾ ಅಲ್ವರಾ?"

"ಅಲ್ಲವೆಂದೆನೆ?"

"ಆಯಪ್ಪನ್ನ ನೀವು ನೋಡ್ಕೊಳ್ಳಬೇಕ್ರಮ್ಮಣ್ಣಿ."

"ಶಂಕರ..........."

"ಸಂಕ್ರಪ್ಪ ಬತ್ತಾನೆ, ಚಿಂತೆ ಬುಟ್ಟುಬುಡಿ. ಅವ್ವನ್ನ ಬಿಟ್ಟು ಮಗ ಬಾಳ ದಿನಾ ಇರಾಕಿಲ್ಲ."

"ನನ್ನ ಕಂದ 'ಅಮ್ಮ' ಎಂದು ಕೂಗಿಕೊಂಡು ಓಡಿಬಂದರೆ ನಾನು ಇರಬೇಕಲ್ಲವೇ? ಹತ್ತಿರ ಬಾರೇ ನಿಂಗೀ, ನಿನ್ನ ಮುಟ್ಟಿಕೊಳ್ಳಬೇಕು ಎನಿಸುತ್ತದೆ."

ನಿಂಗವ್ವ ಬಂದು ಪಾರ್ವತಮ್ಮನವರ ಬಳಿ ಕುಳಿತಳು. ಪಾರ್ವತಮ್ಮ ಅವಳ ತೊಡೆಯ ಮೇಲೆ ಮುಖವಿಟ್ಟು ಗಟ್ಟಿಯಾಗಿ ಅತ್ತುಬಿಟ್ಟರು.

# ೪೧

ಶಂಕರ ಒಂದೇ ಸಮನಾಗಿ ನಡೆದಿದ್ದ.

ಡಿಸೆಂಬರ್ ತಿಂಗಳಿನ ಚಳಿಯೂ ಅವನ ಗಮನಕ್ಕೆ ಬಂದಿರಲಿಲ್ಲ.

'ಇಷ್ಟೇ ಅಲ್ಲವೇ ಜೀವನ.

ಈಗ ನಕ್ಕರೆ ಮರುಕ್ಷಣಕ್ಕೇ ಅಳು.

ಹಾಗೇ ಹುಟ್ಟು—ಸಾವು.

ಖ್ಯಾತಿ—ಅಪಖ್ಯಾತಿ.

ಯಾವುದೂ ಶಾಶ್ವತವಲ್ಲ—ಸ್ಥಿರವಲ್ಲ—ಅಮರವಲ್ಲ.

ಅಮರವಾದುದು ಯಾವುದು?

ಅಮರವಾದುದು ಇದೆಯೇ?

ಇದೆ—ಇದೆ—ತಾಯಿಯ ನಿಷ್ಕಳಂಕ ಪ್ರೇಮ. ಲೋಕದಲ್ಲಿ ಕೆಟ್ಟ ಹೆಂಗಸರಿರಬಹುದು—ಕೆಟ್ಟ ತಾಯಿಯಿಲ್ಲ.

ಅತ್ತಿಗೆಯ ನನ್ನ ಸಂಬಂಧಕ್ಕೆ ಅಣ್ಣ ಎಂಥ ವ್ಯಾಖ್ಯಾನ ಕೊಟ್ಟ!

ನಾನು ದುಃಖ—ನಿಂದೆ ಸಹಿಸಲಾರದೆ ಓಡಿ ಬಂದೆ!

ಗೌರತ್ತಿಗೆಯ ಗತಿಯೇನು?

ಇನ್ನಾದರೂ ಅಣ್ಣನಿಗೆ ವಿವೇಕ ಬರುವುದೇ?

ಅಣ್ಣಾ—ಅಣ್ಣಾ—ನಿನ್ನನ್ನು ತಂದೆಯೆಂದು ಭಾವಿಸಿಕೊಂಡು ಗೌರವಿಸಿ ಪೂಜಿಸುತ್ತಿದ್ದೆನಲ್ಲಾ—ಎಂಥ ಮಾತು ಆಡಿಬಿಟ್ಟೆ. ಈ ಮಾತು ಕೇಳಿಕೊಂಡು ನಾನು ಬದುಕಿರಬಹುದೇ.'

ಶಂಕರನ ಮನಸ್ಸು ಸಾವನ್ನು ಕುರಿತು ಚಿಂತಿಸತೊಡಗಿತು. ಆದರೆ ವಿವೇಕದ ಬೆಳಕು ದೂರ ನಿಲ್ಲಲಿಲ್ಲ.

'ಆತ್ಮಹತ್ಯೆ!

'ನಿರಪರಾಧಿ ನೀನು ಆತ್ಮಹತ್ಯೆ ಮಾಡಿಕೊಂಡರೆ ಅಪರಾಧ ಸ್ಥಿರವಾಗುತ್ತದೆ.

'ಸತ್ತು ಪಾರಾಗುವವನು ನೀನು—ಬದುಕಿರುವ ಗೌರಿಯ ಗತಿಯೇನು?

'ನಿರಪರಾಧಿನಿಯಾದ ಆ ಹೆಣ್ಣಾನ್ನು ನೀನೇ ಅಪರಾಧಿನಿ ಮಾಡು ವೆಯಾ?'

ಇಲ್ಲ—ಇಲ್ಲವೆಂದುಕೊಂಡು ಶಂಕರ ಮೈ ಕೊಡವಿದ.

ಬೆಳಗು ಹರಿಯುತ್ತ ಬಂದಿತ್ತು. ದೂರದಲ್ಲಿ ಹಿರೋಡೆ ರೈಲ್ವೆ ಸ್ಟೇಷನ್.

ಶಂಕರ ಬೆಂಗಳೂರಿಗೆ ಬಂದು ಸೇರಿದ.

ಬೆಂಗಳೂರು ದೊಡ್ಡ ಪಟ್ಟಣ—ಇಲ್ಲಿಯೇ ಏಕಿರಬಾರದು?

ಛೆ! ಛೆ! ಇಲ್ಲಿ ಅಣ್ಣಾನ ಗುರುತಿನವರು ಬಹಳ ಮಂದಿ ಇದ್ದಾರೆ. ಯಾರಾದರೂ ಗುರುತು ಹಿಡಿದರೆ ಮನೆಗೆ ಸುದ್ದಿ ಮುಟ್ಟುತ್ತದೆ.

ಮದರಾಸು ಗಾಡಿ ಸಿದ್ಧವಾಗಿತ್ತು.

ಅಲ್ಲಿಗೂ ಹೋಗಲು ಸಾಧ್ಯವಿಲ್ಲ. ಮಂಗಳೆ ಮದರಾಸಿನಲ್ಲಿದ್ದಾಳೆ!

ಪುಣೆಯ ಗಾಡಿ ಸಿದ್ಧವಾಗಿತ್ತು.

ಹುಬ್ಬಳ್ಳಿಗೆ ಬಂದಾಗ ರಾತ್ರಿ ಹನ್ನೊಂದು ಗಂಟೆ. ಕಿಸೆಯಲ್ಲಿದ್ದ ಹಣ ನೋಡಿಕೊಂಡ. ಇಪ್ಪತ್ತು ರೂಪಾಯಿಗಳು ಉಳಿದಿದ್ದುವು. ಈ ಹಣದಲ್ಲಿ ಪುಣೆ—ಮುಂಬಯಿ ಮುಟ್ಟಲು ಸಾಧ್ಯವಿಲ್ಲ.

ಶಂಕರನಿಗೆ ಥಟ್ಟನೆ ಶಾಂತರುದ್ರನ ನೆನಪಾಯಿತು. ಹಂಪೆ ತೋರಿಸುತ್ತೇನೆ ಬಾರೆಂದು ಕರೆದಿದ್ದ.

ಶಂಕರ ಹೊಸಪೇಟೆ ಸ್ಟೇಷನ್ ಮುಟ್ಟಿದಾಗ ಮಧ್ಯಾಹ್ನ ಹನ್ನೆರಡು ಗಂಟೆಯಾಗಿತ್ತು.

ಶಾಂತರುದ್ರನ ವಿಳಾಸ ಗೊತ್ತಿರಲಿಲ್ಲ. ಅವನ ಮಾವನವರು ಜಡೆ ಚನ್ನಬಸಪ್ಪನವರು ಪ್ರಸಿದ್ಧರು—ಅವರ ವಿಳಾಸ ತಿಳಿಯುವುದು ಕಷ್ಟವಾಗಲಿಲ್ಲ.

ಚನ್ನಬಸಪ್ಪನವರ ಅಂಗಡಿ ಮುಟ್ಟುವುದಕ್ಕೆ ತಡವಾಗಲಿಲ್ಲ. ಅಂಗಡಿಯಲ್ಲಿ ವಿರೂಪಾಕ್ಷಪ್ಪ ಒಬ್ಬನೇ ಕುಳಿತು ಲೆಕ್ಕ ಬರೆಯುತ್ತಿದ್ದ. ಶಂಕರ ನಮ್ರನಾಗಿ "ಜಡೆ ಚನ್ನಬಸಪ್ಪನವರ ಅಂಗಡಿ ಇದೇನೇ?" ಎಂದು ಕೇಳಿದ.

"ಹೌದು—ನೀವು ಯಾರನ್ನು ನೋಡಬೇಕು?"

"ಅವರ ಅಳಿಯಂದಿರು ಶಾಂತರುದ್ರಪ್ಪನವರನ್ನು ನೋಡಬೇಕು."

"ಚಿಕ್ಕ ಧಣಿಗಳು ಈಗ ತಾನೇ ಮನೆಗೆ ಹೋದರು."

"ಸ್ವಲ್ಪ ಹೇಳಿ ಕಳಿಸುವಿರಾ?"

"ಯಾರು ಬಂದಿದ್ದಾರೆ ಎಂದು ಹೇಳಬೇಕು.?"

"ತಾವರೆಕೆರೆಯಿಂದ ಯಾರೋ ಹಳೆಯ ಸ್ನೇಹಿತರು ಬಂದಿದ್ದಾರೆಂದು ತಿಳಿಸಿದರೆ ಸಾಕು."

ಮೇಜಿನ ಪಕ್ಕದಲ್ಲಿದ್ದ ಸಿಂಬಿ ತಲೆಗೇರಿಸಿ ವಿರೂಪಾಕ್ಷಪ್ಪ ಓಡಿ ಬಂದು " ಒಳಕ್ಕೆ ಬನ್ನಿ ಸ್ವಾಮಿ" ಎಂದು ಕರೆದ.

ಶಂಕರ ಕುಳಿತ ಮೇಲೆ "ನಾನೂ ಅಂಗಡಿ ಮುಚ್ಚುವ ಹೊತ್ತು. ಸ್ವಲ್ಪ ಕುಳಿತರೆ ನಾನೇ ಕರೆದುಕೊಂಡು ಹೋಗುತ್ತೇನೆ."

"ಆಗಬಹುದು."

ಶಂಕರನನ್ನು ಕೇಳದೆಯೇ ವಿರೂಪಾಕ್ಷಪ್ಪ ಹೊಟೇಲಿನಿಂದ ಕಾಫಿ ತರಿಸಿಕೊಟ್ಟು "ನೀವು ಬರುವ ವಿಷಯ ಚಿಕ್ಕಧಣಿಗಳಿಗೆ ಗೊತ್ತಿಲ್ಲವೆಂದು ಕಾಣುತ್ತದೆ."

"ಇಲ್ಲ–ನಾನು ತಿಳಿಸಲಿಲ್ಲ. ನೀವು ಅಂಗಡಿಯಲ್ಲಿ ಏನಾಗಿದ್ದೀರಿ?"

"ಕಾರಕೂನ."

"ಶಾಂತರುದ್ರಪ್ಪ ಅಂಗಡಿಯ ಮೇಲೆ ಕೂಡುತ್ತಾರೆಯೇ?"

"ಈಗ ಅವರೇ ಅಂಗಡಿ ನಡಸುವುದು. ಧರ್ಮರಾಯರು ಸ್ವಾಮಿ–ಬಡವರಾಧಾರಿ."

ವಿರೂಪಾಕ್ಷಪ್ಪ ಲೆಕ್ಕದ ಪುಸ್ತಕಗಳನ್ನು ಕಪಾಟನಲ್ಲಿಟ್ಟು ಬೀಗ ಹಾಕಿ, ಹೊರಗಿದ್ದ ಪ್ರಕಟನೆಯ ಹಲಗೆಗಳನ್ನು ಒಳಗೆ ತಂದಿಟ್ಟು ಅಂಗಡಿಯ ಬಾಗಿಲುಗಳನ್ನು ಹಾಕಿ ಶಂಕರನನ್ನು ಕರೆದುಕೊಂಡು ಹೊರಟ.

ಚನ್ನಬಸಪ್ಪನವರ ಅಂಗಡಿಗೂ ಮನೆಗೂ ನಾಲ್ಕೇ ಫರ್ಲಾಂಗು ದೂರ. ಭವ್ಯವಾದ ಅರಮನೆಯ ಮುಂದೆ ನಿಂತು ವಿರೂಪಾಕ್ಷಪ್ಪ, ಹೊರಬಾಗಿಲಿನಲ್ಲಿದ್ದ ಆಳನ್ನು "ಮಲ್ಲಾ, ಚಿಕ್ಕ ದಣ್ಯಾರು ಏನು ಮಾಡ್ತಿದ್ದಾರೆ?" ಎಂದು ಕೇಳಿದ.

"ಶಿವಪೂಜೆಗೆ ಕುಂತಿರ್ಬೇಕಪ್ಪ."

"ಯಾರೋ ಬಂದವ್ರೆ ಎಂತಾ ಹೇಳು."

ಮಲ್ಲಣ್ಣನ ಜತೆಯಲ್ಲಿಯೇ ಬಂದ ಶಾಂತರುದ್ರ ಗೆಳೆಯನನ್ನು ನೋಡಿ ಅಪ್ಪಿಕೊಂಡು "ಕೊನೆಗೂ ಬಂದೇ ಬಿಟ್ಟೆಯಲ್ಲಾ!" ಎಂದ.

"ಹೌದಪ್ಪಾ ಬಂದೆ. ನಿನ್ನ ಕಾರಕೂನರು ತುಂಬ ಉಪಕಾರ ಮಾಡಿದರು."

ವಿರೂಪಾಕ್ಷಪ್ಪ ಕಣ್ಣಿನಲ್ಲಿಯೇ ಶಂಕರನಿಗೆ ಕೃತಜ್ಞತೆ ಸೂಚಿಸಿದ.

ಶಾಂತರುದ್ರ ಶಂಕರನನ್ನು ಕರೆದೊಯ್ದು ಮಹಡಿಯ ಮೇಲೆ ಕೂಡಿಸಿ,

"ವೈರ್ ಮಾಡಬಾರದಾಗಿತ್ತೇನೋ ಶಂಕರ—ಸ್ಟೇಷನ್ನಿಗೆ ಕಾರು ತೆಗೆದುಕೊಂಡು ಬರುತ್ತಿದ್ದೆ."

"ನನ್ನದು ದೊಡ್ಡ ಕಥೆ ಶಾಂತರುದ್ರಾ—ನಿಧಾನವಾಗಿ ಹೇಳಬೇಕು. ಹೋಗು ನೀನು ಊಟ ಮುಗಿಸಿ ಬಾ."

"ನೀನು?"

"ನಾನು ಸಾವಕಾಶವಾಗಿ ಊಟ ಮಾಡುತ್ತೇನೆ."

"ಇಲ್ಲೇ ನೀರು ತರಿಸಿಕೊಡುತ್ತೇನೆ, ಸ್ನಾನಮಾಡು. ಊಟ ಇಲ್ಲಿಗೇ ಕಳಿಸಿಕೊಡುತ್ತೇನೆ."

"ಹಾಗೇ ಮಾಡು."

ಮಲ್ಲಣ್ಣನೇ ಶಂಕರನಿಗೆ ನೀರು ತಂದುಕೊಟ್ಟ. ಅವನೇ ಊಟವನ್ನೂ ತಂದು ನೀಡಿದ. ಶಂಕರ ಊಟದ ಶಾಸ್ತ್ರ ಮುಗಿಸಿ ಕುಳಿತ. ಶಾಂತರುದ್ರನೂ ಊಟ ಮುಗಿಸಿ ಬಂದು

"ಬೇಗ ಹೊರಡಬೇಕೆಂದು ನೀನು ಅವಸರ ಮಾಡಿದರೆ ನಾನು ಕಳಿಸುವುದಿಲ್ಲ ಶಂಕರ."

"ನಾನು ಬೇಗ ಹೋಗುವ ಹಾಗೇ ಇಲ್ಲ."

"ಹಾಗೆಂದರೆ!................"

"ನಾನು ನಿನ್ನ ಅತಿಥಿಯಾಗಿ ಬಂದಿಲ್ಲ ಶಾಂತರುದ್ರಾ. ನಿನ್ನ ಆಶ್ರಿತನಾಗಿ ಬಂದಿದ್ದೇನೆ. ಕೆಲಕಾಲ ನಾನು ಅಜ್ಞಾತವಾಸಮಾಡಬೇಕಾಗಿದೆ. ಹೊಸಪೇಟೆಯೇ ನನ್ನ ವಿರಾಟನಗರ."

"ತಮಾಷೆ ಮಾಡುವೆಯಾ ಶಂಕರ. ದೇವರು ನಿನಗೆ ಯಾವುದಕ್ಕೆ ಕಡಿಮೆಮಾಡಿದ್ದಾನೆ."

"ಅದೃಷ್ಟಕ್ಕೆ...."

"ಮನೆಯಲ್ಲಿ ಜಗಳವಾಯಿತೇ?"

ಶಂಕರ ಸೂಕ್ಷ್ಮವಾಗಿ ಮನೆಯಲ್ಲಿ ನಡೆದಿದ್ದುದನ್ನು ನಿರೂಪಿಸಿದ. ಅದನ್ನು ಕೇಳಿ ವಿಸ್ಮಯಗೊಂಡ ಶಾಂತರುದ್ರ

"ಸುಬ್ರಹ್ಮಣ್ಯನಿಗೆ ನಾನು ಕಾಗದ ಬರೆದು ವಿವೇಕ ಹೇಳುತ್ತೇನೆ."

"ಅಗತ್ಯವಿಲ್ಲ. ಆ ವಾತಾವರಣದಲ್ಲಿರಲು ನನಗೇ ಇಷ್ಟವಿಲ್ಲ. ಯಾರೂ ನನ್ನನ್ನು ಹೊರಗೆ ಹಾಕಿಲ್ಲ. ನಾನೇ ಹೊರಗೆ ಬಂದಿದ್ದೇನೆ."

"ಅಣ್ಣ ತಮ್ಮ ಎಷ್ಟು ಚೆನ್ನಾಗಿದ್ದಿರೋ ಶಂಕರ. ನಿಮ್ಮನ್ನು ನೋಡಿದರೆ ಸಂತೋಷವಾಗುತ್ತಿತ್ತು."

"ಇದನ್ನೇ ವಿಧಿಯೆಂದು ಹಿರಿಯರು ಕರೆಯುವುದು........ ನೀನು ನನಗೊಂದು ಉಪಕಾರ ಮಾಡಬೇಕು."

"ಹೇಳು."

"ನಾನು ಇಲ್ಲಿರುವ ವಿಷಯ ಅಣ್ಣನಿಗಾಗಲಿ, ಮನೆಯವರಿಗಾಗಲೀ ನೀನು ತಿಳಿಸಕೂಡದು."

"ಆಗಬಹುದು. ನನ್ನದೂ ಒಂದು ಕರಾರು."

"ಏನದು?"

"ನೀನು ಈ ಸ್ಥಳ ಬಿಟ್ಟು ಎಲ್ಲಿಗೂ ಹೋಗಕೂಡದು. ನೀನು ಹೋಗುವ ಹಾಗಿದ್ದರೆ ಇಲ್ಲಿಂದ ನೇರವಾಗಿ ಊರಿಗೆ ಹೋಗಬೇಕು."

"ವರ್ಷಗಟ್ಟಳೆ ನಿನ್ನ ಆಶ್ರಯದಲ್ಲೇ ಇರಲೇ?—ನೀನೂ ಸ್ವತಂತ್ರ ನಲ್ಲ."

"ನಾನು ಸ್ವತಂತ್ರನಾಗಿದ್ದೇನೆ. ಅಂಗಡಿಯ ವ್ಯವಹಾರವೆಲ್ಲ ನನ್ನದೇ ಆಗಿದೆ."

"ಆದರೂ ನಾನು ನಿನ್ನ ವಿಶ್ವಾಸವನ್ನು ದುರುಪಯೋಗಪಡಿಸಿ ಕೊಳ್ಳಲು ಇಷ್ಟಪಡುವುದಿಲ್ಲ."

"ನನ್ನ ಕರಾರಿಗೆ ನೀನು ಒಪ್ಪದಿದ್ದರೆ ನಿನ್ನ ಕರಾರಿಗೂ ನಾನು ಒಪ್ಪುವುದಿಲ್ಲ."

"ಒಂದು ಮಾರ್ಗವನ್ನು ನಾನು ಸೂಚಿಸುತ್ತೇನೆ, ಅದಕ್ಕಾದರೂ ಒಪ್ಪುವೆಯಾ?"

"ಹೇಳು ನೋಡೋಣ."

"ನಾನು ಇಲ್ಲೇ ಇರುತ್ತೇನೆ. ನಿನ್ನ ಅಂಗಡಿಯಲ್ಲಿ ನೌಕರನಾಗಿ ಇರುತ್ತೇನೆ. ನನಗೆ ಸಂಬಳ ಗೊತ್ತುಮಾಡು. ಹೆಚ್ಚು ಬೇಡ—ಹೊಟ್ಟೆ ಬಟ್ಟೆಗಾದರೆ ಸಾಕು."

ಶಾಂತರುದ್ರನ ಕಣ್ಣಿನಲ್ಲಿ ನೀರುಮಿಡಿಯಿತು.

"ನನ್ನಂಥ ನಾಲ್ಕು ಜನಕ್ಕೆ ಆಶ್ರಯ ಕೊಡುವ ಯೋಗ್ಯತೆ ಇರುವ ನಿನ್ನನ್ನು ಹೇಗೆ ನೌಕರನಾಗಿ ಮಾಡಿಕೊಳ್ಳಲಿ ಶಂಕರ?"

"ನಾನು ಕಂಡವರ ಸೇವೆ ಮಾಡಿ ಹೊಟ್ಟೆ ಹೊರೆಯುವುದಕ್ಕಿಂತ ನಿನ್ನ ಸೇವೆ ಮಾಡುವುದೊಳ್ಳೆಯದಲ್ಲವೇ?"

"ನೌಕರಿ–ಸಂಬಳ ಬೇಡ ಶಂಕರ. ನಿನಗೂ ಹೊತ್ತು ಹೋಗ ಬೇಕು. ಅಂಗಡಿಯಲ್ಲಿ ಬಂದು ಕುಳಿತುಕೋ. ನಿನಗೆ ತೋರಿದುದನ್ನು ಮಾಡು. ನಾನು ವಿರೂಪಾಕ್ಷೀಗೆ ಹೇಳಿರುತ್ತೇನೆ—ನಿನಗೆಷ್ಟು ಹಣ ಬೇಕಾದರೂ ತೆಗೆದುಕೋ."

"ಹಾಗೇ ಆಗಲಿ. ನಾನು ರೂಮ್ ಮಾಡಿಕೊಂಡು ಹೊಟೇಲಿನಲ್ಲಿರುವುದಕ್ಕೆ ನೀನು ಸಮ್ಮತಿಸಬೇಕು."

"ಈ ಮನೆ ತುಂಬ ವಿಶಾಲವಾಗಿದೆ ಶಂಕರ."

"ಮನೆಗಿಂತಲೂ ನಿನ್ನ ಮನಸ್ಸು ವಿಶಾಲವಾಗಿದೆ ಶಾಂತರುದ್ರಾ. ಅಣ್ಣನನ್ನು ಕಳೆದುಕೊಂಡೆನಲ್ಲಾ ಎಂದು ನಾನು ಚಿಂತಿಸುತ್ತಿರುವಲ್ಲಿ ಬೇರೊಬ್ಬ ಅಣ್ಣ ಸಿಕ್ಕಿದಂತಾಯಿತು. ನಮ್ಮ ವಿಶ್ವಾಸಕ್ಕೆ ಯಾವ ಅಡ್ಡಿಯೂ ಬರದಿರುವಂತೆ ನಾವು ಎಚ್ಚರವಾಗಿರುವುದು ಒಳ್ಳೆಯದು. ದಯೆಯಿಟ್ಟು ನನ್ನ ಸಲಹೆ ಒಪ್ಪಿಕೋ."

"ಈ ಊರು ಮೈಸೂರು, ಬೆಂಗಳೂರಿನ ಹಾಗಲ್ಲ ಶಂಕರ. ಒಳ್ಳೆಯ ರೂಮುಗಳು ಸಿಕ್ಕುವುದಿಲ್ಲ. ಒಂದು ಕೆಲಸ ಮಾಡು. ನಮ್ಮ ಅಂಗಡಿಯ ಮೇಲೆ ರೂಮುಗಳಿವೆ. ಅವುಗಳಲ್ಲಿ ಒಂದನ್ನು ಬಿಡಿಸಿ ಕೊಡುತ್ತೇನೆ. ಅಲ್ಲಿರು. ಸ್ನಾನಕ್ಕೆ ಅನುಕೂಲವಾಗುವಂತೆ ಮಹಡಿಯ

ಮೇಲೆ ಸ್ನಾನಗೃಹವೂ ಇದೆ. ನೀರು ತಂದು ಹಾಕುವುದಕ್ಕೆ ಯಾರ ನ್ನಾದರೂ ಗೊತ್ತುಮಾಡಿಕೊಂಡರೆ ಆಯಿತು. ಗೋಪಾಲಾಚಾರಿ ಹೋಟಲಿನಿಂದ ಊಟ ತಿಂಡಿ ತಂದುಕೊಡುವುದಕ್ಕೂ ವ್ಯವಸ್ಥೆ ಮಾಡು ತ್ತೇನೆ."

"ಹಾಗೇ ಆಗಲಪ್ಪಾ."

"ಕಾಲೇಜು ಬಿಟ್ಟ ಹಾಗೇನು?"

"ಇನ್ನೆಲ್ಲಿ ಕಾಲೇಜು—ಇಗೋ ಜೀವನದ ವಿಶಾಲ ಕಾಲೇಜಿಗೆ ಬಂದಿದ್ದೇನೆ. ನೀನೇ ನನ್ನ ಪ್ರಥಮ ಪ್ರೊಫೆಸರ್."

"ಶಂಕರ, ಎಂಥ ಕಷ್ಟ ಬಂತಪ್ಪ ನಿನಗೆ."

"ಇದು ಕಷ್ಟವಲ್ಲ ಶಾಂತರುದ್ರಾ. ಸುತ್ತಿಗೆಯ ಪೆಟ್ಟು ಬಿದ್ದ ಹೊರತೂ ಕಲ್ಲು ಲಿಂಗವಾಗುವುದಿಲ್ಲ—ನನ್ನ ವಿಷಯ ಹಾಗಿರಲಿ. ನಿಮ್ಮ ಮಾವನವರು ಊರಿನಲ್ಲಿಲ್ಲವೇ?"

"ಇಲ್ಲ. ಆ ಗುರು ಬಂದಿದ್ದ. ಹನುಮಕೊಂಡಕ್ಕೆ ಮಾವನವ ರನ್ನು ಕರೆದುಕೊಂಡು ಹೋಗಿದ್ದಾನೆ."

"ಯಾವಾಗ ಬರುತ್ತಾರೆ?"

"ಗುರುದೃಷ್ಟಿ ಯಾವಾಗ ಹೊಸಪೇಟೆ ಮೇಲೆ ಬೀಳುತ್ತದೋ ಆವಾಗ. ಶಿಷ್ಯನಿದ್ದಲ್ಲಿ ಗುರು—ಗುರುವಿದ್ದಲ್ಲಿ ಶಿಷ್ಯ. ನಮ್ಮ ಗುರೂನ ನೀನು ನೋಡಬೇಕು ಶಂಕರ."

"ಇಲ್ಲೇ ಇರುತ್ತೇನಲ್ಲಾ—ನೋಡಿಯೇ ನೋಡುತ್ತೇನೆ."

"ಹಂಪೆಗೆ ಯಾವಾಗ ಹೋಗೋಣ."

"ನೀನು ಕರೆದುಕೊಂಡು ಹೋದಾಗ ಬರಲು ನಾನು ಸಿದ್ಧ."

"ನಾಳೆ ಬೇಡ. ನಾಡಿದ್ದು ಹೋಗೋಣ."

"ನೀನು ಈಗ ಅಂಗಡಿಗೆ ಹೋಗಬೇಕಲ್ಲವೇ?"

"ನಾಲ್ಕು ಗಂಟೆಗೆ ಹೋದರಾಯಿತು. ನೀನೂ ಬರುವಿಯೇನು?"

"ಆಗಬಹುದು. ಒಬ್ಬನೇ ಇಲ್ಲಿ ಕುಳಿತುಕೊಂಡು ನಾನೇನು ಮಾಡಲಿ."

"ರಾತ್ರಿಯೂ ನಿದ್ದೆಯಿಲ್ಲ. ಮಲಗುವಯೇನು ?"

"ನಿದ್ದೆ ಬರುವುದಿಲ್ಲ ಶಾಂತರುದ್ರ."

"ನೀನು ಮನಸ್ಸಿಗೆ ಸಮಾಧಾನ ತಂದುಕೊಳ್ಳಬೇಕು ಶಂಕರ. ನಿನ್ನ ತಾಯಿಯವರನ್ನು ಜ್ಞಾಪಿಸಿಕೊಂಡರೆ ನನಗೆ ತುಂಬ ದುಃಖವಾಗುತ್ತದೆ."

"ನಾನು ಹೊರಟು ಬರುವಾಗ ಅವರನ್ನು ಕಣ್ತುಂಬ ನೋಡಲಾಗಲಿಲ್ಲ. ಮಲಗಿ ನಿದ್ರಿಸುತ್ತಿದ್ದರು. ಅಲ್ಲಿಯೇ ಕ್ಷಣಕಾಲ ನಿಂತೆ–ಅವರ ಪಾದ ಮುಟ್ಟುವ ಪುಣ್ಯವೂ ನನಗೆ ಲಭಿಸಲಿಲ್ಲ. ದೂರದಲ್ಲಿಯೇ ನಿಂತು ಕೈ ಮುಗಿದೆ. ನನ್ನ ತಾಯಿದೇವಿಯ ದರ್ಶನ ನನಗೆ ಲಭಿಸುತ್ತದೋ ಇಲ್ಲವೋ?"

"ಎಲ್ಲಾ ನೇರವಾಗುತ್ತದೆ ಸುಮ್ಮನಿರು. ಯೋಚನೆ ಮಾಡಬೇಡ."ಎಂದು ಶಾಂತರುದ್ರ ಸಮಾಧಾನ ಹೇಳಿದ.

ಸಂಜೆಗೆ ಶಂಕರ, ಶಾಂತರುದ್ರಪ್ಪನ ಜತೆ ಅವನ ಅಂಗಡಿಗೆ ಹೋದ. ಶಾಂತರುದ್ರ ವಿರೂಪಾಕ್ಷನನ್ನು ಕರೆದು

"ವಿರೂಪಣ್ಣಾ, ಇವರು ನನ್ನ ಹಳೆಯ ಸ್ನೇಹಿತರು—ನಮ್ಮೂರಿನವರು. ಇನ್ನು ಮೇಲೆ ಇಲ್ಲೇ ಇರುತ್ತಾರೆ. ಅಂಗಡಿಯಲ್ಲಿ ಬಂದು ಕೂಡುತ್ತಾರೆ. ಅವರು ಕೇಳಿದಷ್ಟು ಹಣ ಕೊಟ್ಟು ನನ್ನ ಲೆಕ್ಕಕ್ಕೆ ಹಾಕು."

ಶಂಕರ ಕೂಡಲೆ "ವಿರೂಪಾಕ್ಷಪ್ಪ, ನಾನು ಅಂಗಡಿಯಲ್ಲಿ ಕೆಲಸಕ್ಕೆ ಬರುತ್ತೇನೆ. ನನಗೆ ಕೆಲಸ ಕಲಿಸಿಕೊಡುವುದು ನಿಮ್ಮ ಭಾರ." ಎಂದ.

ವಿರೂಪಾಕ್ಷಪ್ಪ ಕಕ್ಕಾಬಿಕ್ಕಿಯಾದ.

ವಿರೂಪಾಕ್ಷಪ್ಪನ ಅವಸ್ಥೆ ನೋಡಲಾರದೆ ಶಾಂತರುದ್ರ

"ವಿರೂಪಣ್ಣಾ, ಶಂಕರರಾಯರನ್ನ ಅಂಗಡಿಯ ಮೇಲಿನ ರೂಮಿನಲ್ಲಿರಲು ಹೇಳಿದ್ದೇನೆ. ಮೇಲೆ ಏನಿದೆ?"

"ಮಾಲು ತುಂಬಿದೆ ಧಣಿಯರೇ."

"ಎಲ್ಲಾ ರೂಮುಗಳಲ್ಲಿಯೂ ಮಾಲು ಇದೆಯೇ?"

"ಎರಡು ರೂಮು ಖಾಲಿ ಇದೆ."

"ಆ ರೂಮುಗಳನ್ನು ಶುಚಿ ಮಾಡಿಸಿ, ನಾಳೆಯೇ ಸುಣ್ಣ ಹೊಡಿಸಿ•

ಶಂಕರರಾಯರಿಗೆ ಮಂಚ, ಮೇಜು, ಕುರ್ಚಿ ಹಾಕಿಸಿ ಕೊಡಿ. ಒಳ್ಳೆಯ ಗಾದಿ, ದಿಂಬು ಮಾಡಿಸಿ ಮಂಚದ ಮೇಲೆ ಹಾಕಬೇಕು. ಮಚ್ಛರದಾನಿ (ಸೊಳ್ಳೆಯ ಪರದೆ) ಅಂಗಡಿಯಲ್ಲಿದೆಯಲ್ಲವೇ?"

"ಇದೆ ಧಣಿ."

"ಕಟ್ಟಿಸಿ. ಅವರ ಸ್ನಾನಕ್ಕೆ ನೀರು ತಂದು ಹಾಕಲು ಯಾರನ್ನಾದರೂ ಗೊತ್ತು ಮಾಡಿ. ಊಟ ತಿಂಡಿಗೆ ಗೋಪಾಲಾಚಾರಿ ಹೋಟಲಿನಲ್ಲಿ ವ್ಯವಸ್ಥೆ ಮಾಡಿ."

"ಹಾಗೇ ಆಗಲಿ ಧಣಿ."

ಶಂಕರ ನಸುನಗುತ್ತಾ

"ಇದು ಅಜ್ಞಾತವಾಸವಲ್ಲ ಶಾಂತರುದ್ರಾ—ರಾಜವಾಸ."

"ನಿಮ್ಮ ತಾಯಿ ಹಾಕಿದ ಒಂದು ತುತ್ತು ಅನ್ನದ ತೂಕವಿಲ್ಲ ಇದೆಲ್ಲಾ ಶಂಕರ" ಎಂದು ಶಾಂತರುದ್ರ ಹೇಳಿದ.

೪೨

ಸುಬ್ರಹ್ಮಣ್ಯನ ಚಿತ್ತಕ್ಕೆ ಶಾಂತಿಯೇ ಬರಲೊಲ್ಲದು. ನಿಂತರೆ, ಕುಳಿತರೆ, ಮಲಗಿದರೆ ಅವನಿಗೆ ಶಂಕರನ ಚಿಂತೆ. ಊಟಕ್ಕೆ ಕುಳಿತರೆ ಕಣ್ತುಂಬ ನೀರು ಕೂಡುವುದು. 'ಶಂಕರೂ ಉಪವಾಸ ಇದ್ದಾನೆಯೋ ಏನೋ' ಎಂದುಕೊಂಡು ಎದ್ದು ಬಿಡುವನು. ರಾತ್ರಿ ನಿದ್ದೆಯಲ್ಲಿಯೂ ಶಂಕರನ ಚಿಂತೆಯೇ. ಕನವರಿಸಿಕೊಂಡು ಬಾಯಿಗೆ ಬಂದಂತೆ ಮಾತ ನಾಡುವನು. ಒಂದೊಂದು ದಿನ ಗೌರಿ ಗಾಬರಿಗೊಂಡು ಅತ್ತೆಯನ್ನೆ ಬ್ಬಿಸಿ ಕರೆದುಕೊಂಡು ಬರುವಳು. ತಾಯಿ ಮಗನನ್ನು ತಟ್ಟಿ ಮಲಗಿ ಸುವರು.

ಶಂಕರ ತಾವರೆಕೆರೆ ಬಿಟ್ಟು ನಾಲ್ಕು ತಿಂಗಳಾಗಿದ್ದುವು. ಅವನ ಸುದ್ದಿ ಸಮಾಚಾರ ತಿಳಿದಿರಲಿಲ್ಲ. ಅವನನ್ನು ಹುಡುಕುವ ಸುಬ್ರಹ್ಮ ಣ್ಯನ ಪ್ರಯತ್ನವೆಲ್ಲಾ ನಿಷ್ಫಲವಾಗಿತ್ತು.

ಸುಬ್ರಹ್ಮಣ್ಯನ ಮನಸ್ಥೈರ್ಯ ಕೆಡುತ್ತ ಬಂದಿತು. ದಿನವೆಲ್ಲಾ ಯಾರ ಸಂಗಡವೂ ಮಾತನಾಡದೆ ಮುಕ್ಕಳಂತೆ ಕುಳಿತುಬಿಡುವನು.

ಸುಬ್ರಹ್ಮಣ್ಯನ ಸ್ಥಿತಿ ಪಾರ್ವತಮ್ಮನವರ ಜಂಘಾಬಲವನ್ನೇ ಉಡು ಗಿಸಿಬಿಟ್ಟಿತು. ಅವನ ಪಕ್ಕದಲ್ಲಿ ಕುಳಿತು ಸವಿಯಾಗಿ ಮಾತನಾಡಿ ಅವನ ಮನಸ್ಸನ್ನು ಬೇರೆಯೆಡೆಗೆ ತಿರುಗಿಸಲೆತ್ನಿಸುತ್ತಿದ್ದರು. ಸುಬ್ರಹ್ಮಣ್ಯ ಎಲ್ಲಾ ಕೇಳಿ, ಶೂನ್ಯದೃಷ್ಟಿ ಬೀರಿ "ಶಂಕರ ಬರಲಿಲ್ಲ—ಅವನಿನ್ನೂ ಊಟಮಾಡಿಲ್ಲ" ಎನ್ನುವನು. ಪಾರ್ವತಮ್ಮನವರ ಕರುಳು ಕಿತ್ತು ಬರುತ್ತಿತ್ತು.

ಗೌರಿಯನ್ನು ಕಂಡರೆ ಸುಬ್ರಹ್ಮಣ್ಯ ಭಯಪಡುತ್ತಿದ್ದ. ಅವಳು ಮುಟ್ಟಲೆತ್ನಿಸಿದರೆ "ಬೇಡ ಗೌರಿ–ನನ್ನನ್ನು ಮುಟ್ಟಬೇಡ. ನಾನು ಪಾಪಿ. ನಿನ್ನ ಕೈಗಳನ್ನು ಮಲಿನ ಮಾಡಿಕೊಳ್ಳಬೇಡ" ಎನ್ನುತ್ತಿದ್ದ.

ಮನೋರೋಗ ದಳ್ಳುರಿಯಂತೆ ಸುಬ್ರಹ್ಮಣ್ಯನ ಮನಸ್ಸಿನಲ್ಲಿ ವ್ಯಾಪಿಸಿ ಸುಡಲಾರಂಭಿಸಿತ್ತು.

ಪಾರ್ವತಮ್ಮ, ಗೌರಿ ಇಬ್ಬರೂ ನಾನಾ ವ್ರತ, ಪೂಜೆ, ಉಪವಾಸಗಳನ್ನಾರಂಭಿಸಿದರು. ನಿಂಗವ್ವ ನಿತ್ಯ ಬೀರೇದೇವರ ದರ್ಶನ ಮಾಡಿ ಸ್ವಾಮಿಯಲ್ಲಿ ಮೊರೆಯಿಟ್ಟು ಬರುತ್ತಿದ್ದಳು.

ರವಿಗೆ ವರ್ಷ, ಎಂಟು ತಿಂಗಳು ಕಳೆದುವು. ಅವನು ಮುದ್ದು ಮುದ್ದಾಗಿ ಒಂದೊಂದು ಮಾತನ್ನಾಡುತ್ತಿದ್ದ. ಸುಬ್ರಹ್ಮಣ್ಯ ಅವನನ್ನೇ ದಿಟ್ಟಿಸಿ ನೋಡಿ "ನೀನು ನಿರ್ಭಾಗ್ಯಕಣೋ ರವಿ. ನಿನ್ನ ಚಿಕ್ಕಪ್ಪ ಇದ್ದಿದ್ದರೆ ತಲೆಯ ಮೇಲೆ ಕೂರಿಸಿಕೊಂಡು ನಿನ್ನ ಮೆರಸುತ್ತಿದ್ದ" ಎನ್ನುತ್ತಿದ್ದ. ತಂದೆಯ ಮಾತು ಕೇಳಿ ರವಿ ಅಳುವುದಕ್ಕೆ ಉಪಕ್ರಮಿಸುತ್ತಿದ್ದ. ಗೌರಿ ಮಗುವನ್ನು ಸಮಾಧಾನ ಮಾಡುತ್ತಿದ್ದರೆ ಸುಬ್ರಹ್ಮಣ್ಯ

"ರವಿ—ನೀನು ಯೋಗ್ಯನಾಗಬೇಕಪ್ಪ. ತಾಯಿಗೆ ಒಳ್ಳೆಯ ಮಗನಾಗು—ಹೆಂಡತಿಗೆ ಒಳ್ಳೆಯ ಗಂಡನಾಗು. ನನ್ನ ಹಾಗೆ ಆಗಬೇಡ-ನಿನ್ನ ಚಿಕ್ಕಪ್ಪನ ಹಾಗೆ ಆಗಬೇಕು ನೋಡು."

"ನೀವು ಏನಾಗಿದ್ದೀರೆಂದು ಹೀಗೆ ಮಾತನಾಡುತ್ತಿರುವಿರಿ ?"

"ನಾನು ಕೊಳಚೆಗೆ ಬಿದ್ದೆ ಗೌರಿ—ಮೈಯೆಲ್ಲಾ ಹೊಲಸು ಮೆತ್ತಿಕೊಂಡಿದೆ."

"ಚೆನ್ನಾಗಿ ಸೋಪು ಹಾಕಿ ಮೈ ತೊಳೆದುಕೊಂಡರಾಯಿತು."

"ಹಾಗೇ ನನ್ನ ಮನಸ್ಸೂ ಅಶುಚಿಯಾಗಿದೆ."

"ಇಲ್ಲ ಸ್ವಾಮಿ. ಚಿನ್ನದಂತೆ ಪರಿಶುದ್ಧವಾಗಿದೆ ನಿಮ್ಮ ಮನಸ್ಸು."

"ನಿನ್ನನ್ನೇ ಕುಲಟೆಯೆಂದು ನಾನು ಭಾವಿಸಿದೆನಲ್ಲಾ ಗೌರಿ."

"ಅದೊಂದು ಕೆಟ್ಟ ಗಳಿಗೆ. ನೀವು ಅದಕ್ಕೆ ಜವಾಬ್ದಾರರಲ್ಲ."

"ನೀನು ದೊಡ್ಡವಳು ಗೌರಿ—ಒಳ್ಳೆಯ ತಾಯಿಯ ಮಗಳು—ನೀನು ನನ್ನ ಕೈ ಹಿಡಿಯಬಾರದಾಗಿತ್ತು."

"ನಾನು ತುಂಬ ಪುಣ್ಯಮಾಡಿ ನಿಮ್ಮ ಕೈ ಹಿಡಿದೆ."

"ಅಯ್ಯೋ ನಿನ್ನ ಪುಣ್ಯವೇ—ಇದು ಯಾವ ಪುಣ್ಯ ಗೌರಿ."

"ದಯೆಯಿಟ್ಟು ಹೀಗೆ ಮಾತಾಡಬೇಡಿ, ನನ್ನ ಮನಸ್ಸಿಗೆ ವಿಪರೀತ ಸಂಕಟವಾಗುತ್ತದೆ."

"ನನ್ನನ್ನು ನಂಬಿದವರಿಗೆ ಸಂಕಟ, ದುಃಖವನ್ನಲ್ಲದೆ ನಾನು ಇನ್ನೇನು ಕೊಡಬಲ್ಲೆ ಗೌರಿ."

“ಎಲ್ಲವನ್ನೂ ಕೊಡಬಲ್ಲಿರಿ. ಮನಸ್ಸುಮಾಡಿದರೆ ನಿಮಗೇನು ಸಾಧ್ಯವಿಲ್ಲ.”

“ಏನು ಸಾಧ್ಯವಿಲ್ಲ ! ಎಲ್ಲವೂ ಸಾಧ್ಯ !! ತಮ್ಮನನ್ನು ಮನೆಬಿಟ್ಟು ಹೊರದೂಡಿ, ತಾಯಿಯನ್ನು ಆಳವರಿಯದ ದುಃಖದ ಮಡುವಿನಲ್ಲಿ ಕೆಡಹುವುದು ಸಾಧ್ಯ! ಸಾಧ್ವಿಯಾದ ನಿನ್ನ ಶೀಲ ಶಂಕಿಸುವುದು ಸಾಧ್ಯ! ದುಷ್ಟ ಜೀವನಕ್ಕೆ ನಿರ್ಲಜ್ಜೆಯಿಂದ ಧುಮುಕುವುದು ಸಾಧ್ಯ! ಎಲ್ಲವೂ ಸಾಧ್ಯ!!”

ಗೌರಿ ಅವನ ಉದ್ಗಾರ ಕೇಳಲಾರದೆ ಒಳಕ್ಕೆ ಹೋಗಿಬಿಡುತ್ತಿದ್ದಳು.

ಒಂದು ಮಧ್ಯಾಹ್ನ ಗೌರಿ ರಟ್ಟೆ ಹಿಡಿದಿದ್ದ ರವಿಯನ್ನು ರಮಿಸುತ್ತಾ ಮನೆಯ ವೆರಾಂಡದಲ್ಲಿ ಓಡಾಡುತ್ತಿದ್ದಳು. ಅಂಚೆಯಾಳು ಒಂದು ಕಾಗದ ತಂದುಕೊಟ್ಟು

“ದೊಡ್ಡ ಅಮ್ಮಾವರ ಹೆಸರಿಗೆ ಕಾಗದ ಬಂದಿದೆಯಮ್ಮ” ಎಂದು ಹೇಳಿ ಹೋದ. ದೇವರ ಮನೆಯಲ್ಲಿದ್ದ ಅತ್ತೆಯ ಬಳಿ ಗೌರಿ ಹೋಗಿ

“ನಿಮ್ಮ ಹೆಸರಿಗೆ ಕಾಗದ ಬಂದಿದೆಯಮ್ಮ” ಎಂದಳು.

“ಯಾರದು ? ಒಡೆದು ಓದು ಗೌರಾ.”

ಗೌರಿ ಕಾಗದ ಒಡೆದು ‘ಶಂಕರನ ಕಾಗದವಮ್ಮ’ ಎಂದು ಓದಲಾರಂಭಿಸಿದಳು.

“ಭಗವತೀ ಸ್ವರೂಪಳಾದ ತಾಯಿದೇವಿಯ ಚರಣ ಸನ್ನಿಧಿಗೆ ಬಾಲಕನ ಸಾಷ್ಟಾಂಗ ನಮಸ್ಕಾರಗಳು.

ಅಮ್ಮ,

ನಿಮ್ಮನ್ನು ಬಿಟ್ಟು ಬಂದು ನಾಲ್ಕು ತಿಂಗಳು ಕಳೆದು ಹೋಗಿವೆ. ಅಲ್ಲಿಂದ ಹೊರಡುವಾಗ ನನ್ನಲ್ಲಿದ್ದ ನಿರ್ಧಾರ ಹೊರಟ ಮೇಲೆ ಉಳಿಯಲಿಲ್ಲ. ಊರಿಗೆ ಹಿಂದಿರುಗಲು ನೂರು ಬಾರಿ ಮನಸ್ಸು ಮಾಡಿದೆ. ಆದರೆ ಈಗ ನಾನು ಊರಿಗೆ ಬಂದೇನು ಮಾಡಬೇಕು?

ನನ್ನ ವಿಷಯದಲ್ಲಿ ನಿಮಗೆ ತುಂಬಾ ಚಿಂತೆಯಾಗಿರಬೇಕು.

ನಿಮಗೆ ಯೋಚನೆಯಾಗಬಾರದೆಂದೇ ಈ ಕಾಗದ ಬರೆಯುತ್ತಿದ್ದೇನೆ. ನಾನು ಸುಖವಾಗಿದ್ದೇನೆ. ನಿಮ್ಮ ಆಶೀರ್ವಾದ ಬಲದಿಂದ ಯಾವ ಕೊರತೆಯೂ ಇಲ್ಲ. ಆರೋಗ್ಯವಾಗಿದ್ದೇನೆ.

ಶ್ರೀ|| ಅಣ್ಣನವರ ಮನಸ್ಸು ಈಗ ತಹಬಂದಿಗೆ ಬಂದಿರಬಹುದು. ಅವರ ಅಂತಃಕರಣ ನಾನು ಬಲ್ಲೆ. ಅದಕ್ಕೇ ನನ್ನ ಮನಸ್ಸಿನಲ್ಲಿ ಅವರ ಬಗ್ಗೆ ಕಿಂಚಿತ್ತಾದ ಕೋಪವೂ ಇಲ್ಲ. ನನಗೆ ಲೋಕಾನುಭವ ಬರಲೆಂದೇ ಜಗನ್ಮಾತೆ ಈ ಅಜ್ಞಾತವಾಸ ವಿಧಿಸಿದ್ದಾಳೆ. ಮಾ|| ಅತ್ತಿಗೆ ತುಂಬ ನೊಂದಿದ್ದಾರೆ. ಅವರ ಮನಸ್ಸಿಗೆ ಸಮಾಧಾನ ನೀಡಲು ನೀವಲ್ಲದೆ ಇನ್ನು ಯಾರು ಸಮರ್ಥರು. ನಿಂಗಜ್ಜಿಗೆ ನನ್ನ ನಮಸ್ಕಾರ ತಿಳಿಸಿ.

ರವಿಯನ್ನು ನೋಡಲು ತವಕಪಡುತ್ತಿದ್ದೇನೆ. ತುಂಟ ನನ್ನನ್ನು ಒಮ್ಮೆಯಾದರೂ ಜ್ಞಾಪಿಸಿಕೊಳ್ಳುತ್ತಾನೆಯೆ?

ಎಲ್ಲ ಬಲ್ಲ ನಿಮಗೆ ಹೆಚ್ಚೇನೂ ಬರೆಯಲಿ. ನಿಮ್ಮನ್ನು ಬಿಟ್ಟಿರುವುದು ಎಷ್ಟು ಕಷ್ಟವೆಂಬುದು ಈಗ ಅನುಭವಕ್ಕೆ ಬರುತ್ತದೆ. ಪ್ರಿಯವಸ್ತು ಸಮೀಪದಲ್ಲಿರುವಾಗ ಅದರ ಬೆಲೆ ನಮಗೆ ಗೊತ್ತಾಗುವುದಿಲ್ಲ.

ಅಣ್ಣ, ಅತ್ತಿಗೆಗೆ ನನ್ನ ನಮಸ್ಕಾರ ತಿಳಿಸಿ. ಅವರಿಬ್ಬರ ಜೀವನ ಸುಖಪ್ರದವಾದರೆ ನನ್ನ ಜನ್ಮ ಸಾರ್ಥಕವಾಗುತ್ತದೆ. ಈಗೇನೋ ಕತ್ತಲೆ ವ್ಯಾಪಿಸಿವೆ—ಕತ್ತಲೆ ಜಾರಲೇ ಬೇಕು, ಬೆಳಕು ಮೂಡಲೇ ಬೇಕು.

ಇಂತು ನಿಮ್ಮ ಕರುಣೆಯ ಕಂದ—ಶಂಕರ"

"ಶಂಕರ–ಶಂಕರ-ನನ್ನ ಶಂಕರನ ಕಾಗದ!"

ಎಂದು ಪಾರ್ವತಮ್ಮನವರು ಕಾಗದವನ್ನು ಕೈಗೆ ತೆಗೆದುಕೊಂಡು ಅದನ್ನೇ ಅಪ್ಪಿ ಮುದ್ದಿಟ್ಟರು. ಅವರ ಉತ್ಸಾಹಕ್ಕೆ ಮೇರೆಯೇ ಇರಲಿಲ್ಲ. ಕಾಗದವನ್ನೆತ್ತಿಕೊಂಡು ಸುಬ್ರಹ್ಮಣ್ಯನ ರೂಮಿಗೆ ಹೋಗಿ ಅವನ ಕೈಗಿತ್ತು "ಓದು–ಓದು ಸುಬ್ಬೂ" ಎಂದರು.

ತಮ್ಮನ ಕಾಗದ ನೋಡಿ ಸುಬ್ರಹ್ಮಣ್ಯನ ಮುಖವರಳಿತು. ಕಾಗದ

ವನ್ನು ಓದಿ ಆನಂದಬಾಷ್ಪ ಸುರಿಸಿದ.

"ದೇವರು ಅವನನ್ನು ಚೆನ್ನಾಗಿ ಇಡಲಿ. ಆರೋಗ್ಯವಾಗಿದ್ದಾನಂತಮ್ಮ— ನಮ್ಮೆಲ್ಲರನ್ನೂ ಜ್ಞಾಪಿಸಿಕೊಳ್ಳುತ್ತಿದ್ದಾನೆ—ನನ್ನ ವಿಷಯದಲ್ಲಿ ಅವನಿಗೆ ಕೋಪವಿಲ್ಲವಂತೆ!"

"ಯಾವ ಊರಿನಿಂದ ಬರೆದಿದ್ದಾನೆ ನೋಡು ಸುಬ್ಬು."

ಸುಬ್ರಹ್ಮಣ್ಯ ಕಾಗದವನ್ನು ತಿರುಗಿಸಿನೋಡಿ

"ಗೊತ್ತಾಗುವುದಿಲ್ಲ. ಅಂಚೆಯ ಸೀಲು ಮಸಿ ಮುದ್ದೆಯಾಗಿದೆ."

"ಕಾಗದದಲ್ಲಿ ಊರಿನ ಹೆಸರು ಬರೆದಿಲ್ಲವೇ?"

"ಇಲ್ಲ—ನಾವು ಹುಡುಕಿಕೊಂಡು ಬರಬಾರದೆಂದು ಊರಿನ ಹೆಸರೇ ಅವನು ಕೊಟ್ಟಿಲ್ಲ."

"ನನ್ನ ಕಂದ ಚೆನ್ನಾಗಿದೆಯಲ್ಲ—ಅಷ್ಟೇ ಸಾಕು."

ಎಂದು ಸಂತೋಷದ ಸುದ್ದಿಯನ್ನು ಸಿಂಗಮ್ಮನಿಗೆ ತಿಳಿಸಲು ಓಡಿ ಹೋದರು. ಗೌರಿ ಮೆಲ್ಲನೆ ಗಂಡನ ಸಮೀಪಕ್ಕೆ ಬಂದು,

"ಶಂಕರನ ಕಾಗದ ಓದಿದಿರಾ?" ಎಂದು ಕೇಳಿದಳು.

"ಓದಿದೆ. ಏಕೆ?"

"ಅಣ್ಣ ಅತ್ತಿಗೆ ಜೀವನ ಸುಖಪ್ರದವಾದರೆ ನನ್ನ ಜನ್ಮ ಸಾರ್ಥಕವಾಗುತ್ತದೆ ಎಂದು ಬರೆದಿದ್ದಾನೆ."

"ಹೌದು ಗೌರಿ, ತನಗಾಗಿ ಅವನು ಯಾವತ್ತೂ ಏನನ್ನೂ ಬಯಸಿದವನಲ್ಲ. ನಾನು ಕಳಿಸುತ್ತಿದ್ದ ಹಣದ ಒಂದು ಭಾಗವನ್ನು ಶ್ರೀಧರನಿಗೆ ತಿಳಿಯದಂತೆ ಅವನಿಗೆ ಮುಟ್ಟಿಸುತ್ತಿದ್ದ. ತ್ಯಾಗದ ಬಗ್ಗೆ ಎಲ್ಲರೂ ಮಾತನಾಡುತ್ತಾರೆ—ಆದರೆ ತ್ಯಾಗವನ್ನು ಆಚರಿಸುತ್ತಿದ್ದವನು ನಮ್ಮ ಶಂಕರ."

"ಇನ್ನಾದರೂ ಮನಸ್ಸಿಗೆ ಸಮಾಧಾನಮಾಡಿಕೊಳ್ಳುವಿರಲ್ಲವೇ?"

"ಶಂಕರನ ಪಾದ ಹಿಡಿದು ನನ್ನ ಅಪರಾಧಕ್ಕೆ ಕ್ಷಮೆ ಕೇಳಿದಲ್ಲದೆ ನನ್ನ ಮನಸ್ಸಿಗೆಲ್ಲಿ ಶಾಂತಿ ಗೌರಿ?"

"ಹಾಗೆನ್ನಬೇಡಿ ಅವನು ಚಿಕ್ಕವನು—ನೀವು ದೊಡ್ಡವರು. ದೊಡ್ಡವರು ಚಿಕ್ಕವರಿಗೆ ನಮಸ್ಕಾರ ಮಾಡುವುದು ಅಶ್ರೇಯಸ್ಸು."

"ಇಲ್ಲ ಗೌರಿ—ಅವನೇ ದೊಡ್ಡವನು, ನಾನು ಚಿಕ್ಕವನು. ವಯಸ್ಸಿನ

ಜತೆಯಲ್ಲಿ ಹಿರಿಮೆಯೂ ಬರುತ್ತದೆಯೇ? ಧ್ರುವ, ಶುಕ, ಪ್ರಹ್ಲಾದ ವಯಸ್ಸಿನಲ್ಲಿ ಚಿಕ್ಕವರಾದರೇನು—ಗುಣದಲ್ಲಿ ದೊಡ್ಡವರಲ್ಲವೇ?"

"ಶಂಕರ ನಿಮ್ಮ ತಮ್ಮ—ನಿಮ್ಮ ಮಗ."

"ಹೌದು ಗೌರಿ ಅವನು ನನ್ನ ಮಗ—ನಮ್ಮ ಮಗ."

ಗಂಡನ ನುಡಿ ಕೇಳಿ ಗೌರಿ ನಲಿದಳು.

## ೪೩

ಶಾಸ್ತ್ರಿಗಳೂ ನಿರ್ವಿಣ್ಣರಾಗಿದ್ದರು. ಶ್ರೀಧರನ ಮುಖವೂ ಕಳಾಹೀನವಾಗಿತ್ತು. ಯಾವುದೋ ಚಿಂತೆ ಇಬ್ಬರನ್ನೂ ಪ್ರಬಲವಾಗಿ ಕಾಡುತ್ತಿತ್ತು. ಶಾಸ್ತ್ರಿಗಳೇ ಮೌನ ಮುರಿದ,

"ಹೇಗಾದರೂ ಆಗಲಿ. ಕಾಲೇಜ್ ತೆಗೆಯುವ ವೇಳೆಗೆ ನೀವು ಬಂದು ಬಿಡಿ ಶ್ರೀಧರ್" ಎಂದರು.

"ಹೇಗೆ ಸಾರ್ ಬರುವುದು. ತಿಂಗಳಿಗೆ ಎಂಭತ್ತು ತೊಂಭತ್ತು ರೂಪಾಯಿಯಿಲ್ಲದೆ ನನ್ನ ರಥ ಸಾಗುವುದಿಲ್ಲ."

"ಈ ವರ್ಷ ಕಷ್ಟಪಟ್ಟರೆ ಡಿಗ್ರಿ ಸಿಗುತ್ತದೆ. ಇಷ್ಟು ವರ್ಷಗಳ ಶ್ರಮವನ್ನು ಅನ್ಯಾಯವಾಗಿ ಕಳೆದುಕೊಳ್ಳುವಿರಲ್ಲಾ."

"ಇಷ್ಟೇ ಲಭ್ಯವೆಂದುಕೊಂಡು ತೃಪ್ತನಾಗುತ್ತೇನೆ."

"ಡಿಗ್ರಿ ಸುಲಭವಾಗಿ ದೊರೆಯುತ್ತದೆ. ರ್‍ಯಾಂಕೂ ಬರಬಹುದು. ನನ್ನ ಮಾತು ಕೇಳಿ. ಮುಂದಿನ ವರ್ಷ ನಮ್ಮ ಮನೆಯಲ್ಲಿ ಇದ್ದುಬಿಡಿ. ಫೀಸು ಅರ್ಧ ವಿನಾಯಿತಿ ಸಿಕ್ಕುವಂತೆ ಮಾಡೋಣ. ಉಳಿದ ಖರ್ಚು ವೆಚ್ಚ ಹೇಗೋ ಪೂರೈಸತ್ತೆ."

"ನಿಮ್ಮನ್ನು ನಾನು ಬಹಳ ಸುಲಿಯುತ್ತಿದ್ದೇನೆ ಸಾರ್."

"ಹಾಗೆ ನೀವು ಭಾವಿಸಿದರೆ ನನ್ನ ಮನಸ್ಸಿಗೆ ತುಂಬಾ ನೋವಾಗುತ್ತದೆ. ನನ್ನ ಸಲಹೆ ಒಪ್ಪಿಗೆ ತಾನೆ?"

"ಊರಿಗೆ ಹೋಗಿ ಕಾಗದ ಬರೆಯುತ್ತೇನೆ ಸಾರ್. ತಂದೆಯವರನ್ನು ಒಂದು ಮಾತು ಕೇಳಬೇಕು."

"ರಜಾ ಮುಗಿದ ಕೂಡಲೆ ನೀವು ಬರದಿದ್ದರೆ ನಾನೇ ನಿಮ್ಮೂರಿಗೆ ಬಂದು ನಿಮ್ಮನ್ನು ಇಲ್ಲಿಗೆ ಕರೆದುಕೊಂಡು ಬರಬೇಕಾಗುತ್ತದೆ."

ಶಾಸ್ತ್ರಿಗಳ ನಿರ್ವ್ಯಾಜ ಕರುಣೆ ಶ್ರೀಧರನನ್ನು ಅರೆಮೂಕನನ್ನಾಗಿ ಮಾಡಿತು.

"ಈಚೆಗೆ ಶಂಕರರಾಯರ ವಿಷಯವೇನೂ ತಿಳಿಯಲಿಲ್ಲವೇ?"

"ಇಲ್ಲ–ತಾಯಿಗೆ ಅವನು ಕಾಗದ ಬರೆದ ಮೇಲೆ ಅವನ ವಿಷಯ ತಿಳಿದು ಬಂದಿಲ್ಲವಂತೆ!"

"ಎಂಥ ಅನ್ಯಾಯವಾಯಿತು ಶ್ರೀಧರ್. ಅವರ ಅಣ್ಣಂದಿರು ಸಿಕ್ಕಿದ್ದರೇ?"

"ಇಲ್ಲ. ಕಾಗದ ಬರೆದಿದ್ದರು."

"ಊರಿಗೆ ಹೋಗುವ ಮುನ್ನ ನೀವೇಕೆ ತಾವರೆಕೆರೆಗೆ ಹೋಗಿ ಶಂಕರರಾಯರ ತಾಯಿಯವರನ್ನು ನೋಡಿ ಹೋಗಬಾರದು."

"ಆ ವಿಷಯ ನನ್ನ ಮನಸ್ಸಿಗೂ ಹೊಳೆಯಿತು. ಆದರೆ ಆ ತಾಯಿಯನ್ನು ನೋಡಲು ನನಗೆ ಧೈರ್ಯ ಸಾಲದು. ನನ್ನನ್ನು ನೋಡಿದರೆ ಅವರಿಗೆ ಶಂಕರನ ನೆನಪು ಮರುಕಳಿಸುತ್ತದೆ. ನಾನೇ ವೃಥಾ ಅವರಿಗೆ ಮನಃಕ್ಲೇಶವನ್ನುಂಟುಮಾಡಿದಂತಾಗುತ್ತದೆ."

"ಈ ಘಟನೆ ನನ್ನನ್ನೂ ತುಂಬ ಅಲುಗಾಡಿಸಿಬಿಟ್ಟಿದೆ ಶ್ರೀಧರ್. ಶಂಕರ ಯಾವ ಅಪರಾಧವನ್ನೂ ಮಾಡಿಲ್ಲವೆಂದು ನನ್ನ ಅಂತರ್ವಾಣಿ ಹೇಳುತ್ತಿದೆ. ಅಪರಾಧಮಾಡದಿರುವವರು ಶಿಕ್ಷೆಗೆ—ಇಂಥ ಘೋರ ಶಿಕ್ಷೆಗೆ ಗುರಿಯಾಗುವುದು ಯಾವ ಧರ್ಮ–ಯಾವ ನ್ಯಾಯ?"

"'ವಿಧಿ'ಯೆಂದುಕೊಂಡು ಸಮಾಧಾನ ತಂದುಕೊಳ್ಳಬೇಕು ಸಾರ್."

"ಈ 'ವಿಧಿ'ಯ ಚಲನವನ್ನು ಮನುಷ್ಯ ಬದಲಾಯಿಸಬಲ್ಲ."

"ಬದಲಾಯಿಸಬಲ್ಲನೇ!"

"ನಿಸ್ಸಂದೇಹವಾಗಿ. ವಿಧಿ ದುರ್ಬಲರನ್ನು ಮಾತ್ರ ಕಬಳಿಸಬಲ್ಲುದು. ಸಬಲರ ತಂಟೆಗೆ ಅದು ಹೋಗುವುದಿಲ್ಲ—ನಾಯಮಾತ್ಮಾ ಬಲಹೀನೇನ ಲಭ್ಯಃ."

"ವಿಧಿ ದುರ್ಬಲರನ್ನು ಕಾಡಿಸುತ್ತದೆ; ಸಬಲರು ವಿಧಿಯನ್ನು ಕಾಡಿಸುತ್ತಾರೆ."

"ಉಪನಿಷತ್ತು ಹೇಳುವ ಬಲಾಢ್ಯತೆ ಆ ಬಗೆಯದಲ್ಲ. ಒಂದು ದೃಷ್ಟಿಯಲ್ಲಿ ವಿಚಾರ ಮಾಡಿದರೆ ಜಗತ್ತಿನಲ್ಲಿ ದೌರ್ಬಲ್ಯವೆಂಬುದೇ ಇರಬಾರದು."

"ಹೇಗೆ ಸಾರ್. ಪ್ರತಿಯೊಬ್ಬ ಮನುಷ್ಯನೂ 'ನನ್ನ ಕೈಯಲ್ಲಿ ಇಷ್ಟೇ ಆಗುವುದು. ಇದಕ್ಕಿಂತ ಹೆಚ್ಚಿನ ಜವಾಬ್ದಾರಿ ನಾನು ನಿರ್ವಹಿಸಲಾರೆ' ಎಂದುಕೊಳ್ಳುವುದಿಲ್ಲವೇ?"

"ಹಾಗೆ ಭಾವಿಸುವುದು ಅವನ ತಪ್ಪು—ಅಜ್ಞಾನ. ಪರಿಸ್ಥಿತಿಯ ಪ್ರಭಾವಕ್ಕೆ ಸಿಕ್ಕಿ ಮನುಷ್ಯ ತನ್ನ ಶಕ್ತಿ ಇಷ್ಟೇ ಎಂದು ನಿರ್ಧರಿಸುತ್ತಾನೆ. ನಿಜವಾಗಿ ಅವನ ಶಕ್ತಿ ಅಷ್ಟರಲ್ಲಿ ಮುಗಿದುಹೋಗುತ್ತದೆಯೇ? ತನ್ನ ಶಕ್ತಿಯ ಪೂರ್ಣ ಕಲ್ಪನೆ ಮನುಷ್ಯನಿಗೆ ಬಂದು ಅವನು 'ನನ್ನ ಶಕ್ತಿ ಇಷ್ಟೇ— ಇದಕ್ಕಿಂತ ನಾನು ಮುಂದೆ ಹೋಗಲಾರೆ' ಎಂದು ನಿರ್ಧರಿಸಿದಾಗ ಅವನ ಮಾತು ಒಪ್ಪಿಕೊಳ್ಳಬಹುದು. ಮನುಷ್ಯ ತನ್ನಲ್ಲಿ ಸುಪ್ತವಾಗಿರುವ ಪೂರ್ಣಶಕ್ತಿಯನ್ನರಿಯಲು ಪ್ರಯತ್ನಿಸುತ್ತಾನೆಯೇ? ನನ್ನದೇ ಒಂದು ಅನುಭವ ಹೇಳುತ್ತೇನೆ ಕೇಳಿ. ಮೊದಲಿನಿಂದಲೂ ನನಗೂ ಗಣಿತಕ್ಕೂ ಎಣ್ಣೆ ಸೀಗೇಕಾಯಿಯೇ. ತುಲನಾತ್ಮಕ ದೃಷ್ಟಿಯಿಂದ ನಾನು ದರ್ಶನಗಳನ್ನು ಅಭ್ಯಾಸಮಾಡಲಾರಂಭಿಸಿದ ಮೇಲೆ ಪಾಶ್ಚಾತ್ಯ ತತ್ತ್ವಜ್ಞಾನವನ್ನು ಅರ್ಥಮಾಡಿಕೊಳ್ಳುವುದು ಅತ್ಯಗತ್ಯವಾಯಿತು. ಆಧುನಿಕ ಪಾಶ್ಚಾತ್ಯ ತತ್ತ್ವಜ್ಞಾನ ಈಗಂತೂ ಗಣಿತಮಯವಾಗಿದೆ. ರಸೆಲ್, ವೈಟ್‌ಹೆಡ್, ಐನ್‌ಸ್ಟೀನರನ್ನು ಅರ್ಥಮಾಡಿಕೊಳ್ಳಬೇಕಾದರೆ ಗಣಿತಶಾಸ್ತ್ರಪ್ರಾವೀಣ್ಯತೆ ಅತ್ಯಾವಶ್ಯಕವಾಗುತ್ತದೆ. ಮೂರು ನಾಲ್ಕು ವರ್ಷಗಳ ಕೆಳಗೆ ನಾನು ಗಣಿತಾಭ್ಯಾಸ ಆರಂಭಿಸಿದೆ. ಸತತ ಪ್ರಯತ್ನದಿಂದ ಎರಡು ವರ್ಷಗಳಲ್ಲಿ ಸಾಕಷ್ಟು ಸಿದ್ಧಿಯನ್ನೂ ಗಳಿಸಿಕೊಂಡೆ. ಗಣಿತಾಭ್ಯಾಸ ನನಗೆ ಸಾಧ್ಯವಿಲ್ಲವೆಂದು ನಾನು ನಿರಾಶನಾಗಿದ್ದರೆ ಈ ಸಿದ್ಧಿ ದೊರೆಯುತ್ತಿರಲಿಲ್ಲ. ಎಲ್ಲ ಚೇತನಗಳೂ ನಮ್ಮಲ್ಲಿ ಸುಪ್ತವಾಗಿ ಅಡಗಿರುತ್ತವೆ. ವೀಣೆಯಲ್ಲಿ ಎಲ್ಲ ರಾಗಗಳೂ ಅಡಕವಾಗಿಲ್ಲವೇ ಹಾಗೆ.\ ನಮಗೆ ಬೇಕಾದ ಸ್ವರಗಳನ್ನು ಮೀಟಿ ಒಂದು ರಾಗ ಸೃಷ್ಟಿಮಾಡುತ್ತೇವೆ. ವೀಣೆಯಿಂದ ಕಲ್ಯಾಣಿ ರಾಗ ಹೊರಟಿತೆಂದು, ಅದರಲ್ಲಿ ತೋಡಿ ಹೊರಡಲು ಸಾಧ್ಯವಿಲ್ಲವೇ?"

"ಪ್ರತಿಯೊಬ್ಬ ಮನುಷ್ಯ ಪ್ರತಿಯೊಂದು ಕೆಲಸವನ್ನೂ ಮಾಡಬಲ್ಲ ಎಂದು ಪ್ರತಿಪಾದಿಸುತ್ತಿರುವಿರಾ ?"

"ಹೌದು ಅದೇ ನನ್ನ ಅಭಿಮತ."

"ಹಾಗಾದರೆ ಎಲ್ಲ ವೈಣಿಕರೂ ವೀಣೆ ಶೇಷಣ್ಣನವರಾಗುವುದಿಲ್ಲ ವೇಕೆ ಸಾರ್?"

"ಶೇಷಣ್ಣನವರ ಸಾಧನೆ, ತಪಸ್ಸು ಉಳಿದವರಲ್ಲಿ ಇಲ್ಲ."

"ಸಾಧನೆಯ ವಿಷಯವೇ ತಾವು ಪ್ರತಿಪಾದಿಸುತ್ತಿರುವಿರಿ— ಸ್ಫೂರ್ತಿಗೆ ಸ್ಥಾನವೇ ಇಲ್ಲವೇ? ಶೇಷಣ್ಣನವರ ಸ್ಫೂರ್ತಿ ಇತರರಿಗೆ ಬರುವುದು ಸಾಧ್ಯವೇ?"

"ಶೇಷಣ್ಣನವರಿಗೆ ಸ್ಫೂರ್ತಿ ಹೇಗೆ ಬರುತ್ತದೆ ವಿಚಾರಮಾಡೋಣ. ಯೋಗಸಾಧನೆ ನಮಗೆ ಮೊಟ್ಟಮೊದಲು ಹೇಳಿಕೊಡುವುದು ಮನಸ್ಸನ್ನು ಬರಿದುಮಾಡಿಕೊಳ್ಳುವ ವಿಧಾನ. / ತುಂಬಿದ ಪಾತ್ರೆಯ ಒಳಗೆ ನಾವು ಏನನ್ನೂ ಹಾಕುವುದಕ್ಕಾಗುವುದಿಲ್ಲ; ಪಾತ್ರೆ ಬರಿದಾಗಿದ್ದರೆ ಬೇಕಾದದ್ದು ತುಂಬಬಹುದು. | ಸಾಧಕ ತನ್ನ ಮನಸ್ಸು ಬರಿದು ಮಾಡಿಕೊಂಡು, ಒಂದೇ ವಿಷಯದ ಮೇಲೆ ಉತ್ಕಟ ಚಿಂತನೆ ಮಾಡುವಾಗ, ಆ ವಿಷಯದ ವಿವಿಧ ರೂಪರೇಷೆಗಳು ಭಾಸವಾಗುತ್ತವೆ. ಎಲ್ಲರೂ ಸಿನೀಮಾಕ್ಕೆ ಹೋಗುತ್ತೇವೆ. ತೆರೆಯ ಮೇಲೆ ಬರುವ ಎಲ್ಲ ದೃಶ್ಯಗಳನ್ನೂ ಎಲ್ಲರೂ ನೋಡುತ್ತಾರೇನು? ಕೆಲಕೆಲವು ದೃಶ್ಯಗಳು ಎಲ್ಲರ ಗಮನವನ್ನೂ ಅತಿ ಕ್ರಮಿಸಿ ಮುಂದೆ ಹೋಗುತ್ತದೆ. ಆದರೆ ಮೂವಿಯೋಲಾ ಮುಂದೆ ಕುಳಿತು ಅದೇ ಚಿತ್ರ ನೋಡುವ ತಂತ್ರಜ್ಞ ಎಲ್ಲ ದೃಶ್ಯಗಳನ್ನೂ ಗಮನಿ ಸಿರುತ್ತಾನೆ. ಅವನ ಮನಸ್ಸಿನಲ್ಲಿ ಆ ಚಿತ್ರವಲ್ಲದೆ ಬೇರೆ ವಿಷಯವಿರುವು ದಿಲ್ಲ—ಮತ್ತು ಅವನು ಆ ಚಿತ್ರದ ಮೇಲೆ ಪೂರ್ಣವಾಗಿ ಮನಸ್ಸು ನೆಡು ತ್ತಾನೆ. ಯಾವನಲ್ಲಿ ಹೆಚ್ಚು ಏಕಾಗ್ರತೆಯಿದೆಯೋ ಅವನಿಗೆ ಹೆಚ್ಚು ವಿಷಯಗಳು ಭಾಸವಾಗುತ್ತವೆ."

"ನಿಮ್ಮದು ರಾಷ್ಟ್ರಕ್ಕೇ ಶಕ್ತಿ ತುಂಬುವ ವಿಚಾರಲಹರಿ ಸಾರ್."

"ಇದು ನನ್ನದಲ್ಲಪ್ಪ. ಸಾವಿರಾರು ವರ್ಷಗಳಿಂದ ನಮ್ಮ ಜನ ಹೇಳುತ್ತ ಬಂದಿದ್ದಾರೆ. ನವೀನತೆಯನ್ನರಸುವ ನಮ್ಮ ಜನ ನಿತ್ಯ ನವೀನವಾದ ಈ ವಿಷಯವನ್ನು ಉಪೇಕ್ಷಿಸುತ್ತಾರೆ."

ಶ್ರೀಧರ ನಿರ್ಧಾರದಿಂದ

"ಹೇಗಾದರೂ ಈ ವರ್ಷ ಡಿಗ್ರಿ ತೆಗೆದುಕೊಂಡು ಬಿಡುತ್ತೇನೆ ಸಾರ್. ಇನ್ನು ಅನುಮಾನ ಮಾಡುವುದಿಲ್ಲ."

"ಬಹಳ ಸಂತೋಷ ಶ್ರೀಧರ್. ಡಿಗ್ರಿಯಿಂದ ಜೀವನ ಸಾರ್ಥಕ್ಯ ವಾಗುವುದೆಂದು ನಾನು ನಂಬಿಲ್ಲ. ಆದರೆ ಹಿಡಿದ ಯಾವ ಕೆಲಸವನ್ನೂ ಅರ್ಧಾಂಕಿತವಾಗಿ ಬಿಡಬಾರದು. ಡಿಗ್ರಿ ತೆಗೆದುಕೊಳ್ಳಬೇಕೆಂದು ನೀವು ಹೊರಟಿರಿ. ಡಿಗ್ರಿ ತೆಗೆದುಕೊಂಡು ಬಿಡಬೇಕು."

"ನಿಜ ಸಾರ್. ನಿಮ್ಮ ವಾದ ಒಪ್ಪಿದೆ."

"ಮನೆಯಲ್ಲಿ ನಿಮಗಾಗಿ ರೂಮು ಕಾದಿಡುತ್ತೇನೆ."

"ಆ ವಿಷಯ ಹಿಂದಿನಿಂದ ತಿಳಿಸುತ್ತೇನೆ."

"ನನ್ನ ವಿಷಯದಲ್ಲಿ ಇನ್ನೂ ಸಂಕೋಚವೇ. ಆಗಲಿ ಎಂದು ಒಪ್ಪಿಕೊಂಡು ನನಗೆ ನೆಮ್ಮದಿಯನ್ನುಂಟುಮಾಡಿ."

ಆಗಲೆಂದು ಶ್ರೀಧರ ಒಪ್ಪಿಕೊಳ್ಳದೆ ನಿರ್ವಾಹವೇ ಇರಲಿಲ್ಲ.

# ೪೪

ಶಂಕರನ ನಿತ್ಯ ಜೀವನ ಸುಗಮವಾಗಿತ್ತು. ಅವನಿಗೆ ಯಾವ ಕೊರತೆಯೂ ಆಗದಂತೆ ಶಾಂತರುದ್ರ ವ್ಯವಸ್ಥೆ ಮಾಡಿದ್ದ.

ದೇಹದ ಹಸಿವಿಗೆ ಅನ್ನ ಸಿಕ್ಕಿತ್ತು.

ಮನಸ್ಸು ಹಸಿವಿನಿಂದ ಕಾತರಿಸುತ್ತಿತ್ತು.

ಶಂಕರ ನಾಲ್ಕಾರು ಬಾರಿ ಹಂಪೆಗೆ ಹೋಗಿ ಬಂದಿದ್ದ. ವಿಜಯ ನಗರದ ಕನ್ನಡ ಸಂಸ್ಕೃತಿಯ ಅವಶೇಷಗಳನ್ನು ಕಂಡು ಅವನು ಕಣ್ಣೀರಿಟ್ಟಿದ್ದ.

ಒಮ್ಮೆ ವೈಭವದಿಂದ ಬಾಳಿ, ದೇಶವಿದೇಶಗಳ ಪ್ರವಾಸಿಗರ ಕಣ್ಮನ ಸೂರೆಗೊಂಡ ವಿಜಯನಗರ ಇಂದು ಹಾಳುಹಂಪೆಯಾಗಿತ್ತು. ಚಕ್ರವರ್ತಿ ಒಡ್ಡೋಲಗ ಮಾಡಿದೆಡೆಯಲ್ಲಿ ಮುಳ್ಳುಗಿಡಗಳು ಬೆಳೆದುಕೊಂಡಿದ್ದುವು; ರಾಣಿವಾಸ ನಿರ್ಮಾನುಷವಾಗಿ ಭೀಕರವಾಗಿತ್ತು; ನೂರಾರು ದೇವದೇವತೆಗಳು ಕೈಕಾಲು ಮುರಿದುಕೊಂಡು ಬೀದಿಬೀದಿಗಳಲ್ಲಿ ನರಳುತ್ತ ಬಿದ್ದಿದ್ದರು; ವಿರೂಪಾಕ್ಷನ ಮಂದಿರವಲ್ಲಿ ತೆಂಗಿನಕಾಯಿ ವ್ಯಾಪಾರ ನಡೆಯುತ್ತಿತ್ತು; ವಿದ್ಯಾರಣ್ಯರ ಸಮಾಧಿ ಕತ್ತಲೆಯಲ್ಲಿ ಹುದುಗಿ ಹೋಗಿತ್ತು.

ಸಾಮ್ರಾಜ್ಯಗಳು ಅಳಿಯುತ್ತವೆ.

ಮನುಷ್ಯ ಅಳಿಯುತ್ತಾನೆ.

ಉಳಿಯುವುದೇನು?

ಯಾವುದು ಶಾಶ್ವತ? ಯಾವುದು ಅವಿನಾಶಿ?

ಈ ಪ್ರಶ್ನೆಗಳ ಜೊತೆಗೆ ಶಂಕರನಿಗೆ ವೈಯುಕ್ತಿಕ ಚಿಂತೆ. ನಾನು ಸಾಧಿಸಿದ್ದೇನು?—ಇಲ್ಲಿಗೆ ಬಂದು ಹೊಟ್ಟೆ ಹೊರೆಯುತ್ತಿದ್ದೇನೆ. ನೆಪ ಮಾತ್ರಕ್ಕೆ ನಾನು ಶಾಂತರುದ್ರನ ಅಂಗಡಿಯ ನೌಕರ—ನಿಜಕ್ಕೆ ನಾನು ಶಾಂತರುದ್ರನ ಆಶ್ರಿತ.

ಧರ್ಮದ ಕೂಳಿನಲ್ಲಿ ಕಾಲ ಹಾಕುತ್ತಿದ್ದೇನೆ.

ಪರರೆಂಜಲಿಗೆ ಕೈಯೊಡ್ಡುತ್ತಿದ್ದೇನೆ.

ಇದು ಜೀವನವೇ?

ಇದೇ ನನ್ನ ಜೀವನದಂತ್ಯವೇ?

ಶಂಕರ ನಿರ್ವಿಣ್ಣನಾಗಿ ಒಬ್ಬನೇ ಕುಳಿತಾಗ ವಿರೂಪಾಕ್ಷಪ್ಪ ಬಂದು ಜತೆಯಲ್ಲಿ ಕೂಡುತ್ತಿದ್ದ. ಅವನ ನೂರಾರು ಕಷ್ಟಗಳನ್ನು ಹೇಳಿ ಕೊಳ್ಳುತ್ತಿದ್ದ. ಮನೆಯಲ್ಲಿ ರೋಗಗ್ರಸ್ತ ತಾಯಿ–ಹೆಮ್ಮಾರಿಯಂಥ ಹೆಂಡತಿ—ಉಢಾಳ ಮಕ್ಕಳು—ಕಿತ್ತುಕೊಂಡು ತಿನ್ನುವ ಬಡತನ. ಧಣಿ ಪರಮ ಕೃಪಣ–ಕಾಸಿನ ಮೇಲಿನ ಕಿಲುಬನ್ನು ಕೊಡಬೇಕಾದರೂ ಹತ್ತು ಬಾರಿ ಲೆಕ್ಕ ಹಾಕುವವನು. ಆದರೆ ಅವನಿಗೂ ಒಂದು ತೃಪ್ತಿ. ಚಿಕ್ಕ ಧಣಿ ಉದಾರಿ. ಕಷ್ಟ ಕಂಡರೆ ಮರುಗುವ ಸ್ವಭಾವದವನು.

ಶಾಂತಪ್ಪನ ಗುಣವರ್ಣನೆಯನ್ನು ವಿರೂಪಾಕ್ಷಪ್ಪನ ಬಾಯಲ್ಲಿ ಕೇಳಿದಾಗ ಶಂಕರನಿಗೆ ಆಪ್ಯಾಯಮಾನವಾಗುತ್ತಿತ್ತು. ಮಾತಿಗೆ ಮಾತು ಹೊರಟಾಗ ಶಂಕರ "ನಿಮ್ಮ ಸ್ವಾಮಿಗಳು ಯಾವಾಗ ಬರುತ್ತಾರೆ ವಿರೂಪಾಕ್ಷಣ್ಣ" ಎಂದು ಕೇಳುತ್ತಿದ್ದ.

"ಯಾವಾಗ ಬರ್‍ತಾರೋ ಬಿಡಿ ಸ್ವಾಮಿ. ತೆಂಪು ಹೊತ್ತಿನಲ್ಲಿ ಅವರ ನ್ನೇಕೆ ನೆನಸಿಕೊಳ್ಳಬೇಕು."

"ನೀವೂ ಸ್ವಾಮಿಗಳನ್ನು ತಾತ್ಸಾರಮಾಡುವಿರಲ್ಲಾ!"

"ಆ ಸ್ವಾಮೀನ ನೀವು ನೋಡಿಲ್ಲ. ನೋಡಿದರೆ ಹೊಟ್ಟೆ ಉರಿದುಹೋಗುತ್ತದೆ."

"ಏಕೆ?"

"ದೊಡ್ಡ ಧಣಿಗಳು ಕಾಸಿಗೆ ಕಾಸು ಲೆಕ್ಕ ಹಾಕುತ್ತಾರೆ. ಈ ಸ್ವಾಮೀಗೆ ಅವರು ಖರ್ಚುಮಾಡುವುದು ನೋಡಬೇಕು. ಸ್ವಾಮಿಗಳು ಕಾರ್ ಬಿಟ್ಟು ಕೆಳಗೆ ಇಳಿಯೋದೇ ಇಲ್ಲವಲ್ಲ."

"ಅಲ್ರೀ ವಿರೂಪಾಕ್ಷಣ್ಣ, ತಾವು ಸಂಪಾದಿಸಿದ ಹಣ ಸಾಹು ಕಾರರು ಖರ್ಚುಮಾಡುತ್ತಾರೆ. ಅದಕ್ಕೆ ನೀವೇಕೆ ಆಕ್ಷೇಪಣೆ ಮಾಡ ಬೇಕು?"

"ಯಾರು ಸ್ವಾಮಿ ಸಂಪಾದನೆ ಮಾಡಿದವರು. ನನ್ನಂಥ ಬಡ

ಪಾಯಿಗಳು. ಈಗ ಮೂವತ್ತು ನಲವತ್ತು ವರ್ಷಗಳ ಕೆಳಗೆ ನಮ್ಮ ಸಾಹುಕಾರರೂ ಸಿದ್ಧರಾಮಣ್ಣನವರ ಅಂಗಡಿಯಲ್ಲಿ ಕಾರಕೂನಿಕೆ ಮಾಡಿ ಕೊಂಡಿದ್ದರು. ಧಣೀನ ಮುಳುಗಿಸಿ ಇವರು ದೊಡ್ಡವರಾದರು. ಬಡವರ ಹೊಟ್ಟೆ ಮೇಲೆ ಹೊಡೆದು, ರೈತರ ಮನೆ ಹಾಳುಮಾಡಿ ಇವರು ಶ್ರೀಮಂತ ರಾದರು."

"ಹೋಗಲಿ ಬಿಡಿ. / ಅನ್ಯಾಯಾರ್ಜಿತಂ ವಿತ್ತಂ ಅಪಡ್ವಾಳೇ ವಿನಶ್ಯತಿ."/

"ಸ್ವಾಮಿಗಳು ಕಾರ್ತೀಕಮಾಸದ ಪುರಾಣ ಇಲ್ಲೇ ಹಚ್ತಾರಂತೆ!"

"ಯಾವ ಪುರಾಣ?"

"ಶೂನ್ಯ ಸಂಪಾದನೆಯೋ, ಪ್ರಭುಲಿಂಗಲೀಲೆಯೋ ಯಾವುದೋ ಹಿಡಿದುಕೊಂಡು ಬಾಯಿಗೆ ಬಂದದ್ದು ಹೇಳುತ್ತಾರೆ."

"ಈ ಎರಡು ಗ್ರಂಥ ತಂದುಕೊಡಿ ವಿರೂಪಾಕ್ಷಣ್ಣ. ನಾನೂ ಸ್ವಲ್ಪ ಓದಿಕೊಂಡಿರುತ್ತೇನೆ."

"ನೀವೂ ಪುರಾಣ ಹೇಳುತ್ತೀರೇನು ?"

"ನನಗೆಲ್ಲಿದೆಯಪ್ಪಾ ಅಷ್ಟು ಯೋಗ್ಯತೆ."

"ನಮ್ಮ ಸ್ವಾಮಿಗಳ ಯೋಗ್ಯತೆ ನಿಮಗೆ ಜನ್ಮ ಜನ್ಮಾಂತರಕ್ಕೂ ಬೇಡ ಶಂಕರರಾಯರೇ."

"ನಿಮ್ಮ ಸ್ವಾಮಿಗಳ ಪುರಾಣಕ್ಕೆ ನಾವು ಬರಬಹುದೋ ?"

"ಬನ್ನಿ ಸ್ವಾಮಿ. ಸ್ವಾಮಿಗಳೇ ನಿಮ್ಮನ್ನು ಸ್ವಾಗತಿಸುತ್ತಾರೆ. ಅವರ ಮೇಲೆ ಪೇಪರಿಗೆ ನೀವೊಂದು ಲೇಖನ ಬರೆದುಬಿಟ್ಟರೆ ಸ್ವಾಮಿಗಳು ನಿಮ್ಮ ದಾಸಾನುದಾಸರಾಗಿಬಿಡುತ್ತಾರೆ."

"ಅವರಿಗೆ ಪ್ರಸಿದ್ಧಿಯ ಹುಚ್ಚು ಹಿಡಿದಿದೆಯೇನು ?"

"ಒಂದೂ ಎರಡೂ ಹುಚ್ಚಾದರೆ ಹೇಳಬಹುದು. ನಮ್ಮ ಸ್ವಾಮಿ ಗಳಿಗೆ ಜಗತ್ತಿನಲ್ಲಿರುವ ಎಲ್ಲ ಹುಚ್ಚುಗಳೂ ಹಿಡಿದಿವೆ."

ವಿರೂಪಾಕ್ಷಪ್ಪನ ಮಾತು ಕೇಳಿ ಶಂಕರ ಗಹಗಹಿಸಿ ನಕ್ಕ.

ಶ್ರೀ ಶ್ರೀ ನಿರಂಜನ ಪ್ರಣವಸ್ವರೂಪಿ, ಷಟ್ಸ್ಥಳಸಂಪನ್ನ, ಅಭಿನವ ಅಲ್ಲಮ, ಜಗದ್ಗುರು ಶ್ರೀ ಹನುಮಕೊಂಡ ಪೀಠಾಧ್ಯಕ್ಷ ಶ್ರೀ ಶ್ರೀ ಕರಿಬಸವ

ರಾಜೇಂದ್ರ ಶ್ರೀ ಶ್ರೀಗಳವರು ಕಾರ್ತೀಕಮಾಸದ ಪುರಾಣಶ್ರವಣ ನಿಮಿತ್ತ ಹೊಸಪೇಟೆಗೆ ಸಾಹುಕಾರ ಜಡೆ ಚನ್ನಬಸಪ್ಪನವರ ಪ್ಯಾಕಾರ್ಡ್ ಕಾರಿ ನಲ್ಲಿ ಬಿಜಯಮಾಡಿ ಸಾಹುಕಾರರ ದಿವ್ಯಭವನದಲ್ಲಿ ಬಿಡಾರಮಾಡಿದರು. ಸಾಹುಕಾರರ ಮನೆಯ ಮಹಡಿಯೇ ಶ್ರೀ ಶ್ರೀಗಳವರ ಆಧ್ಯಾತ್ಮಿಕ ದರ್ಬಾರಿನ ರಂಗಮಂಟಪವಾಯಿತು.

"ಊರಿನ ಬಾದಾಮಿ, ಕೇಸರಿ, ದ್ರಾಕ್ಷಿ, ಕಲ್ಲುಸಕ್ಕರೆಯೆಲ್ಲಾ ಎಕ್ಕೆ ಹುಟ್ಟಿಹೋಗುತ್ತದೆ" ಎಂದು ವಿರೂಪಾಕ್ಷಪ್ಪ ಗೊಣಗಾಡಿದ.

"ಜಗದ್ಗುರುಗಳಿಗೆ ಹೊಸಪೇಟೆಯ ಮೇಲೆ ತುಂಬ ಅಭಿಮಾನ" ಎಂದು ಯಾರೋ ಅಂದುದಕ್ಕೆ ಶಾಂತರುದ್ರ ವಿಕಟವಾಗಿ ನಕ್ಕು

"ಅಲ್ಲವೇ! ಮುನೀರಾಬಾದು ಹತ್ತಿರವೇ ಇದೆ" ಎಂದು ಉತ್ತರಿಸಿದ್ದ.

ಸಾಹುಕಾರರ ಮನೆಯ ಹಜಾರದಲ್ಲಿಯೇ ಶ್ರೀ ಶ್ರೀಗಳವರ ಪ್ರವಚನದ ಏರ್ಪಾಡು ಮಾಡಲಾಗಿತ್ತು. ಹೊಳಪು ಹೆಂಚಿನಲ್ಲಿ ಕಟ್ಟಿದ ವೇದಿಕೆಯ ಮೇಲೆ ಶ್ರೀಗಳವರ ಸಿಂಹಾಸನ. ಸಿಂಹಾಸನದ ಹಿಂದೆ ವಿದ್ಯುದ್ದೀಪದ ಪ್ರಭಾವಳಿ. ಸಿಂಹಾಸನದ ಅತ್ತಿತ್ತೆ ಭಕ್ತಿ ಭಂಡಾರಿ ಬಸವಣ್ಣನವರ ಮತ್ತು ಶ್ರೀ ಜಗದ್ಗುರುಗಳ ತೈಲ ಚಿತ್ರಗಳು. ಸ್ವಾಮಿಗಳ ಅಕ್ಕಪಕ್ಕದಲ್ಲಿ ನೀಲಾಂಜನಗಳು. ಅವರ ಮುಂದೆ ಹೂವು ಹಣ್ಣು, ತಾಂಬೂಲದ ತಟ್ಟೆಗಳು.

ಶ್ರೀಗಳವರ ಮರಿಗಳು ಅತ್ತಿತ್ತೆ ನಿಂತುಕೊಂಡು ಚಾಮರ ಬೀಸುತ್ತಿದ್ದರು. ಸ್ವಾಮಿಗಳು ಸಿಂಹಾಸನಾರೂಢರಾಗಿ ತಮ್ಮ ಅಮೃತವಾಣಿಯಿಂದ 'ಶೂನ್ಯ ಸಂಪಾದನೆ'ಯ ಪ್ರವಚನ ಆರಂಭಿಸುತ್ತಿದ್ದರು. ವೇದಿಕೆಯ ಪಕ್ಕದ ಸ್ಥಾನಗಳು ಸಾಹುಕಾರರ ಮನೆಯವರಿಗೆ, ಸಮೀಪಬಂಧುಗಳಿಗೆ ಮೀಸಲಾಗಿತ್ತು. ಊರಿನ 'ಸ್ವಜನ ಬಾಂಧವರಿಗೂ, ಸಮಾಜ ಬಾಂಧವ'ರಿಗೂ ಆಮಂತ್ರಣ ಹೋಗಿತ್ತು. ಪ್ರವಚನಕ್ಕೆ ಬರುತ್ತಿದ್ದ ಭಕ್ತರು ಮೊದಲು ಸ್ವಾಮಿಗಳ ಪಾದ ಮುಟ್ಟಿ ಪ್ರಣಾಮ ಮಾಡಿ ಸ್ವಸ್ಥಾನಗಳಲ್ಲಿ ಕೂಡುತ್ತಿದ್ದರು.

ಗಣ್ಯರಾದ ಭಕ್ತರು ಬಂದಾಗ ಸ್ವಾಮಿಗಳು ತಾವೇ ಪಾದ

ಝಾಡಿಸಿ, ಪಾದಕಮಲ ದ್ವಯಗಳನ್ನು ಭಕ್ತರ ಮುಂದೆ ಚಾಚುತ್ತಿದ್ದರು. ಭಕ್ತರು ಅವುಗಳನ್ನು ಎರಡು ಕೈಯಲ್ಲಿಯೂ ಹಿಡಿದುಕೊಂಡು ಕಣ್ಣಿಗೆ ಒತ್ತಿಕೊಳ್ಳುತ್ತಿದ್ದರು.

ಪ್ರವಚನ ಮುಗಿದ ಮೇಲೂ ಈ 'ಪ್ರಣಾಮ ಪ್ರಕರಣ'ದ ಪುನರಾಭಿನಯವಾಗುತ್ತಿತ್ತು. ಗಂಡು ಭಕ್ತರು ದೂರ ನಿಂತ ಮೇಲೆ ಮಹಿಳಾಮಣಿಗಳು ಪ್ರಣಾಮ ಪ್ರಕರಣ ಆರಂಭಿಸುತ್ತಿದ್ದರು. ಅವರ ಸರದಿಯೂ ಮುಗಿದ ಮೇಲೆ ಸಾಹುಕಾರರ ಮನೆಯ ಹೆಣ್ಣು ಮಕ್ಕಳು ಸ್ವಾಮಿಗಳಿಗೆ ಆರತಿ ಬೆಳಗಿ ಅವರನ್ನು ಬಿಡಾರಕ್ಕೆ ಕರೆದೊಯ್ಯುತ್ತಿದ್ದರು.

ಶಂಕರ ಪ್ರತಿ ಸಂಜೆಯೂ ಸ್ವಾಮಿಗಳ ಪ್ರವಚನ ಕೇಳುವುದಕ್ಕೆ ಹೋಗುತ್ತಿದ್ದ. ವಿರೂಪಾಕ್ಷಪ್ಪ ಹೋಗದೆ ನಿರ್ವಾಹವೇ ಇರಲಿಲ್ಲ. ಶಾಂತರುದ್ರನೂ ಮಾವನನ್ನು ಮೆಚ್ಚಿಸುವುದಕ್ಕಾಗಿ ಸ್ವಾಮಿಗಳ ಮುಂದೆ ಕೈ ಕಟ್ಟಿಕೊಂಡು ಕೂಡುತ್ತಿದ್ದ.

ಸ್ವಾಮಿಗಳು 'ಬಸವರಾಜ ದೇವರ ಸಂಪಾದನೆ'ಯಿಂದ ತಮ್ಮ ಪ್ರವಚನ ಆರಂಭಿಸಿದರು. ಬಸವರಾಜದೇವರು ಗುರುಸೇವೆ ಮಾಡಿ, ಗುರುವಿಗೆ ತನು, ಮನ, ಧನವನ್ನರ್ಪಿಸಿದ ವಿಷಯವೇ ಪ್ರಧಾನವಾಗಿತ್ತು.

ಎರಡು ದಿನ ಕಳೆದ ಮೇಲೆ ಸ್ವಾಮಿಗಳು 'ಪ್ರಭು ದೇವರ ಸಂಪಾದನೆ' ಆರಂಭಿಸಿದರು. ಸಂಸ್ಕೃತ ಸಾಹಿತ್ಯ, ಭಾಷೆ, ಸಂಸ್ಕೃತಿಯ ಕುಲಗೋತ್ರವನ್ನೆಲ್ಲಾ ತೊಳೆದು, ಶ್ರೀ ಶ್ರೀಗಳವರು "ಸಂಸ್ಕೃತದಿಂದ ಈ ದೇಶ ಹಾಳಾಗಿಹೋಗಿದೆ. ಬ್ರಾಹ್ಮಣರ ವೇದೋಪನಿಷತ್ತುಗಳು ಇತರ ಮತಸ್ಥರನ್ನು ದಾಸ್ಯಕ್ಕೆ ದೂಡಿವೆ. ಸಂಸ್ಕೃತ ನಾಶ ಮಾಡಿದ ಹೊರತೂ 'ನಮ್ಮ ಸಮಾಜ' ಬದುಕುವುದಿಲ್ಲ" ಎಂದು ಘಂಟಾಘೋಷವಾಗಿ ಸಾರಿದರು.

ನಾಲ್ಕನೆಯ ದಿನ ಬೆಳಿಗ್ಗೆ ಅಂಗಡಿಗೆ ಬಂದ ಶಾಂತರುದ್ರ "ಸ್ವಾಮಿಗಳ ಪ್ರವಚನ ಹೇಗಿದೆ ಶಂಕರ?" ಎಂದು ಕೇಳಿದ.

"ವಾಗ್ಧೋರಣೆ ಚೆನ್ನಾಗಿದೆ."

"ವಿಷಯ ವಿವೇಚನೆ?"

"ಆ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲ ಯೋಗ್ಯತೆ

ಉಳ್ಳವರು ಸ್ವಾಮಿಗಳು—ಅವರ ಪ್ರವಚನದ ಮೇಲೆ ಅಭಿಪ್ರಾಯ ವ್ಯಕ್ತ ಮಾಡುವುದಕ್ಕೆ ನಾನು ಯಾರು?"

"ವಿರೂಪಾಕ್ಷಣ್ಣನ ಹತ್ತಿರ ಶೂನ್ಯ ಸಂಪಾದನೆ, ಪ್ರಭುಲಿಂಗಲೀಲೆ, ಬಸವಪುರಾಣ, ಚನ್ನಬಸವಪುರಾಣ ಎಲ್ಲಾ ತರಿಸಿಕೊಂಡೆಯಂತೆ?"

"ತರಿಸಿಕೊಂಡು ಓದಿದೆ. ಇನ್ನೂ ಓದುತ್ತಿದ್ದೇನೆ. ಸ್ವಾಮಿಗಳು 'ಶೂನ್ಯ ಸಂಪಾದನೆ'ಯ ವಿಶ್ವಧರ್ಮವನ್ನು ಅಪಾರ್ಥ ಮಾಡುತ್ತಿರುವಂತೆ ನನಗೆ ತೋರುತ್ತದೆ. ಅವರನ್ನೇ ಕೇಳಿ ಕೆಲವು ಸಂಶಯಗಳನ್ನು ನಿವೃತ್ತಿ ಮಾಡಿಕೊಳ್ಳಬೇಕೆಂದಿದ್ದೇನೆ."

"ಆಗಬಹುದು. ಸ್ವಾಮಿಗಳ ಪರಿಚಯವೂ ಆಗುತ್ತದೆ. ಶಂಕರ, ಇವತ್ತು ನೀನು ನನಗೊಂದು ಉಪಕಾರ ಮಾಡಬೇಕಲ್ಲ."

"ಏನಪ್ಪಾ ಅದು—ನಾನು ನಿನಗೆ ಉಪಕಾರ ಮಾಡುವುದು."

"ನನ್ನ ಸ್ನೇಹಿತ ಮನೋಹರ ಇವತ್ತು ಹೆಂಡತಿಯೊಂದಿಗೆ ಹಂಪೆ ನೋಡಲು ಬರುತ್ತಾನಂತೆ. ನೀನು ಅವರ ಜತೆ ಹಂಪೆಗೆ ಹೋಗಿ ಬರಬೇಕು."

"ನೀನು?............"

"ನನಗೆ ಈ ಪುರಾಣ ಗಂಟು ಬಿದ್ದಿದೆಯಲ್ಲಪ್ಪ. ನಾನು ತಪ್ಪಿಸಿಕೊಂಡರೆ ಮಾವನವರು 'ಗುರ್'ಎನ್ನುತ್ತಾರೆ."

"ಹೋಗುವುದಕ್ಕೆ ನನ್ನದೇನೂ ಅಡ್ಡಿಯಿಲ್ಲ. ಈ ಮನೋಹರ್ ಯಾರು?"

"ಇವನು ಬೆಳಗಾಂವಿ ಲಾ ಕಾಲೇಜಿನಲ್ಲಿ ಎಲ್‌ಎಲ್. ಬಿ. ಪ್ಯಾಸುಮಾಡಿಕೊಂಡು ಧಾರವಾಡದಲ್ಲಿ ವಕೀಲನಾಗಿದ್ದಾನೆ. ಇವನ ತಂದೆ ದೇಸಾಯಿ ಹನುಮಂತರಾಯರು ಧಾರವಾಡದ ಸುಪ್ರಸಿದ್ಧ ವಕೀಲರು. ಕಾಂಗ್ರೆಸ್ ನಾಯಕರು. ಹಲವು ಸಾರಿ ಜೈಲಿಗೆ ಹೋಗಿ ಬಂದಿದ್ದಾರೆ. ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಮನೋಹರನೂ ವಿದ್ಯಾಭಿಮಾನಿ. ತುಂಬ ಓದುತ್ತಾನೆ. ಒಳ್ಳೆಯ ವ್ಯಕ್ತಿಯ ಪರಿಚಯ ಮಾಡಿಕೊಟ್ಟೆ, ಎಂದು ನೀನೇ ನನ್ನನ್ನು ಹೊಗಳುತ್ತೀ."

"ಆಗಲಿ. ಆವಶ್ಯಕವಾಗಿ ಹೋಗಿಬರುತ್ತೇನೆ. ಮನೋಹರ್‌ಗೂ

ನಿನಗೂ ಎಷ್ಟು ದಿವಸದ ಪರಿಚಯ ಶಾಂತರುದ್ರಾ ?"

"ನಾನು ಈ ಊರಿಗೆ ಬಂದಾರಭ್ಯ ಪರಿಚಯವೆನ್ನಬಹುದು. ಅವನ ತಂದೆ ಹನುಮಂತರಾಯರು ನಮ್ಮ ಮಾವನವರ ವಕೀಲರು. ಧಾರವಾಡಕ್ಕೆ ನನ್ನನ್ನೇ ಕಡತಗಳ ಜತೆ ಕಳಿಸುತ್ತಿದ್ದರು. ಮನೋಹರನ ಪರಿಚಯವಾಗಿ ಸ್ನೇಹವಾಯಿತು."

"ನಿಮ್ಮ ಮಾವನವರಿಗೆ ಧಾರವಾಡದಲ್ಲಿಯೂ ವ್ಯವಹಾರ ವಿದೆಯೇ?"

"ಅವರ ಲೇವಾದೇವಿ ವ್ಯವಹಾರ ನೂರೆಂಟು ಕಡೆ ಇದೆ. ಈ ಸ್ವಾಮಿ ಬೇರೆ ಅವರಿಗೆ ಬ್ಯಾಡಿಗಿ, ಹಾವೇರಿ, ರಾಣೆಬೆನ್ನೂರು, ದಾವಣಗೆರೆ ಗಿರಾಕಿಗಳನ್ನೂ ಗಂಟುಹಾಕಿದ್ದಾನೆ."

"ಸ್ವಾಮಿಗಳೂ ಲೇವಾದೇವಿ ಮಾಡುತ್ತಾರೆಯೇ?"

"ಅವರ ಮೂಲವೃತ್ತಿಯೇ ಲೇವಾದೇವಿ. ನಮ್ಮಾವ ಶೇಕಡ ಒಂದು-ಒಂದೂಕಾಲು ಬಡ್ಡಿ ತೆಗೆದುಕೊಂಡರೆ ಸ್ವಾಮಿ ಎರಡರಿಂದ ಐದರವರೆಗೆ ಬಡ್ಡಿ ತೆಗೆದುಕೊಳ್ಳುತ್ತಾನೆ."

"ಸ್ವಾಮಿಗಳ ಕೀರ್ತಿ ಇಷ್ಟು ದೊಡ್ಡದೆಂದು ನನಗೆ ಗೊತ್ತಿರಲಿಲ್ಲ ಶಾಂತರುದ್ರಾ."

"ಮನೋಹರ ಎರಡು ಗಂಟೆಗೆ ಬರಬಹುದು. ಆ ವೇಳೆಗೆ ನಾನೂ ಊಟ ಮುಗಿಸಿಕೊಂಡು ಇತ್ತ ಬಂದುಬಿಡುತ್ತೇನೆ."

"ಅವರು ಅಂಗಡಿಗೆ ಬರುತ್ತಾರೆಯೇ?"

"ಹೂ. ಇಲ್ಲಿಗೇ ಬರುತ್ತಾನೆ. ನೀನೂ ಸ್ನಾನ, ಊಟ ಮುಗಿಸು" ಎಂದು ಹೇಳಿ ಹೊರಟುಬಿಟ್ಟ.

ಶಾಂತರುದ್ರ ಬರುವ ವೇಳೆಗೆ ಶಂಕರ ಸ್ನಾನ ಊಟ ಮುಗಿಸಿ ಕುಳಿತಿದ್ದ. ಶಾಂತರುದ್ರ ಬಂದ ಅರ್ಧ ಗಂಟೆಯೊಳಗಾಗಿ ಮನೋಹರನ ಕಾರಿನ ಹಾರ್ನ್ ಶಬ್ದ ಕೇಳಿಸಿತು.

ಶಾಂತರುದ್ರ ಕೆಳಗೆ ಇಳಿದು ಹೋಗಿ ಮನೋಹರನನ್ನೂ ಅವನ ಹೆಂಡತಿ ಸುಗುಣಾಬಾಯಿಯನ್ನೂ ಮೇಲಕ್ಕೆ ಕರೆದುಕೊಂಡು ಬಂದು ಶಂಕರನ ಪರಿಚಯ ಮಾಡಿಕೊಟ್ಟ.

"ನಿಮ್ಮ ಜತೆ ಶಂಕರ್ ಬರುತ್ತಾನೆ ಮನೋಹರ್. ನಾನು ಬರಲಿಲ್ಲ ವೆಂದು ಕೋಪಮಾಡಿಕೊಳ್ಳಬೇಡ."

"ನೀನೂ ಏಕೆ ಬರಬಾರದು?"

"ಈ ಸ್ವಾಮಿ ಒಬ್ಬ ನಮಗೆ ಗಂಟುಬಿದ್ದಿದ್ದಾನಲ್ಲಪ್ಪಾ."

"ನಿನಗೊಬ್ಬ ಸ್ವಾಮಿ ಕಾಟ, ನನಗೊಬ್ಬ ಸ್ವಾಮಿ ಕಾಟ."

"ನಿನಗೆ ಯಾವ ಸ್ವಾಮಿ ಕಾಟವಯ್ಯಾ?"

"ಪೂರ್ವಾದ್ರಿ ಸ್ವಾಮಿಗಳು—ನನ್ನ ತೀರ್ಥರೂಪರು ಈಗವರ ಪಟ್ಟ ಶಿಷ್ಯರಾಗಿದ್ದಾರೆ. ಅಣ್ಣನ್ನ ಈಗ ನೀನು ನೋಡಿದರೆ ಗುರುತೇ ಹಿಡಿಯ ಲಾರೆ ಶಾಂತರುದ್ರಾ—ಮೊಹರಂ ಹಬ್ಬದ ಹುಲಿಯ ಹಾಗೆ ಮೈಗೆಲ್ಲಾ ಅಂಗಾರ ಅಕ್ಷತೆ ಬಳಿದುಕೊಂಡಿರುತ್ತಾರೆ."

"ದೇವಸ್ಥಾನಗಳಿಗೆ ಹರಿಜನರಿಗೆ ಪ್ರವೇಶ ಕೊಡಿಸಲು ಹೋರಾಡಿದ ಕಾಂಗ್ರೆಸ್ ಪುಢಾರಿ ದೇಸಾಯ್ ಹಣಮಂತರಾಯರು ಕಟ್ಟಾ ವೈಷ್ಣವ ರಾದರೇನು?"

"ವೈಷ್ಣವರಾದುದು ಮಾತ್ರನಲ್ಲ—ಲಿಂಗಾಯಿತರನ್ನು ಅವರು ಬಯ್ಯುತ್ತಾರೆ. ನೀನು ಕೇಳಬೇಕು. ಹೊಟ್ಟೆಗೆ ಹಾಲು ಹುಯಿದು ಕೊಳ್ಳುತ್ತೀ."

"ನೀವು ಆಡಿದ ಮಾತೆಲ್ಲಾ ನಾನು ಮಾವನವರಿಗೆ ರಿಪೋರ್ಟು ಮಾಡುತ್ತೇನೆ." ಎಂದು ಸುಗುಣಾಬಾಯಿ ಹೆದರಿಸಿದಳು.

"ಇಲ್ಲೂ ಪಂಚಮದಳ(ಫಿಫ್ತ್ ಕಾಲಂ)ದವರಿದ್ದಾರೆ ಶಾಂತರುದ್ರಾ —ಹುಷಾರಾಗಿರು....ನಿನ್ನ ಸ್ನೇಹಿತರು ವೀರಶೈವರೇ?"

"ಅಲ್ಲ ಮಾರಾಯ—ಅವರು ಕಟ್ಟಾ ಶೈವರು—ಸ್ಮಾರ್ತರು."

"ನಾನು ಶೈವನೂ ಅಲ್ಲ, ವೈಷ್ಣವನೂ ಅಲ್ಲ—ಹಿಂದೂ—ಮಿ. ಮನೋಹರರಾವ್."

"ನಾವೂ ಅದೇ ಧರ್ಮ ಪಾಲಿಸುವವರೇ. ಮನೆಯಲ್ಲಿ ಹಿರಿಯರ ಅಂಜಿಕೆಗಾಗಿ ನಾನು ಗೋಪಿಚಂದನ ಬಳಿದುಕೊಳ್ಳುತ್ತೇನೆ. ಶಾಂತ ರುದ್ರ ಲಿಂಗ ಕಟ್ಟಿಕೊಳ್ಳುತ್ತಾನೆ. ಪ್ರಾಯಶಃ ನಮ್ಮ ಪೀಳಿಗೆಯಲ್ಲಿ ಈ ಜಾತಿಮತಗಳ ಗೊಂದಲ ಅಡಗುತ್ತದೆಂದು ಕಾಣುತ್ತದೆ."

"ಅಡಗುತ್ತದೆಯೇ ಮಿ. ಮನೋಹರ್?"

"ನಿಮಗೆ ಅನುಮಾನವೇ?"

"ನನಗಷ್ಟು ನಂಬಿಕೆಯಿಲ್ಲ."

"ಶಂಕರ ಹೇಳುವುದು ನಿಜ ಮನೋಹರ್. ಗದುಗಿನ ಬಸಪ್ಪನ ಪರಿಚಯ ನಿನಗಿದೆಯಲ್ಲ. ಅವನು ನಮ್ಮೆಲ್ಲರಿಗಿಂತ ಮುಂದೆ ಹೋಗಿದ್ದ. ಮನೆಯಲ್ಲಿ ಹಿರಿಯರಿದ್ದರೂ ಲಿಂಗ ಕಿತ್ತು ಬಿಸುಟಿದ್ದ. ಷಾಫರ್ ಕಮ್ರು ಹತ್ತಿರ ಕೋಳೀವೊಟ್ಟೆ ಬೇಯಿಸಿ ತಿನ್ನುತ್ತಿದ್ದ. ಯಾರ ಮನೆಗೆ ಕರೆದರೂ ಹೋಗಿ ಊಟ ಮಾಡುತ್ತಿದ್ದ. ಈಗ ಅವನೇನಾಗಿದ್ದಾನೇಂತ ತಿಳಿದಿದ್ದೀ. ಯಾವುದೋ ಮಠದ ಮರಿ ಇದ್ದ ಹಾಗಿದ್ದಾನೆ. ಅವನ ಕೆಂಪು ವಸ್ತ್ರ, ಎದೆಯುಗಲದ ಲಿಂಗಪ್ಪ, ತೋಟದಸ್ವಾಮಿ ಮಠದ ಜಾತ್ರೆ ನೋಡಿದರೆ ನಗು ಬರುತ್ತದೆ."

"ವಿಶಾಲ ದೃಷ್ಟಿ ಹೊರಗಿನ ಲಾಂಛನಗಳನ್ನು ತೆಗೆದು ಹಾಕಿದರೆ ಬೆಳೆಯುವುದಿಲ್ಲ ಮಿ. ಮನೋಹರ್. ಮನಸ್ಸಿನ ಮೇಲಿರುವ ಕರೀತೆರೆಗಳನ್ನು ತೆಗೆದು ಹಾಕಬೇಕು. ಲಿಂಗ ಕಟ್ಟಿಕೊಂಡು, ಜನಿವಾರ ಹಾಕಿಕೊಂಡಿದ್ದರೂ ಮನುಷ್ಯ ವಿಶಾಲ ದೃಷ್ಟಿಯುಳ್ಳವನಾಗಿರಬಹುದು. ನನ್ನ ತಾಯಿ ವಿಷಯ ಒಂದು ಮಾತು ಹೇಳುವುದು ಅಪ್ರಕೃತವಾಗಲಾರದು. ಅವರು ಹಳೆಯ ಕಾಲದವರು. ತುಂಬ ಮಡಿ ಮೈಲಿಗೆ. ಯಾರ ಮನೆಗೂ ಹೋಗಿ ಅವರು ಗಂಗೋದಕ ಕೂಡಾ ಕುಡಿಯುವುದಿಲ್ಲ. ಶಾಂತರುದ್ರೂ ಊರಿಗೆ ಬಂದು ನಮ್ಮನೆಯಲ್ಲಿ ಒಪ್ಪತ್ತು ಊಟ ಮಾಡದೆ ಹೋದರೆ ಅನ್ನ ನೀರು ಬಿಟ್ಟುಬಿಡುತ್ತಾರೆ. ನಮ್ಮ ಮನೆಯಲ್ಲಿ ಬಹಳ ದಿವಸಗಳಿಂದ ಆಳು ಮಗಳು ನಿಂಗವ್ವ ಇದ್ದಾಳೆ. ಅವಳು ಬೀರೇದೇವರ ಭಕ್ತಳು. ನನ್ನ ತಾಯಿ ಕೈಗೆ ಒಳ್ಳೆಯ ಹೂ ಸಿಕ್ಕಿದರೆ ನಿಂಗವ್ವನ ಕೈಗೆ ಒಂದು ಹಿಡಿ ಹಾಕಿ 'ಹೋಗೇ ನಿಂಗಿ, ನಿನ್ನ ದೇವರಿಗೆ ಅರ್ಪಿಸಿ ಬಾ' ಎನ್ನುತ್ತಾರೆ. ನಿಂಗವ್ವ ಆಲಸ್ಯದಿಂದ 'ನಿಮ್ಮ ದೇವರಿಗೇ ಮುಡುಗಿಬಿಡ್ರವ್ವ. ನಮ್ದೇವರೇನು—ನಮ್ಮ ಹಂಗೇ ಎಂಡ ಕುಡೀತದೆ, ಮಾಂಸ ತಿನ್ತದೆ' ಎಂದರೆ ತಾಯಿ ಹೆದರಿ 'ಹಾಗನ್ನಬಾರದೇ ನಿಂಗೀ. ದೇವರು ಎಂದರೆ ಎಲ್ಲಾ ಒಂದೇ. ನಿನಗವನು ಬೀರೇದೇವರು, ನನಗವನು ನಾರಾ

ಯಣ, ಇನ್ನೊಬ್ಬನಿಗವನು ಅಲ್ಲಾ ಸಾಬಿ. ಯಾವ ದೇವರನ್ನೂ ಕಡೆಗಾ ಣಿಸಬಾರದು' ಎಂದು ಹೇಳುತ್ತಾರೆ. ಅಂಗಾರ ಅಕ್ಷತೆ ಇಟ್ಟುಕೊಳ್ಳುವವರು ಲಿಂಗಕಟ್ಟಿಕೊಳ್ಳುವವರನ್ನು ಗೌರವಿಸಿದರೆ ಅದೇ ನಿಜವಾದ ಧರ್ಮ— ಅದೇ ಸತ್ಯವಾದ ಧರ್ಮಾಭಿಮಾನ."

ಮನೋಹರ ಸ್ತಂಭೀಭೂತನಾಗಿ ಕುಳಿತುಬಿಟ್ಟ. ಶಾಂತರುದ್ರ ಅವನನ್ನೆಚ್ಚರಿಸುತ್ತಾ

"ನೀನು ಶಂಕರನ ಮಾತು ಕೇಳುತ್ತಾ ಕುಳಿತುಬಿಟ್ಟರೆ ಹಂಪೆಯ ಯೋಚನೆಯನ್ನೇ ಬಿಟ್ಟುಬಿಡಬೇಕಾಗುತ್ತದೆ. ಸ್ವಲ್ಪ ಉಪಾಹಾರ ಮಾಡಿಕೊಂಡು ಹಂಪೆಗೆ ಹೋಗಿ ಬನ್ನಿ. ರಾತ್ರಿಗೆ ಇಲ್ಲೇ ಊಟ ಮಾಡಿಕೊಂಡು ಧಾರವಾಡಕ್ಕೆ ಹೋಗಬೇಕು ಮನೋಹರ್."

"ಇಲ್ಲಪ್ಪಾ....ರಾತ್ರಿ ಊಟದ ವೇಳೆಗೆ ನಾವು ಊರು ತಲುಪಲೇ ಬೇಕು. ಬೆಳಿಗ್ಗೆ ನನಗೆ ಕೋರ್ಟು ಕೆಲಸವಿದೆ. ಕಲಘಟಗಿ ದೊಂಬಿ ಮೊಕದ್ದಮೆ—ನಾನಿನ್ನೂ ಫೈಲ್‌ಗಳನ್ನು ನೋಡಬೇಕಾಗಿದೆ."

ವಿರೂಪಾಕ್ಷಪ್ಪ ಹೋಟಲು ಮಾಣಿಯ ಕೈಯಲ್ಲಿಯೇ ತಿಂಡಿ, ಕಾಫಿ, ಚಹಾ ತೆಗೆಸಿಕೊಂಡು ಬಂದ. ಎಲ್ಲರೂ ಉಪಾಹಾರ ಮುಗಿಸಿದ ಮೇಲೆ ಶಂಕರ ಮನೋಹರನೊಂದಿಗೆ ಹೊರಟ.

ಹಂಪೆಯ ವಿಹಂಗಮ ನೋಟಕ್ಕಷ್ಟೇ ಅವಕಾಶವಿದ್ದುದು. ಕಲಿ ತಾಕೆಯಾದ ಸುಗುಣಾಬಾಯಿಯೂ ವಿಜಯನಗರದ ಇತಿಹಾಸ, ಸಂಸ್ಕೃತಿ ಯಲ್ಲಿ ಹೆಚ್ಚು ಆಸಕ್ತಿ ತೋರಿದಳು. ಹಂಪೆ ಬಿಟ್ಟು ಹೊರಟಾಗ ಸುಗುಣಾಬಾಯಿ "ಹಂಪೆ ಸರಿಯಾಗಿ ನೋಡಿದ ಹಾಗೇ ಆಗಲಿಲ್ಲ. ಇನ್ನೊಮ್ಮೆ ಸಾವಕಾಶವಾಗಿ ಬಂದು ಒಂದೆರಡು ದಿನ ಇಲ್ಲಿಯೇ ಇರ ಬೇಕು. ಶಂಕರರಾಯರು ಸೊಗಸಾಗಿ ವರ್ಣಿಸುತ್ತಾರೆ" ಎಂದಳು. ದಾರಿ ಯಲ್ಲಿ ಬರುವಾಗ ಮನೋಹರ "ಧಾರವಾಡಕ್ಕೆ ಯಾವಾಗ ಬರುವಿರಿ ಮಿ. ಶಂಕರ್?" ಎಂದು ಕೇಳಿದ.

"ಬರುವ ಕೆಲಸವೇನಿದೆ."

"ನಮ್ಮೊಂದಿಗೆ ಒಂದೆರಡು ದಿನ ಇರುವುದಕ್ಕೇ ಬನ್ನಿ."

"ಹಾಗೇ ಆಗಲಿ."

"ನಿಮ್ಮಂಥ ಮೇಧಾವಿಗಳು ಬಟ್ಟೆ ಅಂಗಡಿ ನೌಕರಿ ಮಾಡುತ್ತಿರುವುದು ಸೋಜಿಗವಾಗಿದೆ."

"ಹೌದು, ಮಾಡಬೇಕಾಯಿತು. ನಾನಿಲ್ಲಿ ನೌಕರನಂತಿಲ್ಲ. ಶಾಂತರುದ್ರ ನನ್ನನ್ನು ಸೋದರನಂತೆ ಕಾಣುತ್ತಿದ್ದಾನೆ."

"ಕಾಲೇಜ್ ಏಕೆ ಬಿಟ್ಟುಬಿಟ್ಟಿರಿ?"

"ಮನೆಯಲ್ಲಿ ಅನನುಕೂಲವಾಯಿತು."

"ನಿಮ್ಮಂಥವರು ಧಾರವಾಡದಲ್ಲಿರಬೇಕು. ಅದು ಸಾಂಸ್ಕೃತಿಕ ಕೇಂದ್ರ. ಅನೇಕ ಸಾಹಿತಿಗಳಿದ್ದಾರೆ."

ಸುಗುಣಾಬಾಯಿ ನಗುತ್ತಾ "ಧಾರವಾಡದಲ್ಲಿ ಎಂದೇಕೆ ಹೇಳುವಿರಿ ಮನೆಯಲ್ಲಿಯೇ ಇದ್ದಾರೆ ಎಂದು ಹೇಳಿ" ಎಂದಳು.

"ತೀರ್ಥರೂಪರ ಸಾಹಿತ್ಯ ನೋಡಿ ಸುಗುಣಾ ನಗುತ್ತಾಳೆ. ನೋಡಿ."

"ಅವರ ಸಾಹಿತ್ಯ ಮಾತ್ರವೇ ಅಲ್ಲ, ಅವರ ಮಿತ್ರರು ಕವಿದೂಷಣರು."

"ಎಲ್ಲರೂ ಕವಿದೂಷಣರ ಹಾಗೆಯೆ ಇದ್ದಾರೆಯೇ ಸುಗುಣ.– ನೋಡಿ ಶಂಕರ್, ಸುಗುಣನಿಗೆ ಧಾರವಾಡವೆಂದರೆ ಸೇರುವುದಿಲ್ಲ."

"ಏಕೆ?"

"ಅವಳನ್ನೇ ಕೇಳಿ."

"ಏಕೆ ತಾಯಿ?"

"ಧಾರವಾಡದ್ದು ಶುದ್ಧ ಕೃತ್ರಿಮನಾಗರಿಕತೆ (ಆರ್ಟಿಫಿಷಿಯಲ್ ಕಲ್ಚರ್) ಸಿಂಗಲ್ ಟೀ ಕುಡಿದು ಅಮೃತ ಕುಡಿಯುತ್ತಿದ್ದೇನೆಂದು ತಿಳಿಯುವ ಮನೋಭಾವ. ಇದರ ಜತೆಗೆ ಎಷ್ಟು ಅಹಂಕಾರ, ಎಷ್ಟು ಠೀವಿ."

"ನಿಮ್ಮದು ಯಾವ ಊರು ತಾಯಿ?"

"ನನ್ನ ತಾಯಿ ಮನೆ ವಿಜಾಪುರ. ನಾವು ಒರಟುಜನ. ಮನೆಗೆ ಬಂದವರನ್ನು ಸವಿಯಾಗಿ ಮಾತನಾಡಿಸಿ 'ಯಾವಾಗ ಹೊರಡುವಿರಿ' ಎಂದು ಧಾರವಾಡದವರ ಹಾಗೆ ಕೇಳುವ ಅಭ್ಯಾಸವಿಲ್ಲ."

"ನೀವು ಧಾರವಾಡದವರನ್ನು ವಿನಾಕಾರಣ ಆಕ್ಷೇಪಿಸುತ್ತಿರುವಿರಿ ತಾಯಿ."

"ನೀವೇ ಬಂದು ನಾಲ್ಕು ದಿನ ಇದ್ದು ನೋಡಿ ಮಿ. ಶಂಕರ್. ನಾನು ಹೇಳುತ್ತಿರುವುದು ಸುಳ್ಳೋ ನಿಜವೋ ಗೊತ್ತಾಗುತ್ತದೆ. ನಾನು ಧಾರವಾಡ ಟೀಕೆ ಮಾಡಿದರೆ ಯಜಮಾನರಿಗೆ ಕೋಪ ಬರುತ್ತದೆ."

"ವಿಜಾಪುರ ಟೀಕೆ ಮಾಡಿದರೆ ನಿನಗೆ ಕೋಪ ಬರುವುದಿಲ್ಲವೋ?"

"ಒಳ್ಳೆಯವರು, ಕೆಟ್ಟವರು ಎಲ್ಲಾ ಕಡೆಯೂ ಇರುತ್ತಾರೆ ತಾಯಿ. ಧಾರವಾಡದವರೆಲ್ಲ ಕೆಟ್ಟವರು, ವಿಜಾಪುರದವರೆಲ್ಲಾ ಒಳ್ಳೆಯವರು ಎಂದು ಹೇಳುವುದು ನ್ಯಾಯವಾಗಲಾರದು."

"ಹಿಯರ್! ಹಿಯರ್!" ಎಂದು ಮನೋಹರ ಉತ್ಸಾಹಗೊಂಡು "ನೀವು ತುಂಬ ಓದಿರುವ ಹಾಗೆ ಕಾಣುತ್ತದೆ ಮಿ. ಶಂಕರ್" ಎಂದ.

"ಹೆಚ್ಚು ಓದಿಲ್ಲ—ಓದುವ ಆಸೆಯಿದೆ."

"ಧಾರವಾಡಕ್ಕೆ ಬನ್ನಿ. ನನ್ನಲ್ಲಿಯೇ ಸಾಕಷ್ಟು ಒಳ್ಳೆಯ ಪುಸ್ತಕ ಭಂಡಾರವಿದೆ. ಕಾಲೇಜಿನ ಪುಸ್ತಕ ಭಂಡಾರವೂ ಚೆನ್ನಾಗಿದೆ."

"ಶಾಂತರುದ್ರ ಮೇಲಿಂದ ಮೇಲೆ ಧಾರವಾಡಕ್ಕೆ ಬರುತ್ತಿರುತ್ತಾ ನಲ್ಲವೇ?"

"ಹೌದು. ನಾವೇ ಅವನ ಮನೆಯವರ ವಕೀಲರು."

"ಅವನ ಕೈಯಲ್ಲಿ ನಾಲ್ಕಾರು ಪುಸ್ತಕ ಕಳಿಸಿ ಕೊಡುವಿರಾ? ರಸೆಲ್, ವಿಲ್‌ಡ್ಯುರಾಂಟ್, ಡ್ಯೂಯಿ, ಜೋಡ್ ಅವರ ಗ್ರಂಥಗಳು ಬೇಕು."

"ನೀವು ಹೇಳುವ ದಾರ್ಶನಿಕರ ಗ್ರಂಥಗಳೆಲ್ಲಾ ನನ್ನಲ್ಲಿವೆ. ಅವಶ್ಯಕವಾಗಿ ಕಳಿಸಿಕೊಡುತ್ತೇನೆ—ನಿಮ್ಮ ಪರಿಚಯವಾದುದು ತುಂಬ ಸಂತೋಷ ಮಿ. ಶಂಕರ್. ಗುರುತಿರಲಿ, ಮರೆಯಬೇಡಿ."

"ಮರೆಯುವುದೆಲ್ಲಾ ಶ್ರೀಮಂತರ ಹಕ್ಕುದಾರಿ ಮಿ. ಮನೋಹರ್."

ಶಾಂತರುದ್ರನ ಅಂಗಡಿಯ ಮುಂದೆ ಕಾರು ಬಂದು ನಿಂತಿತು. ಶಂಕರ ಕೆಳಗಿಳಿದು "ಒಳಗೆ ಬನ್ನಿ" ಎಂದ.

"ಕ್ಷಮಿಸಿ. ಹೊತ್ತಾಗುತ್ತ ಬಂದಿದೆ. ನಾವು ಧಾರವಾಡ ಸೇರಲೇ ಬೇಕು."

"ಇಲ್ಲಿಂದ ಧಾರವಾಡ ಎಷ್ಟು ಮೈಲಿಯಾಗುತ್ತದೆ?"

"ಸುಮಾರು ನೂರು ಮೈಲಿ."

"ಈಗಲೇ ಸಂಜೆಯಾಯಿತು. ರಾತ್ರಿ ಇಲ್ಲೇ ಇದ್ದು ಬೆಳಿಗ್ಗೆ ಹೋದರಾಗದೇ ?"

"ನಾವು ನಿಲ್ಲುವ ಹಾಗಿಲ್ಲ."

"ಶಾಂತರುದ್ರನನ್ನು ನೋಡುವುದಿಲ್ಲವೇ?"

"ಆವನೆಲ್ಲಿರುತ್ತಾನೆ?"

"ಮನೆಯಲ್ಲಿ—ಸ್ವಾಮಿಗಳ ಪುರಾಣವಿದೆಯಲ್ಲ."

"ಅವನಿಗೆ ನೀವೇ ಹೇಳಿಬಿಡಿ. ನೀವು ಮಾತ್ರ ಧಾರವಾಡಕ್ಕೆ ತಪ್ಪದೆ ಬನ್ನಿ."

"ಅಗತ್ಯವಾಗಿ ಆಗಲಿ."

ಮನೋಹರ ಕಾರ್ ಮುನ್ನಡೆಸಿದ.

ಅಂಗಡಿಯಲ್ಲಿ ವಿರೂಪಾಕ್ಷಪ್ಪನೂ ಇರಲಿಲ್ಲ. ತಾನೊಬ್ಬನೇ ಕುಳಿತೇನು ಮಾಡುವುದೆಂದು ಶಂಕರನೂ ಸ್ವಾಮಿಗಳ ಪುರಾಣಶ್ರವಣಕ್ಕೆ ಹೊರಟ.

ಸ್ವಾಮಿಗಳಂದು 'ಪ್ರಭುದೇವರ ಸಂಪಾದನೆ' ಕೈಗೆ ತೆಗೆದುಕೊಂಡರು. ಪುರಾಣದ ಜತೆಗೂ ಲೌಕಿಕ ವಿಷಯಗಳು, ಕರ್ನಾಟಕ ಏಕೀಕರಣ, ಸರಕಾರದ ದೌರ್ಬಲ್ಯ, ಕರ್ನಾಟಕದ ಮುಖಂಡರ ಶಿಖಂಡಿತನ, ಬ್ರಾಹ್ಮಣರ ಹಾವಳಿಯ ಬಗ್ಗೆ ಸ್ವಾಮಿಗಳು ಬಿಚ್ಚುಮನಸ್ಸಿನಿಂದ ಟೀಕೆ ಮಾಡುತ್ತಿದ್ದರು.

ಪುರಾಣ ಮುಗಿಯಿತು. ಭಕ್ತಾದಿಗಳ ನಮಸ್ಕಾರ ಕೈಂಕರ್ಯದ ಕೊನೆಯೂ ಆಯಿತು. ಶಂಕರ ಮೆಲ್ಲನೆ ಸ್ವಾಮಿಗಳ ಬಳಿಸಾರಿ ಕೈ ಮುಗಿದು ನಿಂತುಕೊಂಡ. ಸ್ವಾಮಿಗಳು ಕಾಲು ಝಾಡಿಸಿ ನೋಡಿದರು. ಶಂಕರ ಪಾದ ಹಿಡಿಯುವ ಸಂಭವ ಕಾಣಲಿಲ್ಲ. ಸ್ವಾಮಿಗಳು ಸ್ವಲ್ಪ ಸಿಟ್ಟಿನಿಂದಲೇ

"ನಿಮಗೇನು ಬೇಕು?" ಎಂದು ಕೇಳಿದರು.

"ನನಗೇನೂ ಬೇಕಾಗಿಲ್ಲ. ನಿಮ್ಮನ್ನು ಕೆಲವು ಪ್ರಶ್ನೆಗಳನ್ನು ಕೇಳ ಬೇಕೆಂದಿದ್ದೇನೆ."

"ನೀವು ಯಾರು?"

ಪಕ್ಕದಲ್ಲಿಯೆ ಕೈಕಟ್ಟಿಕೊಂಡು ನಿಂತಿದ್ದ ಸಾಹುಕಾರರು "ನಮ್ಮ ಅಂಗಡಿ ಕಾರಕೂನರು ಬುದ್ದಿ" ಎಂದರು.

"ನೀವು ಯಾವ ಜನ?"

"ನಾನು ಹಿಂದು."

"ಇವರು ಹಾರವರು ಬುದ್ದಿ" ಎಂದರು ಸಾಹುಕಾರರು.

ಸ್ವಾಮಿಗಳು ಸಾಹುಕಾರರ ಕಡೆ ಕಿಡಿನೋಟ ಬೀರಿ, ಶಂಕರನ ಕಡೆ ತಿರುಗಿ

"ಏನು ಪ್ರಶ್ನೆ ಕೇಳಬೇಕೆಂದಿರುವಿರಿ?"

"ನಾನೂ 'ಶೂನ್ಯ ಸಂಪಾದನೆ' ಓದಿದ್ದೇನೆ—ಕೆಲವು ಸಂದೇಹಗಳು ಬಂದಿವೆ. ತಮ್ಮಂಥ ಘನ ವಿದ್ವಾಂಸರೂ, ತಪಸ್ವಿಗಳೂ ಬಂದಾಗ ಅವುಗಳ ಪರಿಹಾರ ಮಾಡಿಕೊಳ್ಳದಿದ್ದರೆ ಮತ್ತೆ ಯಾವಾಗ ಇಂಥ ಅವಕಾಶ ನನಗೆ ಸಿಕ್ಕಬೇಕು."

'ಘನ ವಿದ್ವಾಂಸ— ತಪಸ್ವಿ' ಎರಡು ಶಬ್ದಗಳು ಸ್ವಾಮಿಗಳ ಕಿವಿಗಳ ಮೇಲೆ ಬಿದ್ದು ಚಮತ್ಕಾರ ಮಾಡಿದುವು. ಸ್ವಾಮಿಗಳು ಸುಪ್ರಸನ್ನರಾಗಿ, ಇದು ಯಾವುದೋ ಹಾರವ ಪಶು ಕೈಗೆ ಸಿಕ್ಕಿತು ಎಂದುಕೊಂಡು,

"ನಾಳೆ ಮುಂಜಾನೆ ಬಂದು ಭೇಟಿಯಾಗಿ. ಸಾವಕಾಶವಾಗಿ ಮಾತಾಡೋಣವಾಗುತ್ತದೆ. ಈಗ ನಮಗೆ ಸ್ನಾನದ ವೇಳೆಯಾಯಿತು" ಎಂದು ಪೀಠದಿಂದ ಎದ್ದುಬಿಟ್ಟರು.

ಸ್ವಾಮಿಗಳೂ ಚನ್ನಬಸಪ್ಪನವರೂ ಒಳಗೆ ಹೋದ ಮೇಲೆ ಶಾಂತರುದ್ರ ಮೆಲ್ಲನೆ ಶಂಕರನ ಸಮೀಪಕ್ಕೆ ಬಂದು,

"ಮನೋಹರನನ್ನೇನು ಮಾಡಿದೆ ಶಂಕರ?" ಎಂದು ಕೇಳಿದ.

"ಹಂಪೆ ತೋರಿಸಿಕೊಂಡು ಬಂದೆ. ಅವರು ಊರಿಗೆ ಹೋಗಲೇಬೇಕೆಂದು ಹಟಹಿಡಿದು ಹೋದರಪ್ಪ. ರಾತ್ರಿ ಇದ್ದು ಹೋಗಿ ಎಂದು ಹೇಳಿದೆ. ನನ್ನ ಮಾತು ಕೇಳಲಿಲ್ಲ."

"ಸ್ವಾಮಿಗಳಿಗೆ ಗಂಟು ಬಿದ್ದಿದ್ದೆಯಲ್ಲಾ,"

"ಬೆಳಿಗ್ಗೆ ಭೇಟಿ ದಯಪಾಲಿಸಿದ್ದಾರೆ."

"ಬೆಳಿಗ್ಗೆ ನಾನು ಇರುವುದಿಲ್ಲವಲ್ಲೋ ಶಂಕರ."

"ಏಕೆ?"

"ಬಳ್ಳಾರಿಯಲ್ಲಿ ಒಂದು ಕೇಸಿದೆ. ನಾನು ಹೋಗಬೇಕಾಗಿದೆ."

"ಹೋಗಿಬಿಟ್ಟು ಬಾ. ನಡೆದುದನ್ನು ವರದಿ ಒಪ್ಪಿಸುತ್ತೇನೆ."

ಎಂದು ಆಶ್ವಾಸನವಿತ್ತ.

ಬೆಳಿಗ್ಗೆ ಒಂಭತ್ತು ಗಂಟೆಗೇ ಸ್ವಾಮಿಗಳ 'ಖಾಸಗಿ ದರ್ಬಾರು' ಚನ್ನಬಸಪ್ಪನವರ ಮಹಡಿಯ ಮೇಲೆ ಆರಂಭವಾಗಿತ್ತು. ಸ್ವಾಮಿಗಳು ಶುಭ್ರಸ್ನಾತರಾಗಿ, ತಲೆಯ ಮೇಲೆ ಜರೀ ರುಮಾಲು, ಜರೀ ರೇಷ್ಮೆ ವಸ್ತ್ರದ ದಟ್ಟಿ, ಜರೀ ರೇಷ್ಮೆ ವಸ್ತ್ರದ ಉತ್ತರೀಯ ಧರಿಸಿ ಸೋಫಾಕುರ್ಚಿಯ ಮೇಲೆ ಆಸನಾಸೀನರಾಗಿದ್ದರು. ಅವರ ಮೂಗಿನ ಮೇಲೆ ಕಟ್ಟಿಲ್ಲದ ಕನ್ನಡಕ. ಸ್ವಾಮಿಗಳ ಪಾದದ ಬಳಿ ಭಕ್ತ ಶಿರೋಮಣಿ ಜಡೆ ಚನ್ನ ಬಸಪ್ಪನವರು ಮಂಡಿಸಿದ್ದರು. ಸ್ವಾಮಿಗಳ ಎದುರಿಗೆ ಎಂಟು ಹತ್ತು ಪ್ರಾಯದ ಹೆಣ್ಣುಮಕ್ಕಳು, ಅತ್ತಿತ್ತ ಕೆಲವು ಜೀರ್ಣಪ್ರಾಯದ ಭಕ್ತರು.

ಶಂಕರ ಪ್ರವೇಶಿಸಿ ಸ್ವಾಮಿಗಳಿಗೆ ಕೈಮುಗಿದ. ಸ್ವಾಮಿಗಳು ಮಂದಹಾಸ ಬೀರುತ್ತಾ "ಬರ್ರಿ–ಬರ್ರೀ–ಇಲ್ಲೀ ಬರ್ರಿ" ಎಂದು ಶಂಕರ ನನ್ನು ಹತ್ತಿರ ಕರೆದು ತಮ್ಮ ಶ್ರೀಪಾದದಡಿ ಕೂರಿಸಿಕೊಂಡು, "ನಿಮ್ಮ ಹೆಸರು ಶಂಕರರಾಯರಂತೆ!" ಎಂದರು.

"ಹೌದು ಸ್ವಾಮಿಗಳೇ."

"ಚಲೋ ಹೆಸರು. ಶಂಕರ, ಈಶ್ವರ, ಚಂದ್ರಶೇಖರ, ನೀಲಕಂಠ ಎಲ್ಲಾ ಒಳ್ಳೆಯ ಹೆಸರುಗಳು. ನಮ್ಮ ಸಾಹುಕಾರನ ಹತ್ತಿರ ನೀವು ನೌಕರಿಗಿರುವುದು ಕೇಳಿ ಬಹಳ ಸಂತೋಷವಾಯಿತು. ನಾವೂ–ನಮ್ಮ ಭಕ್ತರೂ ಜಾತಿಭೇದವೆಣಿಸುವುದಿಲ್ಲ ನೋಡಿ. ಎಲ್ಲರನ್ನೂ ಸಮಾನ ರಂತೆ ಕಾಣುತ್ತೇವೆ."

"ಅದು ಸ್ವಾಮಿಗಳ ಉದಾತ್ತಗುಣದ ಪ್ರತೀಕ."

"ಹೌದು–ಹೌದು—ನೀವು ಚಲೋ ಓದಿಕೊಂಡವರ ಹಾಗೆ ಕಾಣುವಿರಿ?"

"ಅಲ್ಪಸ್ವಲ್ಪ ಓದಿಕೊಂಡಿದ್ದೇನೆ."

"ಬರೆಯುವ ಅಭ್ಯಾಸವಿದೆಯೋ?"

"ಹೆಚ್ಚು ಅಭ್ಯಾಸವಿಲ್ಲ. ಸ್ವಸಂತೋಷಕ್ಕೆ ಏನಾದರೂ ಬರೆಯುವುದುಂಟು."

"ಅಚ್ಚುಮಾಡಿಸಿರುವಿರಾ?"

"ಅಚ್ಚು ಹಾಕಿಸುವುದಕ್ಕೆ ನಾನು ಯಾವ ಘನಸಾಹಿತಿ ಸ್ವಾಮಿಗಳೇ."

"ಹಾಗನ್ನಬಾರದು—ಅಚ್ಚುಹಾಕಿಸಬೇಕು—ನಾವು ಸಹಾಯ ಮಾಡುತ್ತೇವೆ. ಅಚ್ಚು ಹಾಕಿಸಿ. ಶಿವಶರಣರ ಮೇಲೆ ಒಂದು ಗ್ರಂಥ ಬರೆದುಕೊಡಿ. ನಾವೇ ಅದಕ್ಕೆ ಆಶ್ರಯಕೊಡುತ್ತೇವೆ."

"ನಾನಿನ್ನೂ ವಿದ್ಯಾರ್ಥಿ ಸ್ವಾಮಿಗಳೇ. ಶಿವಶರಣರ ಕೃತಿಗಳನ್ನು ಚೆನ್ನಾಗಿ ಅಭ್ಯಾಸಮಾಡಿಕೊಂಡು ತರುವಾಯ ಬರೆಯುವ ಯೋಚನೆ ಮಾಡುತ್ತೇನೆ... ನಾನು ಒಂದೆರಡು ಪ್ರಶ್ನೆ ಕೇಳಬಹುದೇ?"

"ಕೇಳಿ–ಅವಶ್ಯ ಕೇಳಿ. ಶ್ರೀ ಸಿದ್ಧಲಿಂಗೇಶ್ವರ ನಿಮ್ಮ ಎಲ್ಲಾ ಸಂದೇಹಗಳನ್ನೂ ಪರಿಹಾರ ಮಾಡುತ್ತಾನೆ."

"ಒಂದೆರಡು ಪ್ರಶ್ನೆ ವೈಯಕ್ತಿಕವಾಗಬಹುದು—ಸ್ವಾಮಿಗಳು ಅನ್ಯಥಾ ಭಾವಿಸಬಾರದು."

ಸ್ವಾಮಿಗಳು ಬೆಚ್ಚಿಬಿದ್ದು, ತಮ್ಮ ಮಾಮೂಲ್ ಮಂದಹಾಸ ಬಿರುತ್ತಾ

"ಕೇಳಿ—ಬೇಕಾದ್ದು ಕೇಳಿ."

"ತಾವು ಸಂಸ್ಕೃತ ಅಭ್ಯಾಸ ಮಾಡಿರುವಿರಾ ಸ್ವಾಮಿಗಳೇ?"

"ಕನ್ನಡದಲ್ಲಿಲ್ಲದಿರುವುದು ಸಂಸ್ಕೃತದಲ್ಲೇನಿದೆ. ಆ ಭಾಷೆಯನ್ನು ಕಲಿತು ನಾವೇನು ಮಾಡಬೇಕು. ನಮ್ಮ ಜನಕ್ಕೆ ನಾನು ಸಂಸ್ಕೃತದಲ್ಲಿ ಪುರಾಣ ಹೇಳಿದರೆ ಅರ್ಥವಾಗುತ್ತದೇನು?"

"ತಾವು ಕನ್ನಡದಲ್ಲಿಯೇ ಪುರಾಣ ಹೇಳಬಹುದು. ಸಂಸ್ಕೃತ ಕಲಿಯುವುದರಿಂದ ಏನು ತಪ್ಪು?"

"ಅದು ಆರ್ಯರ ಭಾಷೆ. ಬ್ರಿಟಿಷರು ಇಂಗ್ಲೀಷ್ ಭಾಷೆಯನ್ನು ನಮ್ಮ ತಲೆಯ ಮೇಲೆ ಹೇರಿ ನಮ್ಮನ್ನು ತುಳಿದಂತೆ ಆರ್ಯರು ಸಂಸ್ಕೃತ

ಹೇರಿ ನಮ್ಮನ್ನು ತುಳಿದರು. ದಕ್ಷಿಣದವರು ಸಂಸ್ಕೃತವನ್ನು ವಿರೋಧಿಸಿ ಉತ್ತರದ ವಿರುದ್ಧ ದೊಡ್ಡ ಕ್ರಾಂತಿಯನ್ನೆಬ್ಬಿಸಿಬಿಡಬೇಕು."

"ಮದರಾಸಿನ ದ್ರಾವಿಡ ಕಜಗಂ ಆ ಕೆಲಸ ಮಾಡುತ್ತಿದ್ದಾರೆ ಸ್ವಾಮಿಗಳೇ. ವೇದಗಳು, ರಾಮಾಯಣ, ಭಾರತ, ಮನುಧರ್ಮಶಾಸ್ತ್ರಗಳನ್ನು ಸುಡುತ್ತಿದ್ದಾರೆ."

"ಚಲೋ ಆಯಿತು."

"ತಾವು ರಾಮಾಯಣ, ಭಾರತ ಅವಲೋಕಿಸಿದ್ದೀರಾ?"

"ಚಾಮರಸ ಏನು ಹೇಳಿದ್ದಾನೆ ನೆನಪಿದೆಯೋ—ರಾಮಾಯಣ ಕಳ್ಳತನದ ಕಥೆ—ಮಹಾಭಾರತ ಹಾದರದ ಕಥೆ. ಇಂಥ ಪುಂಡು ಕಥೆಗಳನ್ನು ಯಾರೂ ಓದಬಾರದು."

"ಶರಣಲೀಲಾಮೃತ, ಬಸವ ಪುರಾಣಗಳಲ್ಲಿಯೂ ಪುಂಡು ಕಥೆಗಳು ಬರುತ್ತವಲ್ಲ ಸ್ವಾಮಿಗಳೇ."

"ಯಾರು ಹೇಳಿದವರು. ಅವೆಲ್ಲಾ ಭವಿಗಳು ಮಾಡುವ ಅಪಪ್ರಚಾರ."

"ವೀರಶೈವರು ಬಸವಪುರಾಣ, ಪ್ರಭುಲಿಂಗಲೀಲೆ, ಶೂನ್ಯಸಂಪಾದನೆ ಬಿಟ್ಟು ಬೇರೆ ಯಾವ ಗ್ರಂಥವನ್ನೂ ಓದಬಾರದೆಂದು ತಮ್ಮ ಅಭಿಪ್ರಾಯವೇನು?"

"ಹೌದು. ಶಿವಧ್ಯಾನ, ಶಿವಜ್ಞಾನ, ಶಿವಕಳೆ ಸಮನಿಸಿದ ಮೇಲೆ ಬೇರೆ ಗ್ರಂಥ ಗ್ರಂಥಿಗಳು ಎಮಗೇಕಯ್ಯ."

ಭಕ್ತಾದಿಗಳು ಸ್ವಾಮಿಗಳ ದಿವ್ಯವಾಣಿ ಕೇಳಿ ತಲೆದೂಗಿದರು.

"ಈಶಾದಿ ಉಪನಿಷತ್ತುಗಳು ಸರ್ವಧರ್ಮ ಸಮನ್ವಯವನ್ನು ಸಾರಿರುವುದು ಸ್ವಾಮಿಗಳ ಗಮನಕ್ಕೆ ಬಂದಿದೆಯೇ?"

"ಪ್ರಭುದೇವರ ಒಂದು ವಚನಕ್ಕೆ ನಿಮ್ಮ ಉಪನಿಷತ್ತುಗಳೆಲ್ಲಾ ಸಾಟಿಯಾಗುವುದಿಲ್ಲ."

"ತಾವು ಕರ್ನಾಟಕದ ಏಕೀಕರಣದ ಮುಖಂಡರೂ ಆಗಿರುವಿರಲ್ಲವೇ ಸ್ವಾಮಿಗಳೇ?"

"ಹೌದು. ಅಖಂಡ ಕರ್ನಾಟಕ ಕಟ್ಟುವುದಾಗಿ ನಾವು ಶಪಥ ಮಾಡಿರುವೆವು."

"ಅಖಂಡ ಕರ್ನಾಟಕದಲ್ಲಿ ಉಪನಿಷತ್ತು, ಗೀತೆ, ಕುರಾನ್, ಜೈನಧರ್ಮ ಗ್ರಂಥಗಳನ್ನು ಓದುವವರು ಬಹಳ ಮಂದಿ ಇದ್ದಾರಲ್ಲಾ ಅವರನ್ನೇನು ಮಾಡುವಿರಿ?"

"ಅವರ ಮನವೊಲಿಸಿಕೊಂಡು ಭವಿಮಾರ್ಗ ಬಿಡಿಸಿ ಭಕ್ತ ಮಾರ್ಗಕ್ಕೆ ತರುತ್ತೇವೆ."

"ಸ್ವಾಮಿಗಳೇ, ಇದು ಕರ್ನಾಟಕವನ್ನಾಗಲಿ, ಭಾರತವನ್ನಾಗಲಿ ಕಟ್ಟುವ ಮಾರ್ಗವಲ್ಲ. ಒಂದು ಸಮಾಜದ ಗುರುಗಳಾದ ತಮ್ಮಂಥ ವರೇ ಅಜ್ಞ ಜನರಿಗೆ ಮತಾಂಧತೆಯನ್ನು ಬೋಧಿಸುತ್ತಾ ಬಂದರೆ ದೇಶದ ಪಾಡೇನು ಆಗುವುದು? ವೀರಶೈವ ಧರ್ಮ ಈ ಪುಣ್ಯ ಭೂಮಿಯಲ್ಲಿ ಹುಟ್ಟುವುದಕ್ಕೆ ಎಷ್ಟೋ ಶತಮಾನಗಳ ಹಿಂದೆ ವೇದಾಂತ, ಬೌದ್ಧ, ಜೈನ ಮತಗಳು ಹುಟ್ಟಿ, ಬೆಳೆದು ವರ್ಧಿಸಿವೆ. ಉಪನಿಷತ್ತು ಹೇಳು ವಂತೆ 'ಏತಂಸತ್ ವಿಪ್ರಾ ಬಹುಧಾ ವದಂತಿ'. ವೀರಶೈವ ಧರ್ಮದಲ್ಲಿಯ ಬಸವ, ಅಲ್ಲಮ, ಅಕ್ಕಮಹಾದೇವಿಯರಂಥ ಮಹಾಪುರುಷರು ಹುಟ್ಟಿ ಲೋಕ ಕಲ್ಯಾಣ ಮಾಡಿದ್ದಾರೆ. ಆದರೆ ಎಲ್ಲ ಜ್ಞಾನ, ಭಕ್ತಿ, ವೈರಾಗ್ಯವೂ ತಮ್ಮ ಖಾಸಗಿಸೊತ್ತು ಎಂದು ವೀರಶೈವರು ಭಾವಿಸು ವುದು ಶುದ್ಧ ತಪ್ಪು—ತಾವು ಸಂಸ್ಕೃತವನ್ನು ನಿಂದಿಸುತ್ತಿರುವಿರಿ. ಸಂಸ್ಕೃತದ ವೈದಿಕ, ಲೌಕಿಕ ಸಾಹಿತ್ಯವನ್ನು ಅಲ್ಲಗಳೆಯುತ್ತಿರುವಿರಿ. ಈ ಸಂಸ್ಕೃತವಿಲ್ಲದಿದ್ದರೆ ನಮ್ಮ ಭಾಷೆ, ಸಾಹಿತ್ಯ ಬೆಳೆಯುತ್ತಿದ್ದಿತೇ, ವಿಚಾರ ಮಾಡಿ. ಬಸವಾದಿ ಪ್ರಮಥರ ವಚನಗಳಲ್ಲಿಯೇ ಎಷ್ಟು ಸಂಸ್ಕೃತ ಶಬ್ದಗಳು, ಶ್ಲೋಕಗಳು ಬರುತ್ತವೆ. ಒಂದು ಭಾಷೆಯ ಮೇಲೆ, ಸಂಸ್ಕೃತಿಯ ಮೇಲೆ, ಜನಾಂಗದ ಮೇಲೆ ವೈಷಮ್ಯ ಸಾಧಿಸುವುದು ದೊಡ್ಡತನದ ಲಕ್ಷಣವಲ್ಲ.—ವೈದಿಕ ಸಾಹಿತ್ಯ ಕೇವಲ ಬ್ರಾಹ್ಮಣರ ಹಕ್ಕು ಎಂದು ತಾವು ಭಾವಿಸಿರುವ ಹಾಗಿದೆ. ವೇದದ ಅನೇಕ ಋಕ್ಕುಗಳನ್ನು ಬರೆದವರು ರೈಕ್ವ, ಸತ್ಯಕಾಮ, ಜನಕ ಮೊದಲಾದ ಬ್ರಾಹ್ಮಣೇತರರು. ವೈದಿಕ ಸಾಹಿತ್ಯ ಬ್ರಾಹ್ಮಣರ ಸ್ವತ್ತೂ ಅಲ್ಲ; ಬ್ರಾಹ್ಮಣೇತರರ ಸ್ವತ್ತೂ ಅಲ್ಲ. ಅದು ವಿಶ್ವದ ಸ್ವತ್ತು—ತಾವು ಹಿರಿಯರು —ಜಗದ್ಗುರುಗಳು. ಸಾವಿರಾರು ಭಕ್ತರಿಂದ ಪೂಜೆ ಮಾಡಿಸಿಕೊಳ್ಳು ವವರು. ತಮ್ಮ ಮಾತೆಂದರೆ ಈ ಜನಕ್ಕೆ ವೇದವಾಕ್ಯ. ತಾವೂ ತಮ್ಮಂ

ಥವರೂ. ಜನರಿಗೆ ಸದ್ವಿವೇಕ, ಪರಮತ ಸಹಿಷ್ಣುತೆ ಮಾನವ ಪ್ರೇಮ ವನ್ನು ಬೋಧಿಸಬೇಕು. ಧರ್ಮಾಂಧತೆಯನ್ನು ಬೋಧಿಸಬಾರದು."

ಸ್ವಾಮಿಗಳ ಮುಖ ಉರಿಯುವ ಕೆಂಡವನ್ನು ಹೋಲಲಾರಂಭಿಸಿತು. ಅವರ ಕೆಂಗಣ್ಣುಗಳು ಕಿಡಿಕಾರಲಾರಂಭಿಸಿದುವು.

"ನಮ್ಮ ಕರ್ತವ್ಯ ನಮಗೆ ಗೊತ್ತಿದೆ. ನಿಮ್ಮಂಥ ಭವಿಗಳಿಂದ ನಾವು ಉಪದೇಶಪಡೆಯಬೇಕಾಗಿಲ್ಲ. ನಿಮ್ಮೊಂದಿಗೆ ನಾವು ಮಾತನಾಡಿದುದೇ ತಪ್ಪು. ಸ್ನಾನಮಾಡಿ ಶಿವಪೂಜೆಮಾಡಿ ಈ ಭವಿದರ್ಶನದಿಂದ ಬಂದಿರುವ ಪಾಪ ತೊಳೆದುಕೊಳ್ಳಬೇಕಾಗಿದೆ."

ಎಂದು ಸಿಟ್ಟಿಗೆದ್ದು ಸ್ವಾಮಿಗಳು ಒಳಗೆ ಹೋದರು. ಚನ್ನಬಸಪ್ಪನವರು ಶಂಕರನನ್ನು ದುರುಗುಟ್ಟಿಕೊಂಡು ನೋಡಿ ಸ್ವಾಮಿಗಳನ್ನನುಸರಿಸಿದರು.

ಶಂಕರ ಏಕಾಂಗಿಯಾಗಿ ಸಾಹುಕಾರರ ಮನೆಯಿಂದ ಹೊರಬಿದ್ದ. ಅವನು ಸ್ವಲ್ಪ ದೂರ ಹೋಗುವುದರೊಳಗಾಗಿ ವಿರೂಪಾಕ್ಷಪ್ಪ ಬಂದು ಕೂಡಿಕೊಂಡ. ಶಂಕರ "ಸಾಹುಕಾರರ ಮನೆಗೆ ಬಂದಿದ್ದಿರಾ ವಿರೂಪಾಕ್ಷಣ್ಣ?" ಎಂದು ಕೇಳಿದ.

"ಬಂದಿದ್ದೆ ಸ್ವಾಮಿ."

"ಎಲ್ಲಿದ್ದಿರಿ?"

"ಸಾಹುಕಾರರ ಕಣ್ಣಿಗೆ ಬೀಳದಂತೆ ಹೊರಗೆ ಕಿಟಕಿಯ ಬಳಿ ನಿಂತಿದ್ದೆ."

"ಎಲ್ಲಾ ಕೇಳಿಸಿತೇ?"

"ಕೇಳಿಸಿತು."

"ನಾನೇನಾದರೂ ತಪ್ಪು ಮಾತಾಡಿದೆನೇ?"

"ಬಡಗಿ ತೆಗೆದುಕೊಂಡು ಆ ಸ್ವಾಮಿಯನ್ನು ನೀವು ಬಡಿದಿದ್ದರೂ ತಪ್ಪಾಗುತ್ತಿರಲಿಲ್ಲ. ವೀರಶೈವಧರ್ಮದ ಯೋಗ್ಯತೆ ಹಾಳು ಮಾಡುವವರು ಇಂಥ ಸ್ವಾಮಿಗಳೇ."

"ಜನ ಸುಶಿಕ್ಷಿತರಾಗಬೇಕು ವಿರೂಪಾಕ್ಷಣ್ಣ. ಧರ್ಮಾಂಧತೆ ನಮ್ಮನ್ನೂ ನರಕಕ್ಕೆ ಒಯ್ಯುತ್ತದೆ. 'ಅಯ್ಯ ಎಂದಡೆ ಸ್ವರ್ಗ–ಎಲವೊ ಎಂದಡೆ ನರಕ' ಎಂದು ಬಸವಣ್ಣನವರೇ ಹೇಳಿಲ್ಲವೇ?"

"ಸತ್ಯಕ್ಕಾಗಿ ನೀವು ಹೋರಾಡಿದಿರಿ. ಆದರೆ ಇದರಿಂದ ನಿಮ್ಮ ಪಾಡೇನಾಯಿತು ಬಲ್ಲಿರಾ ?"

"ಏನಾಯಿತು ?"

"ನೀವು ಇನ್ನು ಇಲ್ಲಿ ಹೆಚ್ಚು ಕಾಲ ಉಳಿಯುವಂತಿಲ್ಲ. ಸ್ವಾಮಿಗಳಾಗಲೇ ನಿರೂಪ ಹೊರಡಿಸಿದ್ದಾರೆ. ಸಾಹುಕಾರರು ಸ್ವಾಮಿಗಳ ಕೈಗೊಂಬೆ."

"ಇಂಥ ವಾತಾವರಣದಲ್ಲಿ ಇರುವುದರಲ್ಲಿ ನನಗಾದರೂ ಏನು ಹಿತವಿದೆ ವಿರೂಪಾಕ್ಷಣ್ಣ. ನಿಮ್ಮ, ಶಾಂತರುದ್ರನ ನಿರ್ಮಲಸ್ನೇಹ ನನ್ನನ್ನು ಕಟ್ಟಿಹಾಕಿತ್ತು. ಸರ್ವಜ್ಞ ಹೇಳಿದ ಹಾಗೆ ಕರದಿ ಕಪ್ಪರವುಂಟು, ತಿರಿದುಣಲು ನಾನುಂಟು, ಹರನೆಂಬ ದೈವ ಎನಗುಂಟು ಎನಗಿಂತ ಹಿರಿಯರಿನ್ನಾರು?"

"ಚಿಕ್ಕಧಣಿ ತುಂಬ ವ್ಯಸನಪಡುತ್ತಾರೆ ಶಂಕರರಾಯರೇ."

"ಹೌದು—ನಾನು ಬಲ್ಲೆ—ಅವನು ಶುದ್ಧ ಹೆಂಗರುಳಿನವ. ಇನ್ನೊಬ್ಬರ ಕಷ್ಟ ನೋಡಿ ಸಹಿಸುವ ಶಕ್ತಿ ಅವನಿಗಿಲ್ಲ. ಆದರೆ ಆ ಶಕ್ತಿ ತಂದುಕೊಳ್ಳಬೇಕು ವಿರೂಪಾಕ್ಷಣ್ಣ. ಈ ಜಗತ್ತು ಒಂದು ತಂಗುಮನೆ—ಪಾಂಥಶಾಲೆ. ನಾಲ್ಕು ದಿನ ಜೊತೆಯಲ್ಲಿದ್ದು ಅಗಲುತ್ತೇವೆ. ಹೊಸಬರು ಬರುತ್ತಾರೆ, ಅವರೂ ಹೋಗುತ್ತಾರೆ. ನಾಲ್ಕು ದಿನದ ಬಾಳನ್ನು ಶಾಶ್ವತವೆಂದು ಭಾವಿಸಬಾರದು."

"ಇಲ್ಲಿಂದ ಎಲ್ಲಿಗೆ ಹೋಗುವಿರಿ ಶಂಕರರಾಯರೇ?"

"ಅದನ್ನು ಇನ್ನುಮುಂದೆ ನಿರ್ಧರಿಸಬೇಕು."

"ನೀವು ಎಲ್ಲಿದ್ದರೂ ಶಿವ ನಿಮಗೆ ಒಳ್ಳೆಯದು ಮಾಡಲಿ. ಬಡವನನ್ನು ಮರೆಯಬೇಡಿ. ನಿಮ್ಮ ಸಂಗದಲ್ಲಿ ನನ್ನ ಎಲ್ಲಾ ತಾಪತ್ರಯಗಳನ್ನೂ ಮರೆತಿದ್ದೆ. ಒಳ್ಳೆಯ ಮಾತು ಆಡುತ್ತಿದ್ದಿರಿ—ಒಳ್ಳೆಯ ನಡೆ ನಡೆಯುತ್ತಿದ್ದಿರಿ. ನಿಮ್ಮ ಸಂಗ ನನಗೆ ಅನುಭವಮಂಟಪವಾಗಿತ್ತು."

"ನಿಮ್ಮನ್ನು ಬಿಟ್ಟು ಹೋಗುವುದು ನನಗೂ ಸುಲಭವಾಗಿಲ್ಲ ವಿರೂಪಾಕ್ಷಣ್ಣ."

ಮಾರನೆಯ ದಿನ ಊರಿಗೆ ಬಂದ ಶಾಂತರುದ್ರ ಶಂಕರನನ್ನು ಕಂಡು ಅವನಿಂದ ಸ್ವಾಮಿಗಳ ಜತೆ ನಡೆದ ವಾಗ್ವಾದದ ವಿವರ ತಿಳಿದು

ಕೊಂಡ. ಅದೇ ದಿನ ಶಾಂತರುದ್ರ ತುರುತು ಕೆಲಸದ ಮೇಲೆ ಧಾರವಾಡಕ್ಕೆ ಹೋಗಬೇಕಾಯಿತು.

ಎರಡು ದಿನಗಳು ಕಳೆದ ಮೇಲೆ ಊರಿಗೆ ಹಿಂದಿರುಗಿದ ಶಾಂತರುದ್ರನ ಮನಸ್ಸು ಅಸ್ತವ್ಯಸ್ತವಾಗಿತ್ತು. ಸದಾ ಗಾಢವಾದ ಯೋಚನೆಯಲ್ಲಿ ಮಗ್ನನಾಗಿರುತ್ತಿದ್ದ. ಶಂಕರನ ಜತೆ ಸರಿಯಾಗಿ ಮಾತನಾಡಲು ಅವನಿಗೆ ಸಾಧ್ಯವಾಗಲಿಲ್ಲ. ಗೆಳೆಯನ ದುಮ್ಮಾನದ ಕಾರಣವನ್ನು ಬಿಡಿಸಿ ಕೇಳಿ, ಅವನ ಮನಸ್ಸಿಗೆ ಮತ್ತಷ್ಟು ವ್ಯಥೆಯನ್ನುಂಟುಮಾಡಲು ಶಂಕರ ಇಚ್ಛೆಪಡಲಿಲ್ಲ.

ಒಂದು ದಿನ ಸಂಜೆ ಶಂಕರ ಅಂಗಡಿ ಮುಚ್ಚಿದ ಮೇಲೆ, ಒಬ್ಬನೇ ಗಾಳಿಸಂಚಾರ ಹೋಗಿ ಬಂದು ರೂಮಿನಲ್ಲಿ ಓದುತ್ತ ಕುಳಿತ. ಎಂಟು ಗಂಟೆ ಹೊಡೆದಿತ್ತು. ಯಾರೋ ಬಾಗಿಲು ಬಡಿದಂತಾಯಿತು. ಎದ್ದು ಬಾಗಿಲು ತೆಗೆದ—ಎದುರಿಗೆ ಶಾಂತರುದ್ರ.

ಶಾಂತರುದ್ರ ಮಾತನಾಡದೆ ಒಳಕ್ಕೆ ಬಂದು ಶಂಕರನ ರೂಮಿನಲ್ಲಿದ್ದ ಆರಾಮಾಸನದ ಮೇಲೆ ಕುಳಿತ. ಅವನ ಅಂತರಂಗದಲ್ಲಿ ನಡೆಯುತ್ತಿದ್ದ ವಿಪ್ಲವ ಮುಖದ ಮೇಲೆ ಎದ್ದು ಕಾಣುತ್ತಿತ್ತು.

"ಪುರಾಣಕ್ಕೆ ಹೋಗಲಿಲ್ಲವೇ ಶಾಂತರುದ್ರಾ?" ಎಂದು ಶಂಕರನೇ ಕೇಳಿದ.

"ಹೋಗಿದ್ದೆ. ಅಲ್ಲಿ ಕೂಡಲು ಮನಸ್ಸಾಗಲಿಲ್ಲ. ಎದ್ದು ಬಂದೆ."

"ಮೂರು ನಾಲ್ಕು ದಿವಸದಿಂದ ಏನೋ ಒಂದು ರೀತಿಯಾಗಿದ್ದೀಯಲ್ಲಾ ಏಕೆ?"

"ಹೊಸಪೇಟೆಗೆ ನಾನು ಬಂದು ಕಂಡವರ ಆಶ್ರಯದಲ್ಲಿ ನಿಂತುದು ತಪ್ಪಾಯಿತು ಶಂಕರ."

"ಮಾವನ ಮನೆಯಲ್ಲಿರುವುದು ಕಂಡವರ ಆಶ್ರಯದಲ್ಲಿದ್ದಂತಲ್ಲವಲ್ಲ!"

"ಬೇರೆಯವರ ಆಶ್ರಯದಲ್ಲಿದ್ದಿದ್ದರೆ ಬಿಟ್ಟು ಹೋಗುವುದಕ್ಕಾದರೂ ಬರುತ್ತಿತ್ತು; ನನಗೀಗ ಆ ಸ್ವಾತಂತ್ರ್ಯವೂ ಉಳಿದಿಲ್ಲ."

"ಆದದ್ದೇನು ಹೇಳಬಾರದೆ?"

"ಯಾವ ಬಾಯಲ್ಲಿ ಹೇಳಲಿ?"

"ಸ್ವಾಮಿಗಳ ಜತೆ ನಾನು ನಡಸಿದ ವಾಗ್ವಾದದ ಬಿಸಿ ತಾಕಿದೆ ಯೇನು ?"

"ಸ್ವಾಮಿಗಳ ಜತೆ ನೀನೇಕೆ ವಾಗ್ವಾದ ಮಾಡಿದೆ ಶಂಕರ. ನಮ್ಮ ಮಾವನವರು ಸ್ವಾಮಿಗಳ ಕೈಗೊಂಬೆಯಾಗಿರುವ ವಿಷಯ ನಾನು ನಿನಗೆ ತಿಳಿಸಿರಲಿಲ್ಲವೇ ?"

"ತಿಳಿಸಿದ್ದೆ. ಸತ್ಯಕ್ಕೆ ಅಪಚಾರವಾಗುತ್ತಿದ್ದರೆ ನೋಡಿಕೊಂಡು ಸುಮ್ಮನಿರಲೇ ? ಏನೂ ಅರಿಯದ ಜನಗಳ ಮನಸ್ಸಿನಲ್ಲಿ ಸ್ವಾಮಿಗಳು ವಿಷಬೀಜ ಬಿತ್ತುತ್ತಿದ್ದರೆ ನೋಡಿಕೊಂಡು ಮೌನತಾಳಲೇ ?"

"ನಿನ್ನ ವಾದದಿಂದ ಏನು ಪ್ರಯೋಜನವಾಯಿತು ?"

"ನನ್ನ ಕರ್ತವ್ಯ ನಾನು ಮಾಡಿದ್ದೇನೆ. ಪ್ರಯೋಜನದ ಕಡೆ ಲಕ್ಷ್ಯವೇತಕ್ಕೆ. ನಿಮ್ಮ ಮಾವನವರು ನನ್ನ ಮೇಲೆ ತುಂಬ ಅಸಮಾಧಾನಗೊಂಡಿದ್ದಾರಲ್ಲವೇ ?–ನನ್ನನ್ನು ಊರು ಬಿಡಿಸಬೇಕೆಂದು ಸ್ವಾಮಿಗಳು ಹಟಹಿಡಿದಿದ್ದಾರಲ್ಲವೇ ?"

"ನಿನಗೆ ಇದನ್ನು ಯಾರು ಹೇಳಿದರು?"

"ನಾನು ಊಹಿಸಬಲ್ಲೆ. ಇಲ್ಲಿಂದ ಹೊರಡಲು ನಾನು ಸಿದ್ಧನಾಗಿದ್ದೇನೆ ಶಾಂತರುದ್ರಾ. ನಿನ್ನ ಉಪಕಾರಕ್ಕೆ ಕೃತಜ್ಞತೆ ಯಾವ ರೀತಿ ತೋರಿಸಬೇಕೋ ಕಾಣೆ."

"ಎಲ್ಲಿಗೆ ಹೋಗುತ್ತೀ ಶಂಕರ—ಊರಿಗೆ ಹೋಗುವೆಯಾ ?"

"ಸದ್ಯಕ್ಕೆ ಊರಿಗೆ ಕಾಲಿಡಲಾರೆ."

"ನೀನು ಎಲ್ಲಿರುತ್ತೀಯೆಂದರೂ ನಿನ್ನ ಖರ್ಚು ಪೂರೈಸಲು ನಾನು ಸಿದ್ಧವಾಗಿದ್ದೇನೆ."

"ನಿನ್ನ ಔದಾರ್ಯಕ್ಕೆ ನಾನು ಋಣಿಯಾಗಿದ್ದೇನೆ. ಆದರೆ ನಾನು ಅದನ್ನು ಒಪ್ಪಿಕೊಳ್ಳಲಾರೆ."

"ಧಾರವಾಡಕ್ಕೆ ಹೋಗಿ ಮನೋಹರನ ಜತೆ ಇರುವೆಯಾ?"

"ನೌಕರನಾಗಿ ಇರಬಲ್ಲೆ."

"ಅವನ ತಂದೆಗೆ ಒಬ್ಬರು ಕಾರ್ಯದರ್ಶಿ ಬೇಕಾಗಿದ್ದಾರಂತೆ!"

"ಹಾಗಾದರೆ ಆಗಬಹುದು."

"ನನ್ನನ್ನು ಕ್ಷಮಿಸುವೆಯಾ ಶಂಕರ?"

"ಏಕೆ? ನಿರಾಶ್ರಿತನಿಗೆ ಆಶ್ರಯ ಕೊಟ್ಟ ಅಪರಾಧಕ್ಕಾಗಿಯೇ!"

"ನಿನಗೆ ಆಶ್ರಯ ಕೊಡುವಷ್ಟು ನಾನು ಶ್ರೀಮಂತನೇ!"

"ಹೌದು ಶಾಂತರುದ್ರಾ—ಹೃದಯ ಶ್ರೀಮಂತ—ನಮ್ಮ ಪೀಳಿಗೆಗೆ ಜಾತಿ ಮತಗಳ ಗೊಂದಲವಡಗುತ್ತದೆ ಎಂಬ ಸುಂದರ ಕನಸನ್ನು ಮನೋಹರ್ ಬಣ್ಣಿಸಿದರು; ಕನಸುಗಳೆಲ್ಲಾ ನಿಜವಾಗಬಾರದೇ ಎಂದು ನಾನೂ ಬಯಸಿದೆ."

ಶಾಂತರುದ್ರನ ಕಣ್ಣುಗಳಿಂದ ಧಾರಾಕಾರವಾಗಿ ಕಂಬನಿ ಸುರಿಯುತ್ತಿತ್ತು.

"ಇಷ್ಟು ಅಲ್ಪ ವಿಷಯಕ್ಕೆ ದುಃಖಿಸುತ್ತಾರೆಯೇ ಶಾಂತರುದ್ರಾ."

"ನನ್ನ ಸಂಪತ್ತು ನಾಯಿ ಮೊಲೆಯ ಹಾಲಾಯಿತು—ಇದರಿಂದ ಯಾರಿಗೂ ಪ್ರಯೋಜನವಿಲ್ಲ."

"ಪ್ರಯೋಜನವಾಗುವ ಕಾಲಕ್ಕೆ ಆಗೇ ಆಗುತ್ತದೆ. ನಾನು ನಾಳೆ ಬೆಳಗ್ಗೆ ಪ್ರಯಾಣ ಮಾಡಬಹುದೇ?"

"ಬೇಡ ಎಂದರೆ ಒಣ ಉಪಚಾರವಾಗುತ್ತದೆ—ಹೋಗು ಎಂದು ಹೇಳಲು ಬಾಯಿ ಬರುತ್ತಿಲ್ಲ."

"ಸ್ವಾಮಿಗಳಾಗಲಿ ಯಾರೇ ಆಗಲಿ, ನಮ್ಮ ಹೃದಯ ಬಾಂಧವ್ಯ ಕಡಿದು ಹಾಕಲಾರರು ಶಾಂತರುದ್ರಾ. ಯಾವ ವಿಧಿ ನನ್ನನ್ನು ನನ್ನ ಮನೆಯಿಂದ ಹೊರಗಟ್ಟಿತೋ ಅದೇ ವಿಧಿ ನನ್ನನ್ನು ನಿನ್ನ ಮನೆಯಿಂದಲೂ ಹೊರಗಟ್ಟುತ್ತಿದೆ. ಅದಕ್ಕೇಕೆ ವ್ಯಸನಪಡಬೇಕು. ವಿಧಿಯೊಂದಿಗೆ ಹೋರಾಡಿ ಅದನ್ನು ಗೆಲ್ಲಬೇಕೆಂದು ನನ್ನ ಗುರುಗಳು ಅಪ್ಪಣೆ ಕೊಡಿಸಿದ್ದಾರೆ."

"ನನ್ನನ್ನು ಕ್ಷಮಿಸು ಶಂಕರ—ಕ್ಷಮಿಸು."

ಎಂದು ಶಾಂತರುದ್ರ ಶಂಕರನನ್ನು ಅಪ್ಪಿಕೊಂಡು ತನ್ನ ದುಃಖ ತೋಡಿಕೊಂಡ.

ದಾವಾಗ್ನಿಗೆ ಸಿಕ್ಕಿದ ಶಂಕರನ ಹೃದಯಪಕ್ಷಿಯೂ ಕೆಲಕಾಲ ಮಿಲಗುಟ್ಟಿತು.

ಗುರುಗಳ ವಜ್ರಾಯುಧದ ಕಾಂತಿ ಅವನ ಕಣ್ಣು ತೆರೆಯಿಸಿತು. ನಿದ್ರೆಯಿಂದೆದ್ದವನಂತೆ ಶಂಕರ ಮೈ ಕೊಡವಿಕೊಂಡು ಎದ್ದ.

## ೪೫

ಸುಬ್ರಹ್ಮಣ್ಯನ ಸ್ಥಿತಿ ಚಿಂತಾಜನಕವಾಗಿತ್ತು.

ಮಂಕುಹಿಡಿದವನಂತೆ ಒಂದೇ ಎಡೆ ಗಂಟೆಗಟ್ಟಲೆ ಕುಳಿತುಬಿಡುತ್ತಿದ್ದ. ಯಾರು ಮಾತನಾಡಿಸಿದರೂ ಉತ್ತರಕೊಡುತ್ತಿರಲಿಲ್ಲ. ಒಂದು ದಿನ ಗೌರಿ ರವಿಯನ್ನು ಅವನ ಮುಂದೆ ಕೂಡಿಸಿ ಒಳಗೆ ಹೋಗಿದ್ದಳು. ಮಗು ಆಡುತ್ತ ಆಡುತ್ತ ನೆಲಕ್ಕುರುಳಿತು. ಹಣೆಗೆ ಸ್ವಲ್ಪ ಪೆಟ್ಟು ತಾಕಿತು.

ಸುಬ್ರಹ್ಮಣ್ಯ ಕುಳಿತ ಸ್ಥಳ ಬಿಟ್ಟು ಮೇಲಕ್ಕೇಳಲಿಲ್ಲ. ಗೌರಿ ಓಡಿ ಬಂದು ಮಗುವನ್ನೆತ್ತಿಕೊಂಡು ಗಂಡನ ಕಡೆ ತಿರುಗಿ

"ಮಗು ಬಿದ್ದರೂ ಸುಮ್ಮನೆ ಕುಳಿತಿರುವಿರಲ್ಲಾ!" ಎಂದಳು.

ಅವಳ ಮಾತೂ ಸುಬ್ರಹ್ಮಣ್ಯನ ಕಿವಿಯ ಮೇಲೆ ಬೀಳಲಿಲ್ಲ.

ಚಳಿಯಿಲ್ಲ—ಜ್ವರವಿಲ್ಲ. ಮಂಕುತನವೇ ಒಂದು ರೋಗವಾಗಿತ್ತು. ಸುಬ್ರಹ್ಮಣ್ಯನಿಗೆ ಒಂದು ತುತ್ತು ಊಟಮಾಡಿಸಬೇಕಾದರೆ ಗೌರಿಗೂ ಪಾರ್ವತಮ್ಮನವರಿಗೂ ಸಾಕುಸಾಕಾಗಿ ಹೋಗುತ್ತಿತ್ತು. ಎಲೆಯ ಮುಂದೆ ಕುಳಿತರೆ, ಅವನು ಕುಳಿತೇ ಇರುತ್ತಿದ್ದ. ಅನ್ನವೆಲ್ಲಾ ಆರಿ ತಂಗಳಾದರೂ ಅವನಿಗೆ ಗಮನವೇ ಇಲ್ಲ.

"ಅನ್ನ ಬಡಿಸಿದೆ, ಸಾರು ಹಾಕಲೇನೋ ಸುಬ್ಬು"

ಎಂದು ತಾಯಿ ಹಲವು ಸಾರಿ ಎಚ್ಚರಿಸಿದ ಮೇಲೆ ಸುಬ್ರಹ್ಮಣ್ಯ ಅನ್ನದ ಮೇಲೆ ಕೈಯಿಡುತ್ತಿದ್ದ. ತಾಯಿ ಸಾರು ಬಡಿಸುತ್ತಿದ್ದರು. ಸಾರು ಕೋಡಿಯಾಗಿ ಒಂದು ಕಡೆಗೆ ಹರಿದುಹೋಗುತ್ತಿತ್ತು. ಅನ್ನ ಸಾರು ಸುಬ್ರಹ್ಮಣ್ಯನ ಬಾಯಿಯ ವರೆಗೆ ಬರುತ್ತಿರಲಿಲ್ಲ.

ಪಾರ್ವತಮ್ಮ ತಾವೇ ಅನ್ನ ಕಲಸಿ ಮಗನಿಗೆ ಊಟಮಾಡಿಸಲು ಮೊದಲು ಮಾಡಿದರು. ಒಂದೊಂದು ದಿನ ಸುಬ್ರಹ್ಮಣ್ಯ ತಾಯಿ ಬಾಯಿಗಿಡುತ್ತಿದ್ದ ತುತ್ತುಗಳನ್ನು ನುಂಗುವನು. ಒಂದೊಂದು ದಿನ ಮೊದಲನೆಯ ತುತ್ತಿಗೇ ಮೇಲಕ್ಕೆದ್ದುಬಿಡುವನು.

ಬೆಳಿಗ್ಗೆಯಿಂದ ಸಂಜೆಯ ವರೆವಿಗೂ ಕಣ್ಣೀರ್ಗರೆಯುವುದೇ ಅತ್ತೆ ಸೊಸೆಯರ ವಿಧಿಯಾಯಿತು.

ಜಮೀನು ನೋಡಿಕೊಳ್ಳುವ ಜವಾಬ್ದಾರಿ ಪೂರ್ಣವಾಗಿ ನಿಂಗವ್ವನ ಮೇಲೆ ಬಿತ್ತು. ಬೆಳಗ್ಗೆಯೆದ್ದು ಹೋದರೆ ತೋಟದ ಕೆಲಸ ಮುಗಿಸಿ ಕೊಂಡು ಅವಳು ರಾತ್ರಿಗೆ ಒಂದೇ ಸಲ ಮನೆಗೆ ಬರುತ್ತಿದ್ದಳು.

ಪಾರ್ವತಮ್ಮನವರಿಗೆ ದಿಕ್ಕೇ ತೋರದಂತಾಯಿತು. ಜೋಯಿಸರು 'ಶನಿಕಾಟ'ವೆಂದು ಹೇಳಿ ಪೂಜೆ, ಪುರಸ್ಕಾರ ಆರಂಭಿಸಿದರು. ಯಾರು ಏನು ಹೇಳಿದರೂ ಮಾಡಲು ಗೌರಿ, ಪಾರ್ವತಮ್ಮನವರು ಸಿದ್ಧರಾದರು.

ಪೂಜೆಪುರಸ್ಕಾರಗಳಿಂದಾಗಲಿ, ಔಷಧೋಪಚಾರಗಳಿಂದಾಗಲಿ ಸುಬ್ರಹ್ಮಣ್ಯನ ಸ್ಥಿತಿ ಸುಧಾರಿಸಲಿಲ್ಲ. ದಿನದಿನಕ್ಕೆ ಅದು ಉಲ್ಬಣ ಗೊಳ್ಳುತ್ತಿತ್ತು.

ಜನ ಬಾಯಿಗೆ ಬಂದಂತೆ ಮಾತಾಡಿಕೊಳ್ಳಲಾರಂಭಿಸಿದ್ದರು. 'ಸುಬ್ರಹ್ಮಣ್ಯನಿಗೆ ಹುಚ್ಚು ಹಿಡಿದಿದೆ' ಎಂದು ಕಮಲಮ್ಮ ಊರಿನಲ್ಲಿ ಡಂಗುರ ಸಾರಿದಳು.

ತಿಪ್ಪಾಶಾಸ್ತ್ರಿ ಒಂದು ದಿನ ಬಂದು ಸುಬ್ರಹ್ಮಣ್ಯನ ಸ್ಥಿತಿ ನೋಡಿ

"ಇದು ಮನೆಯಲ್ಲಿ ಗುಣವಾಗುವ ಕಾಹಿಲೆಯಲ್ಲ. ಬೆಂಗಳೂರಿನ ಹುಚ್ಚಾಸ್ಪತ್ರೆಗೆ ಕಳಿಸುವುದು ಒಳ್ಳೆಯದು"

ಎಂದು ಸಲಹೆಯಿತ್ತ. ಗೌರಿ ಸಿಂಹಿಣಿಯಂತೆ ಕೆರಳಿ

"ನಮ್ಮ ಮನೆಯವರ ಯೋಗಕ್ಷೇಮ ನಾವು ನೋಡಿಕೊಳ್ಳು ತ್ತೇವೆ. ನೀವು ಯಾರೂ ನಡುವೆ ಬಾಯಿ ಹಾಕಬೇಕಾದದ್ದಿಲ್ಲ."

ಎಂದು ಕಟುವಾಗಿ ಉತ್ತರಿಸಿದಳು.

ಅಂಗಡಿ ದಾಸಪ್ಪ ಪಾರ್ವತಮ್ಮನವರ ಬಳಿಗೆ ಬಂದು ಕಳಕಳಿ ತೋರುತ್ತಾ "ಸುಬ್ರಹ್ಮಣ್ಯನಿಗೆ ಹೀಗಾಗಿರುವುದು ತುಂಬ ಆಶ್ಚರ್ಯ ಕಣ್ರಮ್ಮ," ಎಂದ.

"ಯಾರ ಕೆಟ್ಟ ಕಣ್ಣು ಬಡೀತೋ ರಾಜಕುಮಾರನಂಥ ನನ್ನ ಮಗ ಹೀಗಾದ" ಎಂದು ಪಾರ್ವತಮ್ಮನವರು ಗೋಳಾಡಿದರು.

"ಶಂಕರನ ಸುದ್ದಿ ಏನಾದರೂ ತಿಳಿಯಿತೇ?"

"ಏನೂ ತಿಳಿಯದಪ್ಪ. ಅವನು ಎಲ್ಲಿದ್ದಾನೋ ಏನು ಮಾಡುತ್ತಿದ್ದಾನೋ ?"

"ಸುಬ್ಬಣ್ಣನಿಗೆ ತಮ್ಮನೆಂದರೆ ಪಂಚಪ್ರಾಣ. ತಮ್ಮ ಹೊರಟು ಹೋದುದೇ ಅವನ ಮನೋರೋಗದ ಕಾರಣ."

"ಎಷ್ಟು ಖರ್ಚಾದರೂ ಚಿಂತೆಯಿಲ್ಲ. ಶಂಕರ ಎಲ್ಲಿದ್ದಾನೆ ಪತ್ತೆ ಮಾಡಿ ಕರೆದುಕೊಂಡು ಬರುವ ಉಪಕಾರ ಮಾಡಿಯಪ್ಪ."

"ನೀವು ಹೇಳದೆಯೇ ನಾವು ಪ್ರಯತ್ನ ಮಾಡುತ್ತಿದ್ದೇವಮ್ಮ. ಅವನ ಪತ್ತೆಯೇ ಸಿಕ್ಕಿಲ್ಲ.—"ತಿಪ್ಪಾಶಾಸ್ತ್ರಿ ಬೆಂಗಳೂರಿಗೆ ಕಳಿಸಿ ಎಂದು ಹೇಳಿದನಂತೆ !"

"ಹೇಳಿದ. ಹೇಗೋ ಕಳಿಸುವುದು ದಾಸಪ್ಪ. ಇವನ ಸ್ಥಿತಿ ನಾನು ನೋಡಲೇ, ಶಂಕರನಿಗಾಗಿ ಹಲುಬಲೇ' ಅರೀದ ಹುಡುಗಿ ಗೌರಿ ದುಃಖ ನೋಡಲೇ. ನನ್ನಂಥ ಪಾಪಿ ಜಗತ್ತಿನಲ್ಲಿ ಯಾರೂ ಇಲ್ಲ. ಆ ಯಮಧರ್ಮರಾಯನಿಗೂ ನನ್ನ ಮೇಲೆ ಕರುಣೆಬಾರದು."

"ಹಾಗನ್ನಬೇಡಿ ತಾಯಿ. ನೀವು ಆಗುವ ಹೊತ್ತಿಗೆ ಇಷ್ಟೆಲ್ಲ ನಿಭಾಯಿಸುತ್ತಿದ್ದೀರಿ. ಇನ್ನೊಬ್ಬರಾಗಿದ್ದರೆ ಊರು ಮನೆ ಬಿಟ್ಟು ದೇಶಾಂತರ ಹೊರಟು ಹೋಗುತ್ತಿದ್ದರು. ಒಳ್ಳೆಯದಾಗುವುದಕ್ಕೆ ಮುಂಚೆ ತುಂಬ ಕಷ್ಟ ಬರುತ್ತಂತೆ. ಹಾಗಂದುಕೊಂಡು ನೀವು ಸಮಾಧಾನ ತಂದುಕೊಳ್ಳಬೇಕು."

"ಶಂಕರನ್ನ ಹುಡುಕಿಸಿ ದಾಸಪ್ಪ."

ದಾಸಪ್ಪ ಆಗಲೆಂದು ಒಪ್ಪಿಕೊಂಡ.

ಮನೆಯಲ್ಲಿ ಎಲ್ಲರ ಅವಸ್ಥೆಗಿಂತ ರವಿಯ ಸ್ಥಿತಿ ಶೋಚನೀಯವಾಗಿತ್ತು. ರವಿಯನ್ನು ಕೇಳುವವರೇ ಇಲ್ಲ. ಗೌರಿಗೆ ಮನೆಗೆಲಸ, ಗಂಡನ ಉಪಚಾರ. ಪಾರ್ವತಮ್ಮನವರಿಗೆ ಪೂಜೆ ಪುರಸ್ಕಾರಗಳು, ಮಗನ ಚಿಂತೆ. ರವಿಗೆ ನ್ಯಾಯವಾಗಿ ಸಲ್ಲಬೇಕಾದ ಉಪಚಾರಕ್ಕೂ ಲೋಪ ಒದಗಿತ್ತು. ಅವನಿಗೆ ಬಟ್ಟೆ ಹಾಕುವವರಿಲ್ಲ. ಹೊತ್ತು ಹೊತ್ತಿಗೆ ಊಟ ಮಾಡಿಸುವವರಿಲ್ಲ. ರವಿಗೆ ಹಸಿವಾದರೆ ಅತ್ತು ಕರೆದು 'ಮಮ್ಮ' ಬರಮಾಡಿಕೊಳ್ಳಬೇಕಾಗಿತ್ತು.

ಪಾರ್ವತಮ್ಮನವರ ಅಂತಃಕರಣಕ್ಕೆ ಬರೆ ಕೊಟ್ಟಂತಾಗಿತ್ತು. ಒಂದೊಂದು ದಿನ ವೊಮ್ಮಗನನ್ನು ತೊಡೆಯ ಮೇಲೆ ಕೂಡಿಸಿಕೊಂಡು "ಏನು ಭಾಗ್ಯಕ್ಕೆ ಈ ಮನೆಯಲ್ಲಿ ಹುಟ್ಟಿದೆಯಪ್ಪಾ" ಎನ್ನುತ್ತಿದ್ದರು.

ಗೌರಿ ಕಣ್ಣೀರ್ಗರೆಯುತ್ತಾ ವಿಷಣ್ಣಳಾಗಿ ನಿಂತುಕೊಂಡರೆ "ಅಳ ಬೇಡ ತಾಯಿ. ನೀನು ಮಹಾ ಪತಿವ್ರತೆ. ನಿನ್ನ ಪುಣ್ಯದಿಂದಲೇ ಎಲ್ಲವೂ ಚೆನ್ನಾಗುತ್ತದೆ" ಎನ್ನುತ್ತಿದ್ದರು. ಗೌರಿ ಅತ್ತೆಯ ಮಾತು ಒಪ್ಪಿಕೊಳ್ಳದೆ,

"ಇಲ್ಲ ಅತ್ತೆ, ನಾನು ಒಳ್ಳೆಯ ನಕ್ಷತ್ರದಲ್ಲಿ ಹುಟ್ಟಿದವಳಲ್ಲ. ನಾನು ಸೇರಿದ ಮನೆಗೆ ನನ್ನಿಂದ ಯಾವ ಸೌಖ್ಯವೂ ಆಗಲಿಲ್ಲ. ಅವ ರನ್ನೂ ಹುರಿದು ಮುಕ್ಕಿ ಈ ಸ್ಥಿತಿಗೆ ತಂದೆ."

"ಇಲ್ಲಪ್ಪಾ ಗೌರಾ, ಹಾಗೆಂದೂ ನೀನು ಭಾವಿಸಿಕೊಳ್ಳಬೇಡ. ನಿನ್ನ ಗಂಡನಿಗೆ ಅಹಿತವಾಗಲಿ ಎಂದು ನೀನೇನೂ ಮಾಡಲಿಲ್ಲ. ನಿನಗೂ ಚಿಕ್ಕ ವಯಸ್ಸು, ಅನುಭವ ಸಾಲದು. ಹವಣು ಮೀರಿ ಕೋಪ ತೋರಿಸಿದೆ. ನಿನ್ನ ಕೋಪದಿಂದ ಒಳ್ಳೆಯದೇ ಆಯಿತಲ್ಲ ಗೌರಾ—ಸುಬ್ಬು ದಾರೀಗೆ ಬಂದ. ನಿನ್ನಿಂದ ಈ ಮನೆಗೆ ಶ್ರೇಯಸ್ಸೇ ಆಗಿದೆ, ಗೌರಾ— ನೀನು ಒಳ್ಳೆಯ ನಕ್ಷತ್ರದಲ್ಲಿಯೇ ಹುಟ್ಟಿದ್ದೀ"

ಎಂದು ಸೊಸೆಯ, ಕೆನ್ನೆ ಸವರಿ, ಮುಂದಲೆ ತಿದ್ದಿ ಪ್ರೀತಿಯಿಂದ ಸಮಾಧಾನ ಹೇಳುತ್ತಿದ್ದರು.

*

## ೪೭

ವಕೀಲ ಹನುಮಂತರಾಯರು ದೇಸಾಯರ ಮನೆತನಕ್ಕೆ ಸೇರಿದವರು. ವಂಶಪಾರಂಪರ್ಯವಾದ ದೇಸಗತ್ತಿಯ ಸಾಕಷ್ಟು ಆಸ್ತಿಯೂ ಅವರ ಕೈವಶವಾಗಿತ್ತು. ಅವರ ಕುಟುಂಬ ರಾಧಾಬಾಯಿಯವರೂ ತೌರುಮನೆಯಿಂದ ನಗನಾಣ್ಯವನ್ನಲ್ಲದೆ, ಸ್ವಲ್ಪ ರೊಕ್ಕವನ್ನೂ ತಂದಿದ್ದರು. ಹನುಮಂತರಾಯರು ಪುಣೆಯಲ್ಲಿ ವಕೀಲ ವೃತ್ತಿಯನ್ನಾರಂಭಿಸಿದರು.

ಹನುಮಂತರಾಯರು ಧಾರವಾಡದಲ್ಲಿ ವಕೀಲಿ ಆರಂಭಿಸಿದ ಕಾಲವೂ ಪ್ರಶಸ್ತವಾಗಿತ್ತು. ಊರಿನಲ್ಲಿ ಹೆಚ್ಚಾಗಿ ಪ್ಲೀಡರುಗಳೇ ತುಂಬಿದ್ದರು. ಬಿ. ಎ. ಎಲ್‌ಎಲ್. ಬಿ ಮಾಡಿದ 'ಅಡ್ವೋಕೇಟ'ರ ಸಂಖ್ಯೆ ಪರಿಮಿತವಾಗಿದ್ದುದರಿಂದ ದೇಸಾಯರ ಭವಿಷ್ಯ ಸುಗಮವಾಯಿತು. ಹನುಮಂತರಾಯರಿಗೆ ಇತರ ವಕೀಲರಿಗೆ ದುರ್ಲಭವಾಗಿದ್ದ ಭೂಸ್ಥಿತಿಯಿದ್ದುದೂ ಅವರ ವೃತ್ತಿಗೆ ಅನುಕೂಲವಾಯಿತು. ಅವರ ರೈತರು ಬೇರೆ ವಕೀಲರನ್ನು ಹುಡುಕಿಕೊಂಡು ಹೋಗಬೇಕಾಗಿರಲಿಲ್ಲ.

ಹನುಮಂತರಾಯರು 'ಕ್ರಿಮಿನಲ್ ವಕೀಲರಾಗಿ ನಾಲ್ಕಾರು ವರ್ಷಗಳಲ್ಲಿ ಕೀರ್ತಿ ಗಳಿಸಿದರು. ಕೀರ್ತಿಯ ಬೆನ್ನುಹಿಂದೆ ಸಂಪತ್ತೂ ಬಂದಿತು. ರಾಯರು ಮಾಳಮಡ್ಡಿ ಗುಡ್ಡದ ಮೇಲೆ ಭವ್ಯವಾದ ಬಂಗಲೆ ಕಟ್ಟಿಸಿ ಊರಿನಲ್ಲಿ ತಮ್ಮ ಪ್ರತಿಷ್ಠೆ ಬೆಳಸಿಕೊಂಡರು.

ರಾಯರು ವಕೀಲಿ, ಸಂಪಾದನೆ ಎರಡರಲ್ಲಿಯೇ ತೃಪ್ತಿಪಟ್ಟುಕೊಳ್ಳಲಿಲ್ಲ. ಕೀರ್ತಿಕಾಮನೆ ಅವರನ್ನು ಕಾಂಗ್ರೆಸ್ ಪಕ್ಷದ ಮಡಿಲಿನಲ್ಲಿ ಹಾಕಿತು. ಒಂದೆರಡು ಬಾರಿ ಜೈಲುವಾಸವೂ ರಾಯರಿಗೆ ಪ್ರಾಪ್ತವಾಗಿ ಅವರಿಗೆ 'ಪುಢಾರಿ' ಪಟ್ಟವೂ ಸಿಕ್ಕಿತು. ಹರಿಜನರಿಗೆ ದೇವಾಲಯ ಪ್ರವೇಶ ಕೊಡಿಸಲೆತ್ನಿಸಿ ರಾಯರು ಸವರ್ಣೀಯರ ಅವಕೃಪೆಗೂ ಪಾತ್ರರಾಗಿದ್ದರು.

ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ, ರಾಷ್ಟ್ರ ತಮ್ಮ ದೀರ್ಘ

ಕಾಲದ ಸೇವೆಯನ್ನು ಗೌರವಿಸಿ, ತಮಗೊಂದು ಮಂತ್ರಿಪದವಿಯನ್ನು ಪ್ರಸಾದಿಸುವುದೆಂದು ರಾಯರು ನೆರೆನಂಬಿದ್ದರು. ಆದರೆ ಕಾಂಗ್ರೆಸ್ ರಾಜಕಾರಣ ಚಿತ್ರವಿಚಿತ್ರ ರೂಪುತಾಳಿ ರಾಯರಿಗೆ ಮಂತ್ರಿಪದವಿಗೆ ಸೊನ್ನೆ ಬಿದ್ದುದಲ್ಲದೆ ಕಾಂಗ್ರೆಸ್ ಸಮಿತಿಯ ಅಧ್ಯಕ್ಷಸ್ಥಾನಕ್ಕೂ ಸೊನ್ನೆ ಬಿದ್ದಿತು. ರಾಯರು ಬೇಸರಗೊಂಡು, ಕಾಂಗ್ರೆಸ್ಸಿಗೆ ರಾಜೀನಾಮೆ ಯಿತ್ತು, ಕಡಪಾ ಬೈಲಿನಲ್ಲಿ ನಡೆದ ಸಭೆಯಲ್ಲಿ ತಮ್ಮ ಖಾದಿ ಜುಬ್ಬ ಹರಿದೆಸೆದು, ಗಾಂಧಿಯ ಕುಲಗೋತ್ರ ಜಾಲಾಡಿ ತೃಪ್ತರಾಗಿದ್ದರು.

ಮಗ ಮನೋಹರ ಬೆಳಗಾಂವಿಯಲ್ಲಿ ಲಾ ಪರೀಕ್ಷೆ ಮುಗಿಸಿ ಕೊಂಡು ಬಂದಿದ್ದ. ಅವನಿಗೆ ಲಗ್ನಮಾಡಿ ರಾಯರು ವಕೀಲಿಯನ್ನ ಅವನ ಕೊರಳಿಗೆ ಕಟ್ಟಿ ತಾವು ವಿಶ್ರಾಂತಿ ಸುಖವನ್ನನುಭವಿಸತೊಡ ಗಿದ್ದರು. ಕೋರ್ಟಿನ ಕೆಲಸವನ್ನೆಲ್ಲಾ ಮನೋಹರನೇ ನೋಡಿಕೊಳ್ಳು ತ್ತಿದ್ದರೂ ರಾಯರು ಕೆಲವು ಮುಖ್ಯ ಕೇಸುಗಳಿಗೆ ಕಕ್ಷಿದಾರರ ಕೋರಿಕೆ ಯಂತೆ 'ಸ್ವಯಂ ಹಾಜರಿ' ಹಾಕುತ್ತಿದ್ದರು.

ಕಾಂಗ್ರೆಸ್ ಕೈ ಕೊಟ್ಟಮೇಲೆ ರಾಯರ ಲಕ್ಷ್ಯ ಧರ್ಮದ ಕಡೆಗೆ ಹೋಯಿತು ಮೊದಲಿನಿಂದಲೂ ವಿದ್ಯಾಭಿಮಾನಿಗಳಾಗಿದ್ದ ರಾಯರಲ್ಲಿ ಹೊಸ ಚೇತನವರಳಿತು. ರಾಯರು ಮಧ್ವ ಸಿದ್ಧಾಂತದ ಕೂಲಂಕಷ ಅಭ್ಯಾಸ ಕೈಗೊಂಡು 'ಮಣಿಮಂಜರಿ' ಯನ್ನು ಕನ್ನಡಕ್ಕೆ ಅನುವಾದ ಮಾಡಿ ಪ್ರಕಟಿಸಿದರು. 'ಮಧ್ವವಿಜಯ' ಮಹಾಭಾರತ ತಾತ್ಪರ್ಯ ನಿರ್ಣಯ ಗ್ರಂಥಗಳ ಅನುವಾದವನ್ನು ಅವರು ಮುಂದುವರಿಸಿದ್ದುದಲ್ಲದೆ ಇಂಗ್ಲಿಷಿನಲ್ಲಿ 'ಶ್ರೀ ಮಾಧ್ವರು, ಅವರ ದರ್ಶನ' ಎಂಬ ಉದ್ಗ್ರಂಥದ ರಚನೆಗೆ ಕೈ ಹಾಕಿದ್ದರು.

ಇಂಗ್ಲಿಷ್, ಕನ್ನಡ ಚೆನ್ನಾಗಿಲ್ಲ ಬಶಕಂರ ಕಾರ್ಯದರ್ಶಿಯಾಗಿ ದೊರೆತುದು ರಾಯರಿಗೆ ಹೊಸ ಸ್ಫೂರ್ತಿ ಕೊಟ್ಟಂತಾಗಿತ್ತು. ಬೆಳಿಗ್ಗೆ ಎಂಟು ಗಂಟೆಯಿಂದ ಹನ್ನೆರಡರ ವರೆಗೆ ರಾಯರು ಹೇಳಿದುದನ್ನು ಶಂಕರ ಬರೆದುಕೊಳ್ಳಬೇಕಾಗಿತ್ತು; ಮಧ್ಯಾಹ್ನ ಮೂರರಿಂಹ ಆರು, ಏಳರ ವರೆಗೆ ಬರವಣಿಗೆ ಮುಂದುವರಿಯುತ್ತಿತ್ತು.

ಶಂಕರ ಸಮೀಪದಲ್ಲಿರಲಿ, ಎಂದು ರಾಯರು ತಮ್ಮ ಮಾಳಮಡ್ಡಿ

ಬಂಗಲೆಯ ಉಪಗೃಹವಲ್ಲಿ (ಔಟ್-ಹೌಸ್) ಅವನಿಗೆ ಒಂದು ರೂಮು ಕೊಟ್ಟಿದ್ದರು. ಊಟ ತಿಂಡಿಗೆ ಮಾತ್ರ ಅವನು ಸ್ಟೇಷನ್ ರೋಡಿನಲ್ಲಿದ್ದ "ವಿಶ್ರಾಂತಿ ಭವನ"ಕ್ಕೆ ಹೋಗಿ ಬರಬೇಕಾಗಿತ್ತು. ಅರುವತ್ತು ರೂಪಾಯಿ ಪಗಾರ ನಿಷ್ಕರ್ಷೆಯಾಗಿತ್ತು.

ಮನೋಹರನಿಗೂ ಕೈತುಂಬ ಕೆಲಸವಿದ್ದುದರಿಂದ ಅವನು ನಿತ್ಯ ಶಂಕರನನ್ನು ಭೇಟಿಯಾಗಲು ಸಾಧ್ಯವಾಗುತ್ತಿರಲಿಲ್ಲ. ಭಾನುವಾರ ಶಂಕರನನ್ನು ಕರೆದುಕೊಂಡು ಕೆಳಗೇರಿಯ ಕಡೆಗೋ ಬೆಳಗಾಂವಿ ರಸ್ತೆಯಲ್ಲಿಯೋ ಮನೋಹರ್ ಡ್ರೈವ್ ಹೋಗುತ್ತಿದ್ದ.

ಬಟ್ಟೆ ಅಂಗಡಿಯ ಥಾನುಗಳನ್ನು ಅಳೆಯುವ ಕೆಲಸಕ್ಕಿಂತ ಮಧ್ವ ಸಿದ್ಧಾಂತ ಬರೆದುಕೊಳ್ಳುವ ಕೆಲಸ ಶಂಕರನಿಗೆ ಪ್ರಿಯವಾಗಿದ್ದರೂ ರಾಯರ ದೃಷ್ಟಿ, ವಾತಾವರಣ ಅವನಿಗೆ ತುಂಬ ಜುಗುಪ್ಸೆಯನ್ನುಂಟು ಮಾಡುತ್ತಿತ್ತು.

ರಾಯರು ಕಾಂಗ್ರೆಸ್—ರಾಜಕೀಯ—ಬಿಟ್ಟು ದೂರವಿದ್ದರೂ ಅದರ ಸೋಂಕು ಅವರನ್ನು ಬಿಟ್ಟಿರಲಿಲ್ಲ. ನೂರೆಂಟು ಸಣ್ಣ ಪುಟ್ಟ ಚುನಾವಣೆಗಳ ಅಭ್ಯರ್ಥಿಗಳು ರಾಯರ ಸಲಹೆ ಕೇಳಲು ಬರುತ್ತಿದ್ದರು. ರಾಯರು ಚಾಟಿಯಿಲ್ಲದೆ ಬುಗುರಿಯಾಡಿಸುವ ಕಲೆಯನ್ನು ಚೆನ್ನಾಗಿ ಸಾಧಿಸಿಕೊಂಡಿದ್ದರು. ನೇಪಥ್ಯದಲ್ಲಿ ನಿಂತುಕೊಂಡು ರಾಯರು ಆಡುತ್ತಿದ್ದ ಆಟ ನೋಡಿ ನೋಡಿ ಶಂಕರನಿಗೆ ಸಾಕುಸಾಕಾಗಿ ಹೋಯಿತು. ಎಲ್ಲಕ್ಕೂ ಹೆಚ್ಚಾಗಿ ರಾಯರ ಬಾಯಲ್ಲಿ ಲಿಂಗಾಯಿತರ ಬಗ್ಗೆ ಬರುತ್ತಿದ್ದ ಭರ್ತ್ಸನೆಯ ಮಾತುಗಳು ಶಂಕರನ ರಕ್ತವನ್ನು ಬಿಸಿ ಮಾಡುತ್ತಿದ್ದುವು. ಕಾಂಗ್ರೆಸ್ ಸಮಿತಿಯಲ್ಲಿ ಲಿಂಗಾಯಿತರು ರಾಯರನ್ನು ಸ್ಥಾನ ಭ್ರಷ್ಟರನ್ನಾಗಿಸಿದ್ದುದರಿಂದ ಆ ಜಾತಿಯ ಮೇಲೆ ರಾಯರು ಸೇಡು ತೀರಿಸಿಕೊಳ್ಳಲು ಹೊರಟಿದ್ದರು. ಲಿಂಗಾಯಿತರನ್ನು 'ಕೋಮುವಾರು ಭೂತ' ಎಂದು ಕರೆಯುವುದು ರಾಯರಿಗೆ ಅತ್ಯಂತ ಪ್ರಿಯವಾಗಿತ್ತು. ಒಂದು ದಿನ ಶಂಕರ ಧೈರ್ಯಮಾಡಿ

"ಲಿಂಗಾಯಿತರನ್ನು ಕೋಮುವಾರು ಭೂತಗಳೆಂದು ಹೇಗೆ ಕರೆಯುವಿರಿ ಸಾರ್?" ಎಂದು ಕೇಳಿದ.

ರಾಯರು ಶಂಕರನ ಅಲ್ಪಮತಿಗೆ ಕನಿಕರ ತೋರಿಸುತ್ತಾ

"ನೀವಿನ್ನೂ ಸಣ್ಣವರು ಶಂಕರ್. ಲಿಂಗಾಯಿತರ ಹಣೇಬರಹ ನಿಮಗೆ ಗೊತ್ತಿಲ್ಲ. ತಮ್ಮ ಜನ, ಜಾತಿಯಲ್ಲದೆ ಅವರಿಗೆ ಪ್ರಪಂಚವೇ ಬೇಡ. ನೋಡಿ—ಕರ್ನಾಟಕದಲ್ಲಿ ಸತ್ಯಾಗ್ರಹ ಚಳುವಳಿಯಲ್ಲಿ ಭಾಗ ವಹಿಸಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿ, ನಮ್ಮ ವಕೀಲಿ ಬಿಟ್ಟು ತ್ಯಾಗಮಾಡಿ ಮನೆ ಹಾಳು ಮಾಡಿಕೊಂಡವರು ನಾವು; ದೇಶಕ್ಕೆ ಸ್ವಾತಂತ್ರ್ಯ ಬಂದ ಕೂಡಲೆ ಅಧಿಕಾರದ ಗದ್ದುಗೆ ಏರಿದವರು ಲಿಂಗಾ ಯಿತರು. ಕೆ. ಪಿ. ಸಿ. ಸಿ. ನೋಡಿ ಮೊದಲಿಂದ ಕೊನೆಯ ವರೆಗೂ ಲಿಂಗಾಯಿತರೇ-ಉಳಿದವರಿಗೆ ಯಾವ ಸ್ಥಾನವೂ ಇಲ್ಲ."

"ಲಿಂಗಾಯಿತರು ಸ್ವಜಾತಿ ಪ್ರಾಬಲ್ಯಕ್ಕೆ ಪ್ರಯತ್ನಿಸಿದರೆ ಅದು ಕೋಮುವಾರು ಭಾವನೆಯಾಗುತ್ತದೆ. ಬ್ರಾಹ್ಮಣರು ಅದೇ ಪ್ರಾಬಲ್ಯಕ್ಕೆ ಪ್ರಯತ್ನಿಸಿದರೆ ಅದು ಕೋಮುವಾರು ಭಾವನೆಯಾಗುವುದಿಲ್ಲವೇ?"

"ಬ್ರಾಹ್ಮಣ್ಯರಲ್ಲಿ ಐಕಮತ್ಯವಿಲ್ಲ ಶಂಕರ್. ಅನೈಕಮತ್ಯದಿಂದ ಅವರು ಅಧಿಕಾರ ಸೂತ್ರಗಳನ್ನು ಇತರರ ಕೈಯಲ್ಲಿಡುತ್ತಿದ್ದಾರೆ. ಲಿಂಗಾ ಯಿತರು ನೋಡಿ—ಒಬ್ಬರನ್ನೊಬ್ಬರು ಬಿಟ್ಟುಕೊಡುವುದಿಲ್ಲ."

"ಹೀಗೆ ನಾವು ಲಿಂಗಾಯಿತರು—ಬ್ರಾಹ್ಮಣರು ಎಂದು ಬಡಿದಾಡು ತ್ತಿದ್ದರೆ ಈ ದೇಶ ಉದ್ಧಾರವಾಗುವುದು ಹೇಗೆ ಸಾರ್?"

"ಸರಿ—ದೇಶ ಉದ್ಧಾರವಾದರೆಷ್ಟು ಬಿಟ್ಟರೆಷ್ಟು-ನಾವು ಉದ್ಧಾರ ವಾದರೆ ಸಾಕು."

ಎಂದು ರಾಯರು ಅಪ್ಪಣೆ ಕೊಡಿಸಿದರು. ಶಂಕರ ಇನ್ನು ವಾದ ಮಾಡಿ ಪ್ರಯೋಜನವಿಲ್ಲವೆಂದು ಶಾಂತನಾದ.

ರಾಯರ ಮಧ್ವ ಸಿದ್ಧಾಂತ ಗ್ರಂಥ ಅವರ ಪಾಂಡಿತ್ಯದ ಫಲವಾಗದೆ ಉಪರತಿಗಳ ಪ್ರತೀಕವಾಗಿತ್ತು.

ರಾಯರ ಗ್ರಂಥ ಬರೆದುಕೊಳ್ಳುತ್ತಿದ್ದ ಶಂಕರನಿಗೆ ನರಕಯಾತನೆ ಯಾಗುತ್ತಿತ್ತು. 'ಶಂಕರ ಮಾಧ್ವರ ವಿಚಾರವಾಹಿನಿಯಲ್ಲಿ ವಿಭಿನ್ನತೆ ಯಿದೆಯೇ ವಿನಾ ಅವರ ವೈಯಕ್ತಿಕ ಗುಣಶೀಲಗಳಲ್ಲಿ ಇಲ್ಲ. ಮಾಧ್ವರು ಶಂಕರನನ್ನು ಹೆಸರಿಸುವಾಗಲೆಲ್ಲಾ ಪರಮ ಗೌರವದಿಂದಲೇ ಸಂಬೋ

ಧಿಸಿದ್ದಾರೆ. ಈ ಸಣ್ಣ ಜನವೇಕೆ ಆ ಇಬ್ಬರು ಪುಣ್ಯಪುರುಷರ ಹೆಸರು ಕೆಡಿಸುತ್ತಾರೆ' ಎಂದು ಮಮ್ಮಲ ಮರುಗುವನು.

ಲಿಪಿಕಾರ ವೃತ್ತಿ ಶಂಕರನ ಮನಸ್ಸಿನಲ್ಲಿ ಸುಪ್ತವಾಗಿದ್ದ ಕಾವ್ಯ ಶಕ್ತಿಯನ್ನು ಪ್ರಚೋದನಗೊಳಿಸಿತ್ತು. 'ನಾನೇಕೆ ಬರೆಯಬಾರದು. ದ್ವೇಷ, ವೈಷಮ್ಯ, ಅಸೂಯೆ ತುಂಬಿದ ಲೇಖನಗಳು, ಗ್ರಂಥಗಳು ಹೊರಬೀಳುತ್ತಿರುವಾಗ ಈ ವಿಷವಾಹಿನಿಯನ್ನು ಎದುರಿಸುವುದಕ್ಕೆ ಸೌಶೀಲ್ಯ, ಸೌಭ್ರಾತೃತ್ವ, ಸೌಜನ್ಯ ತುಂಬಿದ ಲೇಖನಗಳು, ಗ್ರಂಥಗಳು ಹೊರಬರಬೇಡವೇ?' ಎಂದು ವಿಚಾರಮಾಡಲಾರಂಭಿಸಿದ.

ದ್ವೈತ, ಅದ್ವೈತ; ಅದ್ವೈತ ವಿಶಿಷ್ಟಾದ್ವೈತ; ವಿಶಿಷ್ಟಾದ್ವೈತ, ಶಕ್ತಿ ವಿಶಿಷ್ಟಾದ್ವೈತ ಇವುಗಳ ಮಧ್ಯೆ ಇರುವ ಅಂತರವನ್ನು ಹಲವರು ವಿವರಿಸಿದ್ದಾರೆ. ಇವುಗಳಿಗಿರುವ ಸಾಮೀಪ್ಯ, ಸಾರೂಪ್ಯ, ಸಾಮರಸ್ಯ ಗಳನ್ನು ಕುರಿತು ಬರೆಯಬೇಕೆಂಬ ಉತ್ಕಟಾಕಾಂಕ್ಷೆ ಶಂಕರನ ಮನಸ್ಸಿ ನಲ್ಲಿ ಮೂಡಿತು.

ಕಾಲೇಜಿನಲ್ಲಿರುವಾಗಲೇ ಶಂಕರ ತನ್ನ ಮನಸ್ಸಿಗೆ ಹೊಳೆದ ಭಾವನೆ ಗಳನ್ನು ಸಣ್ಣಸಣ್ಣ ಕವನಗಳಾಗಿ ಬರೆದು ಒಂದು ಪುಸ್ತಕದಲ್ಲಿ ಗುರುತು ಹಾಕುವ ಪರಿಪಾಟವಿಟ್ಟುಕೊಂಡಿದ್ದ. ಅಂದು ಬೀಜರೂಪಲ್ಲಿದ್ದ ಕಾವ್ಯ ಶಕ್ತಿ ಮೊಳೆತು ಕುಡಿಯಿಟ್ಟಿತ್ತು. ದೇಸಾಯಿ ಹನುಮಂತರಾಯರ ವಿಪರೀತ ವಿಚಾರಧೋರಣೆ ಅದನ್ನು ಕಸಿಮಾಡಿತ್ತು.

ಎರಡು ವಾರಗಳ ತರುವಾಯ ಒಂದು ದಿನ ಶಂಕರ ದೇಸಾಯರ ವ್ಯಾಸಂಗ ಕೋಣೆ ಪ್ರವೇಶಿಸಿದಾಗ ರಾಯರು ಅದೇ ಕೆಲವು ಪತ್ರಿಕೆ ಗಳನ್ನು ಓದಿ ಮುಗಿಸಿ 'ಕರ್ಮವೀರ' ಕೈಯಲ್ಲಿ ಹಿಡಿದಿದ್ದರು. ಶಂಕರನ ಮುಖ ಕಂಡೊಡನೆಯೇ,

"ಬನ್ನಿ ಶಂಕರ್. ಈ ವಾರದ 'ಕರ್ಮವೀರ' ನೋಡಿದಿರೇನು?"

ಎಂದು ಪ್ರಶ್ನಿಸಿದರು. ಶಂಕರ ತಬ್ಬಿಬ್ಬಾಗಿ ಕೂಡಲೆ ಚೇತರಿಸಿ ಕೊಂಡು "ಇಲ್ಲ ಸಾರ್" ಎಂದ.

"ನೋಡಿ, ಈ ವಾರ ಯಾವನೋ 'ಶಿವಕಿಂಕರ' ನಂತೆ. ದ್ವೈತಾ ದ್ವೈತ ಸಮನ್ವಯದ ಮೇಲೆ ಲೇಖನ ಬರೆದಿದ್ದಾನೆ."

ಎಂದು ಪತ್ರಿಕೆಯನ್ನು ಶಂಕರನ ಕೈಯಲ್ಲಿತ್ತರು. ಶಂಕರ ಲೇಖನ ಓದಿ ಮುಗಿಸಿದ ಮೇಲೆ. "ಲೇಖನ ಓದಿದಿರಾ?" ಎಂದು ಕೇಳಿದರು.

"ಓದಿದೆ ಸಾರ್."

"ಹೇಗಿದೆ?"

"ನೆಟ್ಟಗಿದೆ, ಹರಿ ಹರನ ಕಲ್ಪನೆಯೇ ದ್ವೈತಾದ್ವೈತದ ಸಮನ್ವಯ ಸೂಚಿಸುತ್ತದಲ್ಲಾ."

"ಅದು ಆದರ್ಶ—ಇದು ದರ್ಶನ."

"ದರ್ಶನದ ಗುರಿಯೂ ಆದರ್ಶ ಸಾಧನವಲ್ಲವೆ?"

"ದರ್ಶನಮಾರ್ಗ ನಿರ್ದೇಶಮಾಡುತ್ತದೆ. ಆದರ್ಶದ ಗೊಡವೆಗೆ ಅದು ಹೋಗುವುದಿಲ್ಲ. ಈ ಲೇಖಕ ಶಂಕರನನ್ನು ಶ್ರೀ ಮಾಧ್ವರ ಪಂಕ್ತಿಯಲ್ಲಿ ಕೂಡಿಸುತ್ತಾನಲ್ಲ!"

"ಕೂಡಿಸ ಬಾರದೇ?"

"ಪ್ರಚ್ಛನ್ನನಾಸ್ತಿಕನನ್ನು ಪರಮವೈಷ್ಣವ ಶಿರೋಮಣಿಯ ಪಂಕ್ತಿಯಲ್ಲಿ ಕೂಡಿಸುವುದು ಧರ್ಮದ್ರೋಹ."

ಇನ್ನು ವಾದಮಾಡಿ ಪ್ರಯೋಜನವಿಲ್ಲವೆಂದುಕೊಂಡು ಶಂಕರ "ನನಗೇನು ಗೊತ್ತು ಸಾರ್. ಹೇಳೀಕೇಳೀ ನಾನು ನಿಮ್ಮ ಕಾರಕೂನ. ನೀವು ಹೇಳಿದ್ದು ಬರೆದುಕೊಳ್ಳುವಷ್ಟೇ ನನ್ನ ಕೆಲಸ."

ಎಂದ. ದೇಸಾಯರ ಗ್ರಂಥನಿರೂಪಣೆ ಮುಂದುವರಿಯಿತು.

ಆರು ತಿಂಗಳು ಕಳೆಯುವುದರಲ್ಲಿ ಶಂಕರನಿಗೆ ಸಾಕುಸಾಕಾಗಿ ಹೋಯಿತು. ಈ ಮಧ್ಯೆಯೇ ತನ್ನ ಕೆಲಸಕ್ಕೆ ಶರಣು ಹೊಡೆಯಬೇಕೆಂಬ ಯೋಚನೆ ಹಲವು ಬಾರಿ ಅವನ ಮನಸ್ಸಿಗೆ ಹೊಳೆಯಿತು. ಆದರೆ ಕರ್ತವ್ಯ ಅವನನ್ನು ಬಂದಿಸಿತ್ತು. ರಾಯರ ಗ್ರಂಥ ಮುಗಿಯುವವರೆಗೆ ತಾನು ಎಲ್ಲಿಗೂ ಹೋಗಬಾರದೆಂದು ನಿರ್ಧರಿಸಿಕೊಂಡು ಕೆಲಸ ತೂಗಿಸಿಕೊಂಡು ಹೋಗುತ್ತಿದ್ದ.

ಗ್ರಂಥ ಮುಗಿದಿತ್ತು. ರಾಯರೂ ಸುಹಾಸವದನರಾಗಿ ತಮ್ಮ ಗ್ರಂಥದ ಹಸ್ತಪ್ರತಿಯನ್ನು ತಿರುವಿಹಾಕುತ್ತಿದ್ದರು. ಸುಮಾರು ಆರುನೂರು ಪುಟಗಳ ಬೃಹದ್ಗ್ರಂಥ—ಮಧ್ವಮತ ಪರಿಜ್ಞಾನದ ಸಾರ–ದ್ವೈತ

ದರ್ಶನದ ರಸಘಟ್ಟ–ತಿರುಪತಿ ಸಭೆಯಲ್ಲಿ, ಮಂತ್ರಾಲಯದಲ್ಲಿ, ಉಡು ಪಿಯಲ್ಲಿ ಮಾನ ಸನ್ಮಾನ ಹೊಂದುವ ಯೋಜನೆಯಲ್ಲಿ ರಾಯರಿದ್ದರು. ಶಂಕರ ಬರುತ್ತಲೇ ಅವನನ್ನು ನಗೆಮೊಗದಿಂದ ಸ್ವಾಗತಿಸಿ

"ಚಲೋ ಕೆಲಸ ಮಾಡಿರುವಿರಿ ಶಂಕರ್. ಹಸ್ತಪ್ರತಿ ಸುಂದರ ವಾಗಿದೆ. ನೇರವಾಗಿ ಅಚ್ಚಿನಾಲಯಕ್ಕೆ ಕಳಿಸುವಂತಿದೆ. ನಿಮ್ಮ ಕೆಲ ಸಕ್ಕೆ ಭಕ್ಷೀಸ್ ಕೊಡಲು ಮನೋಹರನಿಗೆ ಹೇಳಿದ್ದೆ—ಕೊಟ್ಟನೇ?"

"ಅವರಿಗೂ ನನಗೂ ಭೆಟ್ಟಿಯಾಗಿಲ್ಲ ಸಾರ್. ಅವರೂ ತುಂಬ ಕೆಲಸದ ಗಡಿಬಿಡಿಯಲ್ಲಿದ್ದಾರೆ."

"ಹೌದು ಹೌದು–ಕಲಘಟಗಿ ಕೇಸು ಮುಂದುಮುಂದಕ್ಕೆ ಹೋಗು ತ್ತಿದೆ."

"ಸಾರ್. ನಾನು ತಮ್ಮಲ್ಲಿ ಒಂದು ವಿನಂತಿಮಾಡಿಕೊಳ್ಳುವು ದಕ್ಕೆ ಬಂದೆ."

"ಹೇಳಿ."

"ನನ್ನ ಕೆಲಸ ಅಪೂರ್ಣವಾಗದಂತೆ ಮುಗಿಸಿದ್ದೇನೆ. ಇನ್ನು ಅಪ್ಪಣೆಯಾದರೆ ನಾನು ಕೆಲಸದಿಂದ ನಿವೃತ್ತನಾಗಲು ಬಯಸುತ್ತೇನೆ."

"ಏಕೆ ಶಂಕರ್—ಪಗಾರ ಸಾಲದೇನು? ಐದು ರೂಪಾಯಿ ಬಡ್ತಿ ಮಾಡುತ್ತೇನೆ. ಇನ್ನೊಂದು ಗ್ರಂಥ ಆರಂಭಿಸಬೇಕೆಂದಿದ್ದೇನೆ—ನೀವು ಹೊರಟುಹೋದರೆ ನನ್ನ ಕೆಲಸಕ್ಕೆ ತೊಂದರೆಯಾಗುತ್ತದೆ."

"ಅದೇ ಕಾರಣಕ್ಕೆ ನಾನು ಇಷ್ಟು ದಿನ ಕಚ್ಚಿಕೊಂಡಿದ್ದೆ. ಇನ್ನು ಮೇಲೆ ಈ ಕೆಲಸ ಮಾಡಲು ನನಗೆ ಸಾಧ್ಯವಿಲ್ಲ."

"ಏಕೆ?"

"ಸತ್ಯ ಹೇಳಲೇ ಸಾರ್?"

"ಹೇಳಿ."

"ಪ್ರತಿನಿತ್ಯ ಆಚಾರ್ಯ ಶಂಕರರ ಭರ್ತ್ಸನೆ ಕೇಳಿ ಕೇಳಿ ನನ್ನ ಕಿವಿಗಳು ತೂತು ಬಿದ್ದುಹೋಗಿವೆ. ಅವರ ಬಗ್ಗೆ ತಮ್ಮ ಅಭಿಪ್ರಾಯ ಏನೇ ಇರಬಹುದು.–ಈ ರಾಷ್ಟ್ರದಲ್ಲಿ ಹಿಂದೂ ಧರ್ಮ ಉಳಿಯುವು ದಕ್ಕೆ ಶಂಕರರು ಮುಂದೆ ಬರದಿದ್ದರೆ ಆ ಧರ್ಮ ನಾಮಾವಶೇಷವಾಗು

ತ್ತಿತ್ತು. ಸಾಮ್ರಾಜ್ಯಗಳ ಬಲದಿಂದ ಬೌದ್ಧ ಧರ್ಮ ಹೆಮ್ಮರದಂತೆ ಬೆಳೆದು ನಿಂತಿತು. ಅದೇ ಕಾಲಕ್ಕೆ ಚೀಣ, ಜಪಾನುಗಳಲ್ಲಿ ಬೌದ್ಧ ಧರ್ಮ ವ್ಯಾಪಿಸಿತು. ಭಾರತದ ಬೌದ್ಧರು ಚೀಣ, ಜಪಾನಿನ ಬೌದ್ಧರೊಂದಿಗೆ ಹೆಚ್ಚು ಮೈತ್ರಿ ಬೆಳಸಲಾರಂಭಿಸಿದರು. ಬೌದ್ಧರು ಮಾತ್ರ ನಮ್ಮವರು—ಬೌದ್ಧರಲ್ಲದವರು ನಮ್ಮವರಲ್ಲ ಎನ್ನುವ ಭಾವನೆ ಭಾರತೀಯ ಬೌದ್ಧರಲ್ಲಿ ಬೆಳೆದು ಅವರು ಈ ರಾಷ್ಟ್ರದ ಸಂಘಟನೆ, ಐಕಮತ್ಯವನ್ನೇ ಅಲುಗಾಡಿಸುತ್ತಾ ಬಂದರು. ಧರ್ಮರಂಗದಲ್ಲಿ ಆಚಾರ್ಯ ಶಂಕರರ ಮಹತ್ಸೇವೆ, ಅನುಪಮವಾದುದೆನ್ನುವುದರಲ್ಲಿ ಸಂದೇಹವೇ ಇಲ್ಲ. ಅದಕ್ಕೂ ದೊಡ್ಡದೆಂದರೆ ಬೌದ್ಧರನ್ನು ಅವರು ದಮನಮಾಡಿ ಭಾರತ ಶಕ್ತಿ ಬೆಳೆಯಲು ಮಾಡಿದ ಅನ್ಯಾದೃಶ ಸೇವೆ. ಶಂಕರರು ಆ ಕೆಲಸ ಕೈಗೊಳ್ಳದಿದ್ದರೆ ಈ ವೇಳೆಗೆ ಭಾರತವರ್ಷದಲ್ಲಿ ಹಿಂದೂಧರ್ಮವೇ ಇರುತ್ತಿರಲಿಲ್ಲ; ಭಾರತವರ್ಷ ಚೀಣ, ಜಪಾನಿನ ವಸಾಹತಾಗಿ ಬಾಳ್ವೆ ಮಾಡಬೇಕಾಗುತ್ತಿತ್ತು. ಶಂಕರರ ಸಿದ್ಧಾಂತವನ್ನು ಪ್ರತಿಭಟಿಸುವ ಅವಕಾಶವೂ ಆಚಾರ್ಯ ಮಾಧ್ವರಿಗೆ ಸಿಕ್ಕುತ್ತಿರಲಿಲ್ಲ."

ದೇಸಾಯರು ಅವಾಕ್ಕಾದರು. ಅವರ ಮುಖದ ಮೇಲೆ ಬೆವರು ಹನಿಗಳು ಇಳಿಯಲಾರಂಭಿಸಿದುವು. ಶಂಕರನನ್ನೇ ದಿಟ್ಟಿಸಿ ನೋಡಿ "ಶಿವಕಿಂಕರ ಎನ್ನುವ ಹೆಸರಿನಲ್ಲಿ ಲೇಖನಗಳನ್ನು ಬರೆಯುತ್ತಿರುವವರು ನೀವೇ ಏನು?" ಎಂದು ಕೇಳಿದರು.

"ಹೌದು ಸಾರ್, ನಾನೇ. ನಾನೇ ತಮ್ಮಂಥ ತಿಳಿದವರು ಅಜ್ಞಾನ ಪ್ರಸಾರಕ್ಕೆ ನಿಂತಾಗ, ನನ್ನಂಥ ತಿಳಿಯದವರು ವಿಧಿಯಿಲ್ಲದೆ ಜ್ಞಾನದ ಸೊಡರನ್ನು ಮೀಟಬೇಕಾಗಿದೆ. ತಮ್ಮ ದಾರಿ ಸರಿಯೋ ತಪ್ಪೋ ನಿರ್ಣಯ ಕೊಡಲು ನಾನು ಸಿದ್ಧವಾಗಿಲ್ಲ. ಅದಕ್ಕೆ ನಾನು ದಕ್ಷನೂ ಅಲ್ಲ. ಆದರೆ ಇಷ್ಟು ಮಾತ್ರ ಹೇಳಬಲ್ಲೆ—ತಮ್ಮ ದಾರಿ ನನ್ನ ದಾರಿಯಲ್ಲ. ಈವರೆಗೆ ತಾವು ತೋರಿದ ಸೌಜನ್ಯಕ್ಕೆ ಕೃತಜ್ಞನಾಗಿದ್ದೇನೆ. ತಾವು ನನಗೆ ಅನ್ನವಿಟ್ಟು ಕಾಪಾಡಿದಿರಿ. ಅದನ್ನು ಜನ್ಮಜನ್ಮಕ್ಕೂ ಮರೆಯಲಾರೆ." ಎಂದು ರಾಯರಿಗೆ ನಮಸ್ಕರಿಸಿ ಹೊರಟುಬಿಟ್ಟ. ರಾಯರು ರಥದ ಸಾಲಭಂಜಿಕೆಯಂತೆ ಕುಳಿತುಬಿಟ್ಟರು.

'ವಿಶ್ರಾಂತಿ ಭವನ'ದ ಮಹಡಿಯ ಮೇಲಿದ್ದ ಮೂಲೆಯ ಕೋಣೆಯೇ ಶಂಕರನ ಬೀಡಾಯಿತು. ಹೊಟೇಲ್ ಮಾಣಿಗಳು ಮಲಗುತ್ತಿದ್ದ ಆ ಕೋಣೆಯನ್ನು ಖಾಲಿಮಾಡಿಸಿ ಮಾಲೀಕ ಹೆಬ್ಬಾರ್ ಶಂಕರನಿಗೆ ಕೊಟ್ಟಿದ್ದ.

ದೂರದ ಕುಂದಾಪುರದಿಂದ ಧಾರವಾಡದ ವರೆಗೆ ಬಂದು ಹೊಟೇಲ್ ತೆಗೆದಿದ್ದ ಕುಂದಾಪುರದ ಕೃಷ್ಣ ಹೆಬ್ಬಾರ್, ಅನ್ನಛತ್ರ ತೆಗೆಯಲು ಉದ್ದೇಶಪಟ್ಟಿರಲಿಲ್ಲ. ಹತ್ತಾರುವರ್ಷ ಹೊಟೇಲ್ ನಡಸಿ ಕೈತುಂಬ ಹಣ ಮಾಡಿಕೊಂಡು ಊರಿಗೆ ಹಿಂದಿರುಗಿ ಜಮೀನು ಕೊಂಡು ಸುಖ ವಾಗಿ ಬಾಳ್ವೆ ನಡಸುವ ಗುರಿಯನ್ನಿಟ್ಟುಕೊಂಡೇ ಅವನು ಧಾರವಾಡಕ್ಕೆ ಬಂದಿದ್ದ. ಆ ಗುರಿಯನ್ನೇ ನಿಷ್ಠೆಯಿಂದ ಸಾಧಿಸುತ್ತಿದ್ದ. ಹೆಬ್ಬಾರ್ ಸ್ವಲ್ಪ ಮುಂಗೋಪಿಯಾದರೂ ಸ್ವಭಾವತಃ ಕೆಟ್ಟವನಲ್ಲ. ಮಾಣಿಗಳಿಗೆ ಕೈಸಂಬಳ ಕೊಡದಿದ್ದರೂ ಅವರಿಗೆ ಒಟ್ಟಿಗೆ ಗಂಟುಕೊಡುವ ಉದ್ದೇಶ ವಿಟ್ಟುಕೊಂಡಿದ್ದ. ಹೊಟೇಲ್ ಬೋರ್ಡರುಗಳು ಹೆಚ್ಚು ಪಲ್ಯ, ಹಪ್ಪಳ ಕೇಳಿದರೆ ಅವನೆಂದಿಗೂ ಇಲ್ಲವೆನ್ನುತ್ತಿರಲಿಲ್ಲ. ಒಂದು ಕಾಲದಲ್ಲಿ ಬೋರ್ಡರುಗಳಿಗೆ ಸಾಲ ಕೊಡುವ ಅಭ್ಯಾಸವೂ ಹೆಬ್ಬಾರನಿಗಿತ್ತು. ಆದರೆ ತಿಂದವರು ವಿಶ್ವಾಸವನ್ನು ಕೊಡದೆ ಪರಾರಿಯಾಗುವುದಕ್ಕಾರಂಭಿಸಿದ ಮೇಲೆ ಹೆಬ್ಬಾರ್ ಕೈ ಬಿಗಿಹಿಡಿಯಬೇಕಾಯಿತು. ಮೊದಲನೆಯ ತಾರೀ ಕಿಗೆ ಬೋರ್ಡರುಗಳು ಲೆಕ್ಕ ಚುಗ್ತಾ ಮಾಡದಿದ್ದರೆ, ಅವರಿಗೆ ಅನ್ನ ಹಾಕ ಕೂಡದೆಂದು ಅವನು ಕಟ್ಟಪ್ಪಣೆ ಮಾಡಬೇಕಾಯಿತು.

ಶಂಕರ ಧೈರ್ಯವಾಗಿ ಸ್ವತಂತ್ರ ಜೀವನ ಆರಂಭಿಸಿದ. ಪತ್ರಿಕೆ ಗಳಿಗೆ ಲೇಖನ ಬರೆಯುವುದರಿಂದ ಹಣ ಬರುತ್ತದೆ. ಅದರಿಂದ ಜೀವನ ಮಾಡಬಹುದೆಂಬ ಅವನ ನಂಬಿಕೆ ಅಳಿಸಿ ಹೋಗಲು ಬಹುಕಾಲ ಹಿಡಿ ಯಲಿಲ್ಲ. ಕನ್ನಡ ಪತ್ರಿಕೆಗಳೆಲ್ಲಾ ಬಡ ಪತ್ರಿಕೆಗಳೇ! ಲಕ್ಷಾಂತರ ರೂಪಾಯಿ ಗಳಿಸಿಕೊಂಡು, ಸಂಪಾದಕರು ಷೆವರ್ಲೇ, ವಾಕ್ಸಾಲ್ ಮೋಟಾರುಗಳಲ್ಲಿ ತಿರುಗಾಡುತ್ತಿದ್ದರೂ ಪತ್ರಿಕೆಯ ಬಡತನ ಮಾತ್ರ ತಪ್ಪುತ್ತಿರಲಿಲ್ಲ. ಎರಡು ರೂಪಾಯಿನಿಂದ, ಐದು ರೂಪಾಯಿಯ ವರೆಗೆ ಒಂದು ಲೇಖನಕ್ಕೆ ಪ್ರತಿಫಲ ಗಿಟ್ಟಿಸಬೇಕಾದರೆ ಶಂಕರ ಕಲಿತ ಬುದ್ಧಿಯ ನ್ನೆಲ್ಲಾ ಖರ್ಚುಮಾಡಬೇಕಾಗುತ್ತಿತ್ತು.

ಧಾರವಾಡದಲ್ಲಿ ಗ್ರಂಥ ಪ್ರಕಾಶಕರಿಗೂ, ಪುಸ್ತಕ ವ್ಯಾಪಾರಿಗಳಿಗೂ ಬಡತನವಿರಲಿಲ್ಲ. ಹಾದಿಗೊಂದು ಮುದ್ರಣಾಲಯ; ಬೀದಿಗೊಂದು ಪ್ರಕಟನಾಲಯ. ಧಾರವಾಡದ ನಾಗರಿಕರ ಕೊರಳ ತುಂಬ ಮಾಲೆಗಳು (ಗ್ರಂಥಮಾಲೆಗಳು) ನೇತಾಡುತ್ತಿದ್ದುವು.

ಶಂಕರ ತಾನು ಬರೆದಿದ್ದ ಲೇಖನಗಳನ್ನು ಒಟ್ಟುಗೂಡಿಸಿ ಗ್ರಂಥ ರೂಪದಲ್ಲಿ ಪ್ರಕಟಿಸಬೇಕೆಂದು ಪ್ರಯತ್ನಿಸಿದ. ಒಬ್ಬ ಪ್ರಕಾಶಕ ಅದನ್ನು ತನ್ನ ಬಳಿ ಎರಡು ತಿಂಗಳು ಇಟ್ಟುಕೊಂಡು,

"ಗ್ರಂಥ ಬಹಳ ಚೆನ್ನಾಗಿದೆ. ಬಹಳ ತೂಕವಾಗಿದೆ. ಆದರೆ ನೋಡಿ—ನಾವು ಕಥೆ ಕಾದಂಬರಿಗಳನ್ನಷ್ಟೆ ಪ್ರಕಟಿಸುವುದು. ಈ ಬಗೆಯ ಗ್ರಂಥ ನಾವು ಪ್ರಕಟಿಸಬೇಕಾದರೆ, ನೀವೇ ಕಾಗದ, ಮುದ್ರಣ ವೆಚ್ಚ ವಹಿಸುವುದಾದರೆ ಯೋಚನೆ ಮಾಡಬಹುದು. 'ಇಂದ್ರಧನುಸ್' ಪ್ರಕಾಶಕರನ್ನು ಹೋಗಿ ನೋಡಿ—ಅವರು ಈ ಬಗೆಯ ತೂಕವಾದ ಗ್ರಂಥಗಳನ್ನು ಪ್ರಕಟಿಸುತ್ತಾರೆ."

ಎಂದು ಉಪದೇಶ ಮಾಡಿದ.

'ಇಂದ್ರಧನುಸ್' ಸಂಪಾದಕರಾದ ಹುಲಿ ಜನಾರ್ದನಾಚಾರ್ಯರು ಕೇವಲ ಕನ್ನಡಮ್ಮನ ಸೇವೆಗಾಗಿ ಟೊಂಕಕಟ್ಟಿದವರು. ಕನ್ನಡ ಜನತೆಗೆ 'ಜ್ಞಾನ ಭಂಡಾರ'ವನ್ನು ಒದಗಿಸಬೇಕೆಂಬ ಹಿರಿಯಾಸೆಯಿಂದಲೇ ಅವರು ಅಪಾರ ತ್ಯಾಗಮಾಡಿ 'ಇಂದ್ರಧನುಸ್ ಗ್ರಂಥಮಾಲೆ' ನಡಸುತ್ತಿದ್ದರು. ಅವರು ಶಂಕರನ ಹಸ್ತಪ್ರತಿ ಓದಿನೋಡಿ

"ಈ ಕಾಲಕ್ಕೆ ಇಂಥ ಪುಸ್ತಕಗಳು ಬೇಕು ಶಂಕರರಾಯರೇ. ಸಾಹಿತ್ಯಸೇವೆ—ದೇಶಸೇವೆ ಎರಡೂ ಇದರಿಂದ ಆಗುತ್ತದೆ. ನಿಮ್ಮ ಗ್ರಂಥ ಪ್ರಕಟಿಸಲು ನನಗೆ ಅಪಾರ ಹೆಮ್ಮೆಯಾಗುತ್ತದೆ."

ಎಂದರು. ಭಾಗ್ಯದ ಬಾಗಿಲೇ ತೆರೆಯಿತೆಂದು ಶಂಕರ ಹಿಗ್ಗುವಷ್ಟರಲ್ಲಿ ಆಚಾರ್ಯರು

"ಆದರೆ ನೋಡಿ ನಮ್ಮದು ಒಂದೇ ಕರಾರು."

"ಏನು ಸ್ವಾಮಿ ಆ ಕರಾರು?"

"ನಾವು ಲೇಖಕರಿಗೆ ಗೌರವಧನ ಕೊಡುವುದಿಲ್ಲ. ಪುಸ್ತಕ ಪ್ರಕಟವಾದ ಮೇಲೆ ಐವತ್ತು ಪ್ರತಿಗಳನ್ನು ಕೊಡುತ್ತೇವೆ."

"ಪ್ರತಿಗಳನ್ನು ತೆಗೆದುಕೊಂಡು ಲೇಖಕರು ಹೊಟ್ಟೆ ತುಂಬಿ ಕೊಳ್ಳುವುದಕ್ಕಾಗುತ್ತದೆಯೇ ಆಚಾರ್ಯರೇ?"

"ತ್ಯಾಗ ದೃಷ್ಟಿಯಿಂದಲೇ ಸಾಹಿತ್ಯ ಸೇವೆ ಮಾಡಬೇಕು. ಇದನ್ನು ಸಂಪಾದನೆಯ ಮಾರ್ಗ ಮಾಡಿಕೊಳ್ಳಬಾರದು."

ಶಂಕರ ನಿರುಪಾಯನಾಗಿ "ನನಗೆ ಐವತ್ತು ಪ್ರತಿಗಳು ಬೇಕಿಲ್ಲ. ಹತ್ತು ಪ್ರತಿಗಳು ಸಾಕು. ಉಳಿದ ನಲವತ್ತು ಪ್ರತಿಗಳ ಮೌಲ್ಯವನ್ನು ಹಣದ ರೂಪವಾಗಿ ಕೊಡಬಲ್ಲಿರಾ?"

"ಆಗಬಹುದು. ಶೇಕಡ ೪೦ ಕಮಿಷನ್ ಮುರಿದುಕೊಂಡು ಹಣ ಕೊಡಬಹುದು–ಆದೂ ಪುಸ್ತಕ ಪ್ರಕಟವಾದ ಒಂದು ತಿಂಗಳ ಮೇಲೆ."

ಪುಸ್ತಕವಾದರೂ ಹೊರಬರಲಿ ಎಂಬ ಆಕಾಂಕ್ಷೆಯಿಂದ ಶಂಕರ ಹಸ್ತ ಪ್ರತಿಯನ್ನು ಆಚಾರ್ಯರಿಗೆ ಒಪ್ಪಿಸಿ ಹೊಟೇಲು ಸೇರಿದ.

ಶಂಕರನ ಕೈಯಲ್ಲಿದ್ದ ಹಣ ಹೆಬ್ಬಾರನ ಬಿಲ್‌ಗೆ ಪಾವತಿಯಾಗಿತ್ತು. ಬರಲಿದ್ದ ಮೊದಲನೆಯ ತಾರೀಕಿಗೇನು ಗತಿ ಎಂಬ ಚಿಂತೆ ಶಂಕರನನ್ನು ಬಾಧಿಸತೊಡಗಿತು.

ಶಂಕರ ಊರು ಬಿಟ್ಟು ವರ್ಷದ ಮೇಲೆ ಹಲವು ತಿಂಗಳು ಕಳೆದು ಹೋಗಿದ್ದುವು. ಮನೆಯ ಯೋಚನೆ ಬಂದುಬಿಟ್ಟರೆ ಅವನ ಚೇತನಗಳು ಉಡುಗಿ ಹೋಗುತ್ತಿದ್ದುವು. ತಾಯಿಯನ್ನು ನೆನಪಿಸಿಕೊಂಡು ಕಣ್ಣೀರ್ಗರೆಯುವನು. ಅಜ್ಞಾತವಾಸದ ಜೊತೆಗೆ ಒಪ್ಪತ್ತೂಟವೂ ಆರಂಭವಾಗಿತ್ತು. ಹೊಟೇಲಿನ ಊಟದ ಡಿಪಾರ್ಟ್‌ಮೆಂಟ್ ಮೂರು ಗಂಟೆಗೆ ಮುಚ್ಚುತ್ತಿತ್ತು. ಆಗ ಒಂದು ಊಟವಾಡಿದರೆ ಮಾರನೆಯ ದಿನ ಮೂರು ಗಂಟೆಗೇ ಅವನು ಮತ್ತೆ ಊಟ ಕಾಣುತ್ತಿದ್ದುದು.

ಆಗ ತಾಯಿಯ ಉಪಚಾರದ ನೆನಪಾಗುತ್ತಿತ್ತು.

ವ್ಯಾವಹಾರಿಕ ಧಾರವಾಡದಲ್ಲಿ ಅವನಿಗೆ ಯಾರೂ ಗೆಳೆಯರು ದೊರೆಯಲಿಲ್ಲ. ಮನೋಹರನಿಗೆ ಸ್ವಲ್ಪವೂ ಬಿಡುವಿಲ್ಲ. ಭಾನುವಾರ ಅವನು ಹೆಂಡತಿಯನ್ನು ಕರೆದುಕೊಂಡು ಸಿನೀಮಾಕ್ಕೋ ಹುಬ್ಬಳ್ಳಿಗೋ ಹೋಗುತ್ತಿದ್ದುದರಿಂದ ಭಾನುವಾರವೂ ಅವನ ಸಖ್ಯ ಸಿಕ್ಕುತ್ತಿರಲಿಲ್ಲ.

ಹೊಟೇಲ್ ಊಟ, ಹವಣರಿಯದ ದುಡಿತ, ಮನಸ್ಸಿನ ಆತಂಕ

ಗಳಿಂದ ಶಂಕರನ ದೇಹಸ್ಥಿತಿಯೂ ಕೆಡುತ್ತ ಬಂದಿತು. ಹೆಬ್ಬಾರನ ಮಾಣಿಗಳೇ ಶಂಕರನ ಉಪಚಾರ ಮಾಡುತ್ತಿದ್ದರು.

ಉಪವಾಸ, ಅನಾರೋಗ್ಯ, ಸಖ್ಯತೆಯ ದಾರಿದ್ರ್ಯ, ಅನುಭವಿಸುತ್ತಿದ್ದರೂ ಶಂಕರನ ಮನಸ್ಸಿಗೆ ಒಂದೇ ಸಮಾಧಾನ. ಅವನ **'ಮಾನವ ಧರ್ಮ'** ಗ್ರಂಥ ಅಚ್ಚಾಗುತ್ತಿತ್ತು. ಜನಾರ್ದನಾಚಾರ್ಯರು ಎರಡು ದಿನ ಕ್ಕೊಮ್ಮೆ ಅಚ್ಚಾದ ಫಾರ್ಮುಗಳನ್ನು ಶಂಕರನಿಗೆ ತಂದು ಕೊಡುತ್ತಿದ್ದರು.

ನಿತ್ಯ ಜ್ವರ ಬರುತ್ತಿದ್ದರೂ ಶಂಕರ ದುಡಿಮೆ ನಿಲ್ಲಿಸಿರಲಿಲ್ಲ. ಹೊಸ ದಾಗಿ ಆರಂಭವಾಗಿದ್ದ 'ಸಜೀವ ಕರ್ನಾಟಕ' ವಾರಪತ್ರಿಕೆಯ ಸಂಪಾದಕರು ಪಾಟೀಲ ಶಿವನಗೌಡರು ಶಂಕರನಿಂದ ತಮ್ಮ ಪತ್ರಿಕೆಗೆ ಒಂದು ಲೇಖನಮಾಲೆ ಬರೆಸುತ್ತಿದ್ದರು. ತಿಂಗಳಿಗೆ ಹದಿನೈದು ರೂಪಾಯಿ ಕೊಡಲೊಪ್ಪಿದ್ದ ಪಾಟೀಲರು ಸಬೂಬು ಹೇಳದೆ ಕಾಲಕ್ಕೆ ಸರಿಯಾಗಿ ಹಣ ಪಾವತಿ ಮಾಡುತ್ತಿದ್ದರು. ಅದೇ ಒಂದು ಶಂಕರನಿಗಿದ್ದ ಗಟ್ಟಿ ವರಮಾನ.

ಒಂದು ದಿನ ಶಂಕರ ಮಧ್ಯಾಹ್ನ ತನ್ನ 'ಸಜೀವ ಕರ್ನಾಟಕ'ದ ಲೇಖನ ಬರೆಯುತ್ತಾ ಕುಳಿತಿದ್ದಾಗ ಮಾಣಿ ನಾರಾಯಣ ಬಂದು

"ನಿಮ್ಮನ್ನು ಯಾರೋ ಹುಡುಕಿಕೊಂಡು ಬಂದಿದ್ದಾರೆ ರಾಯರೇ" ಎಂದು ಹೇಳಿದ.

"ಇಲ್ಲೇ ಕರೆದುಕೊಂಡು ಬಾರಪ್ಪ."

ಮಾಣಿಯ ಜತೆಯಲ್ಲಿ ಶಾಂತರುದ್ರ ಪ್ರವೇಶಿಸಿದುದನ್ನು ಕಂಡು ಶಂಕರ ತನ್ನ ಕಣ್ಣು ತಾನೇ ನಂಬದಾದ. ಶಾಂತರುದ್ರನನ್ನು ಪ್ರೀತಿಯಿಂದ ಸ್ವಾಗತಿಸಿ, ತನ್ನ ಹರಕು ಹಾಸಿಗೆಯ ಮೇಲೇ ಅವನನ್ನು, ಕೂಡಿಸಿ, ಕಾಫಿ ತರಿಸಿಕೊಟ್ಟ.

"ಯಾವಾಗ ಬಂದೆ ಶಾಂತರುದ್ರಾ" ಎಂದು ಕೇಳಿದ.

"ಈಗ ಸ್ವಲ್ಪ ಹೊತ್ತಾಯಿತು."

"ವಕೀಲರ ಹತ್ತಿರ ಕೆಲಸವಿತ್ತೇ?"

"ಇಲ್ಲ—ನಿನ್ನ ಹತ್ತಿರ ಕೆಲಸವಿತ್ತು. ಇದೇನು ಶಂಕರ, ನಿನ್ನ ಅವಸ್ಥೆ!-ನನಗೊಂದು ಕಾಗದ ಬರೆಯಬಾರದಾಗಿತ್ತೇ?"

"ನಾನು ಅನುಕೂಲವಾಗಿದ್ದೇನೆ. ನೀನು ಯೋಚನೆ ಮಾಡ ಬೇಡ."

"ನಿತ್ಯ ಜ್ವರ ಬರುತ್ತಿದೆಯೇ?"

"ಇಲ್ಲ—ಯಾವಾಗಲಾದರೂ ಒಂದೊಂದು ದಿನ."

"ಮನೋಹರನಿಗೆ ಗೊತ್ತೇ?"

"ಇಲ್ಲ-ಏನು ಮಹತ್ವದ ವಿಷಯವೆಂದು ನಾನು ತಿಳಿಸಲಿಲ್ಲ."

"ಶಂಕರಾ, ಈಗ ನಾನು ಎಲ್ಲಿಂದ ಬರುತ್ತಿದ್ದೇನೆ ಗೊತ್ತೇ?"

"ಗೊತ್ತು—ಹೊಸಪೇಟೆಯಿಂದ."

"ಅಲ್ಲ—ತಾವರೆಕೆರೆಯಿಂದ."

"ತಾವರೆಕೆರೆಯಿಂದ! ನಮ್ಮ ಮನೆಗೆ ಹೋಗಿದ್ದೆಯಾ? ಅಮ್ಮ ಹೇಗಿದ್ದಾಳೆ-ಅಣ್ಣ-ಅತ್ತಿಗೆ-ರವಿ-ನಿಂಗವ್ವ."

"ಎಲ್ಲಾ ಚೆನ್ನಾಗಿದ್ದಾರೆ. ನೀನು ಇವತ್ತಿನ ಮೋಲಿಗೇ ಊರಿಗೆ ಹೊರಡಬೇಕು."

"ಊರಿಗೆ ಕಾಲಿಡಬಾರದೆಂಬ ನನ್ನ ಶಪಥ ನಿನಗೆ ಗೊತ್ತಿಲ್ಲವೇ?"

"ಗೊತ್ತಿದೆ. ಅದರ ಕಾಲಾವಧಿ ಮುಗಿದುಹೋಯಿತು. ಸುಬ್ರಹ್ಮಣ್ಯನಿಗೆ ತುಂಬ ಖಾಹಿಲೆ—ಹಾಸಿಗೆ ಹಿಡಿದು ಮಲಗಿದ್ದಾನೆ—ನೀನು ಊರಿಗೆ ಹೋಗದಿದ್ದರೆ ಅವನು ಉಳಿಯುವುದೇ ಕಷ್ಟ!"

"ಅಯ್ಯೋ! ಅಣ್ಣನಿಗೇನಾಗಿದೆ ಶಾಂತರುದ್ರ?"

"ನೀನು ಹೊರಟು ಬಂದಾರಭ್ಯ ಅವನ ಬುದ್ಧಿಯೇ ಸ್ಥಿಮಿತದಲ್ಲಿಲ್ಲ. ಶಂಕರ—ಶಂಕರ ಎಂದು ಹಂಬಲಿಸುತ್ತಾನೆ. ಈಗ ಆರು ತಿಂಗಳಿಂದ ಹಾಸಿಗೆ ಬಿಟ್ಟೇಳುತ್ತಿಲ್ಲ. ಜಲಮಲವೆಲ್ಲಾ ಹಾಸಿಯಲ್ಲೇ ಆಗಬೇಕು. ಈಗ ಅವನೊಂದು ಚಕ್ಕಳ ಮೂಳೆಯ ಗೊಂಬೆ."

"ಅಮ್ಮ............"

"ನಿಮ್ಮ ಮನೆಗೆ ಹೋದೆ. ಸುಬ್ರಹ್ಮಣ್ಯನ ಹಾಸಿಗೆಯ ಬಳಿ ನಿನ್ನ ಅತ್ತಿಗೆ, ಇನ್ನು ಯಾರೋ ವಯಸ್ಸಾದ ಹೆಣ್ಣುಮಗಳು ಕುಳಿತಿದ್ದರು. ಅವರನ್ನೇ 'ದೊಡ್ಡ ಅಮ್ಮಾವರು ಎಲ್ಲಿ?' ಎಂದು ಕೇಳಿದೆ. ನಿನ್ನ ಅತ್ತಿಗೆ 'ಇವರೇ ದೊಡ್ಡ ಅಮ್ಮಾವರಲ್ಲವೇ ಶಾಂತರುದ್ರಪ್ಪಣ್ಣ' ಎಂದರು. ಹೆಚ್ಚು ಕೇಳಬೇಡ ಶಂಕರ್—ನನ್ನ ಗಂಟಲಲ್ಲಿ ಮಾತು ಹೊರಡುವುದಿಲ್ಲ."

"ದುಃಖಿಸುತ್ತ ಕೂಡುವುದಕ್ಕೆ ಸಮಯವಿಲ್ಲ. ಏಳು. ಈಗಲೇ ನಾನು ಮನೋಹರನ ಕಾರಿನಲ್ಲಿ ಹುಬ್ಬಳ್ಳಿಗೆ ಕರೆದುಕೊಂಡು ಹೋಗುತ್ತೇನೆ. ಹುಬ್ಬಳ್ಳಿಗೆ ಹೋದರೆ ಮೇಲ್ ಸಿಕ್ಕುತ್ತದೆ. ಮನೋಹರ ಈಗಲೇ ಇಲ್ಲಿಗೆ ಬರುತ್ತಾನೆ."

ತೂರಾಡುತ್ತ ಮೇಲೆಕ್ಕೆದ್ದ ಶಂಕರನನ್ನು ಶಾಂತರುದ್ರಪ್ಪನೇ ಹಿಡಿದುಕೊಳ್ಳಬೇಕಾಯಿತು.

ಶಂಕರ ಕ್ಷೀಣಸ್ವರದಲ್ಲಿ

"ಹೊಟೇಲಿಗೆ ನಾನು ಹಣ ಬಾಕಿಕೊಡಬೇಕು ಶಾಂತರುದ್ರಾ" ಎಂದ.

"ನಾನೆಲ್ಲಾ ನೋಡಿಕೊಳ್ಳುತ್ತೇನೆ. ನೀನು ಹೊರಡಲು ಸಿದ್ಧನಾಗಪ್ಪಾ."

ಶಂಕರನ ಬಟ್ಟೆಬರೆಗಳನ್ನೂ, ಕಾಗದಗಳನ್ನೂ, ಪುಸ್ತಕಗಳನ್ನೂ ಶಾಂತರುದ್ರನೇ ಗಂಟುಕಟ್ಟಿ ಕೈಯಲ್ಲಿ ಹಿಡಿದುಕೊಂಡು ಅವನನ್ನು ಕೆಳಕ್ಕೆ ಕರೆದುಕೊಂಡು ಬಂದ.

ಮನೋಹರ ಕಾರಿನೊಂದಿಗೆ ಸಿದ್ಧವಾಗಿದ್ದ.

ಮನೋಹರ, ಶಾಂತರುದ್ರ ಇಬ್ಬರೂ ಶಂಕರನನ್ನು ಮೇಲ್ ಗಾಡಿಯ 'ಸೆಕೆಂಡ್ ಕ್ಲಾಸ್' ಡಬ್ಬಿಯಲ್ಲಿ ಕೂಡಿಸಿ ಅವನ ಕೈಗೆ ನೂರು ರೂಪಾಯಿಯಿತ್ತರು. ಶಂಕರ, ಶಾಂತರುದ್ರನನ್ನಪ್ಪಿಕೊಂಡು ಗಟ್ಟಿಯಾಗಿ ರೋದಿಸುತ್ತಾ

"ಅಣ್ಣನ ಮುಖ ಕಾಣುತ್ತೇನೆಯೇ ಶಾಂತೂ?"

"ಕಾಣುತ್ತೀ—ಹೋಗಪ್ಪಾ—ಸಮಾಧಾನ ತಂದುಕೋ. ನಿನ್ನ ನೋಡಿದ ಕೂಡಲೆ ಸುಬ್ರಹ್ಮಣ್ಯನ ಕಾಹಿಲೆ ತಾನೇ ತಾನಾಗಿ ವಾಸಿಯಾಗುತ್ತದೆ."

"ನೀನು, ಮನೋಹರ್ ಇಬ್ಬರೂ ನನ್ನ ಕಾಪಾಡಿದಿರಿ....ನಿಮ್ಮ ಋಣ ನಾನು....."

"ಸುಮ್ಮಗಿರಪ್ಪ. ಋಣಗಿಣ ಎನ್ನಬೇಡ. ನಿನ್ನ ಅವಸ್ಥೆ ನೋಡಿದರೆ ನಾವು ಮಾಡಿರುವ ಉಪಕಾರ ಗೊತ್ತಾಗುತ್ತದೆ."

"ಇಲ್ಲ ಶಾಂತೂ—ಜಾತಿ, ಕುಲ, ಗೋತ್ರ, ಸಂಪತ್ತು, ವಿದ್ಯೆ ಯಾವುದೂ ಸ್ಥಿರವಲ್ಲ—ಮಾನವಪ್ರೇಮ-ಪ್ರೇಮ-ಪ್ರೇಮ-ಅದೊಂದೇ ಸ್ಥಿರ-ಅಮರ."

ಎಂದು ಮನೋಹರನ ಕೈ ಹಿಡಿದು "

"ಮನೋಹರ್, ಯಜಮಾನರಿಗೆ ನನ್ನ ನಮಸ್ಕಾರ ತಿಳಿಸಿ. ಅವರ ಮನಸ್ಸು ನೋಯುವಂಥ ಮಾತು ನಾನಾಡಿದ್ದರೆ ಕ್ಷಮಿಸಲು ಹೇಳಿ. ಅವರು ಹಿರಿಯರು-ನಾನು ಎಷ್ಟಾದರೂ ಹುಡುಗ. ಸುಗುಣಾ ಬಾಯಿಯವರಿಗೆ ನನ್ನ ನಮಸ್ಕಾರ ಹೇಳಿ."

ರೈಲು ಮುಂದೆ ಅಡಿಯಿಟ್ಟಿತು. ಮನೋಹರ, ಶಾಂತರುದ್ರ ಗಾಡಿಯಿಂದಿಳಿದರು.

ಶಂಕರ ಕಣ್ಣೀರು ಸುರಿಸುತ್ತಾ ಬಾಗಿಲು ಬಳಿ ನಿಂತಿದ್ದ.

ಗೆಳೆಯರು ಅವನಿಗೆ ಕಣ್ಣೀರಿನಿಂದಲೇ ಉತ್ತರ ಕೊಟ್ಟು ಬೀಳ್ಕೊಟ್ಟರು.

೪೩

ತಾವರೆಕೆರೆ ಬಸ್ ಸ್ಟ್ಯಾಂಡಿನಲ್ಲಿ ಶಂಕರ ಕೆಳಗಿಳಿಯಲೆತ್ನಿಸಿದಾಗ ಡ್ರೈವರ್

“ಕುಳಿತುಕೊಳ್ಳಿ ಸ್ವಾಮಿ. ಮನೆ ಹತ್ರ ಬಿಡ್ತೀನಿ” ಎಂದ.

“ಬೇಡಪ್ಪಾ” ಎಂದು ಶಂಕರ ಕೆಳಗಿಳಿದು “ನನ್ನ ಗಂಟು ಮನೆಗೆ ಕಳುಹಿಸಿ ಬಿಡುತ್ತೀಯಾ?” ಎಂದು ಕೇಳಿದ.

ಡ್ರೈವರ್ ಒಪ್ಪಿಕೊಂಡ ಮೇಲೆ ಶಂಕರ ಮೆಲ್ಲನೆ ಅಡಿಯಿಡುತ್ತಾ ಮನೆಯ ಕಡೆ ಹೊರಟ.

ರಸ್ತೆಯ ತಿರುವಿನಲ್ಲಿಯೇ ಮನೆ ಕಂಡಿತು. ಅದೇ ಮನೆ–ಇಷ್ಟೆಲ್ಲ ದುರಂತದ ರಂಗಮಂಟಪ.

ಆದರೆ ಅದೇ ಮನೆಯಲ್ಲಿ ಅಮ್ಮ ಇದ್ದಳು.

ಮನೆಯ ಬಳಿಗೆ ಬಂದರೂ ಒಳಗೆ ಕಾಲಿಡಲು ಶಂಕರನಿಗೆ ಧೈರ್ಯವಾಗದು. ಯಾವುದೋ ಶಕ್ತಿ ಅವನ ಕಾಲನ್ನು ಹಿಡಿದು ಹಿಂದಕ್ಕೆ ಜಗ್ಗುತ್ತಿತ್ತು. ಕಾಲೆಳೆದುಕೊಂಡು ಮೆಟ್ಟಲೇರಿ ಮನೆಯೊಳಗೆ ಬಂದ. ಆ ವರೆಗೆ ಉಳಿದಿದ್ದ ಶಕ್ತಿ ತಕ್ಷಣವೇ ಅದೃಶ್ಯವಾಯಿತು.

“ಅವ್ಮಾ” ಎಂದು ಸ್ಮೃತಿ ತಪ್ಪಿ ಬಿದ್ದುಬಿಟ್ಟ.

ಪಾರ್ವತಮ್ಮನವರು ಮಗನನ್ನು ಹಿಡಿದೆತ್ತಿ ತೊಡೆಯ ಮೇಲೆ ಮಲಗಿಸಿಕೊಂಡು ನೀರು ತಟ್ಟಿದರು. ಮೈದುನನ ಸ್ಥಿತಿ ನೋಡಿ ಗೌರಿ ಕಣ್ಣೀರಿಟ್ಟಳು. ನಿಂಗವ್ವ “ಬಂದೆಯಾ ನನ್ನಪ್ಪಾ” ಎಂದು ಶಂಕರನನ್ನು ಅಪ್ಪಿಕೊಂಡಳು.

“ಅಣ್ಣ ಹೇಗಿದ್ದಾನಮ್ಮ?”

“ನೋಡುವೆಯಂತೆ. ಮೊದಲು ಸ್ವಲ್ಪ ಕಾಫಿ ಕುಡಿ.”

“ಇಲ್ಲಮ್ಮ—ಅಣ್ಣನನ್ನು ನಾನು ನೋಡಿದ ಹೊರತು ಬಾಯಿಗೆ ನೀರು ಹಾಕುವುದಿಲ್ಲ.”

ಪಾರ್ವತಮ್ಮನವರು ಎದ್ದು ಸುಬ್ರಹ್ಮಣ್ಯನ ರೂಮಿಗೆ ಹೋಗಿ ಮೆಲ್ಲನೆ ಅವನನ್ನು ಎಚ್ಚರಗೊಳಿಸಿ

"ನಿದ್ರೆ ಹತ್ತಿತ್ತೇ ಸುಬ್ಬೂ?" ಎಂದು ಕೇಳಿದರು.

ಸುಬ್ರಹ್ಮಣ್ಯ ದೃಷ್ಟಿಯಿಲ್ಲದ ನೋಟ ಬೀರಿದ.

"ಸ್ವಲ್ಪ ಹಾಲು ಕುಡಿಯುತ್ತೀಯಾ?"

"ಹಾಲು! ಹಾಲು! ಶಂಕರ! !"

"ಶಂಕರ ಸುಖವಾಗಿದ್ದಾನಪ್ಪಾ."

"ಶಂಕರ! ಸುಖ!"

"ಶಂಕರನನ್ನು ಎಷ್ಟು ಪ್ರೀತಿಸುತ್ತೀ ಸುಬ್ಬು."

"ಶಂಕರ–ತಮ್ಮ–ದೇವರು."

"ನಾನು ಯಾರು ಗೊತ್ತಾಯಿತೇ?"

"ನೀನು ಅಮ್ಮ—ದೊಡ್ಡ ದೇವರು."

ಎನ್ನುತ್ತಾ ಸುಬ್ರಹ್ಮಣ್ಯ ಕೈ ಹೊರಗೆ ತೆಗೆದುಕೊಂಡು ತಾಯಿಯನ್ನು ಮುಟ್ಟಿ ಕಣ್ಣಿಗೆ ಒತ್ತಿಕೊಂಡ.

"ನೀನು ಮೇಲಕ್ಕೇಳಬೇಕು. ತೋಟ ನೋಡಿಕೊಳ್ಳುವವರು ಯಾರು? ಅಮ್ಮನ ಸಾಕುವವರು ಯಾರು? ಗೌರಿಯನ್ನು ಕಾಪಾಡುವವರು ಯಾರು?"

"ಶಂಕರ–ಶಂಕರ–ನಾನು ಪಾಪಿ!"

"ಅಲ್ಲ ಸುಬ್ಬೂ—ಪಾಪಿಯೆನ್ನುವುದನ್ನು ಮರೆತುಬಿಡು."

"ಶಂಕರ—ಮನೆ ಬಿಟ್ಟು ಹೋದ."

"ನಾಲ್ಕು ದಿವಸ ಹೋದರೇನಂತೆ! ಬರುತ್ತಾನೆ. ಅವನೇನು ಎಳೆಯ ಮಗುವೇ?"

ಸುಬ್ರಹ್ಮಣ್ಯನ ಕಣ್ಣುಗಳಲ್ಲಿ ನೀರು ಒಸರಿತು.

"ನನ್ನ ಮೇಲೆ ಶಂಕರನಿಗೆ ಕೋಪ. ಅವನು ಬರಲ್ಲ."

"ನಾನು ಕರೆದುಕೊಂಡು ಬರುತ್ತೀನಪ್ಪಾ."

"ಬರಲ್ಲ. ಅವನು ಬರಲ್ಲ. ಅಮ್ಮ ಅಮ್ಮ..............."

"ಶಂಕರ ಬಂದರೆ ಮೇಲಕ್ಕೇಳುತ್ತೀಯಾ? ಹಾಲು ಕುಡಿಯುತ್ತೀಯಾ?"

ಸುಬ್ರಹ್ಮಣ್ಯನ ಕಣ್ಣುಗಳು ಮಿಂಚಿದುವು.

"ಶಂಕರ—ಬಂದನೇ?"

"ಇಲ್ಲ—ನೀನು ಎದ್ದು ಕುಳಿತರೆ ಬರುತ್ತಾನೆ."

"ಎಬ್ಬಿಸು—ಎಬ್ಬಿಸು ಕೂತುಕೊಳ್ಳುತ್ತೇನೆ."

ಪಾರ್ವತಮ್ಮ ಗೌರಿ ಇಬ್ಬರೂ ಸುಬ್ರಹ್ಮಣ್ಯನನ್ನು ಹಿಡಿದುಕೊಂಡು ಕೂಡಿಸಿ, ಅವನ ಬೆನ್ನಿಗೆ ಪಕ್ಕಗಳಿಗೆ ದಿಂಬುಗಳನ್ನು ಒತ್ತಿ ಕೊಟ್ಟರು.

"ಶಂಕರ. ಶಂಕರ ಎಲ್ಲಿ?"

ಆ ಹೃದಯವಿದ್ರಾವಕ ನೋಟ ನೋಡಲಾಗದೆ ಶಂಕರ ಮುಖ ಮುಚ್ಚಿಕೊಂಡು ಕಣ್ಣೀರು ಸುರಿಸುತ್ತಾ ಬಾಗಿಲ ಹೊರಗೆ ನಿಂತಿದ್ದ. ನಿಂಗವ್ವನ ಮಾತೃವಕ್ಷ ಅವನ ಕಂಬನಿಯನ್ನೊಪ್ಪಿಸಿಕೊಳ್ಳುತ್ತಿತ್ತು.

ಸುಬ್ರಹ್ಮಣ್ಯ ಶೂನ್ಯ ದೃಷ್ಟಿ ಬೀರಿ

"ಸುಳ್ಳು ಸುಳ್ಳು ಶಂಕರ ಬಂದಿಲ್ಲ" ಎಂದ.

ಶಂಕರ ನಿಂಗವ್ವನ ತೋಳಸೆರೆ ಬಿಡಿಸಿಕೊಂಡು ಧಾವಿಸಿ ಬಂದ. ಅಣ್ಣನನ್ನಪ್ಪಿದ. ಸುಬ್ರಹ್ಮಣ್ಯ ಮಾತಾಡಲಿಲ್ಲ. ತಮ್ಮನನ್ನಪ್ಪಿ ಮುದ್ದಿಸಿ, ಅವನ ಕೆನ್ನೆ ನೇವರಿಸಿ

"ಶಂಕರ–ನನ್ನ ಶಂಕರ—ತಮ್ಮ."

"ನಾನೇ ಅಣ್ಣ. ನಿನ್ನ ಶಂಕರ ಬಂದಿದ್ದೇನೆ. ಇನ್ನು ನಿನ್ನ ಬಿಟ್ಟು ಹೋಗುವುದಿಲ್ಲ."

"ತಪ್ಪು ಕ್ಷಮಿಸು–ಕ್ಷಮಿಸು."

ಎಂದು ಗೌರಿಯ ಕಡೆ ತಿರುಗಿದ. ಗೌರಿ ಬಂದು ಗಂಡನ ಪಕ್ಕದಲ್ಲಿ ಕುಳಿತಳು. ಅವಳ ಕೈ ಹಿಡಿದು

"ಗೌರಿ–ಕ್ಷಮಿಸು–ಕ್ಷಮಿಸು—ಪತಿವ್ರತೆ."

"ಹಾಗನ್ನಬೇಡಿ ಸ್ವಾಮಿ. ನೀವೇನೂ ತಪ್ಪು ಮಾಡಿಲ್ಲ."

ಸುಬ್ರಹ್ಮಣ್ಯನ ಮುಖದಲ್ಲಿ ತೃಪ್ತಿಯ ನಗೆಸೂಸಿತು. ತಾಯಿಯನ್ನು ಹತ್ತಿರ ಕರೆದು ಆಕೆಯ ಕೈಗಳನ್ನು ಹಿಡಿದು ಕಣ್ಣಿಗೊತ್ತಿಕೊಂಡು

"ಮಾತೃದೇವೊ ಭವ—ದೇವೋಭವ."

ಎನ್ನುತ್ತಾ ನಿಂಗವ್ವನನ್ನೂ ರವಿಯನ್ನೂ ಕಾಣಲು ಬಯಸಿದ.

ತೊಟ್ಟಿಯಲ್ಲಿ ಆಡುತ್ತಿದ್ದ ಮಗುವನ್ನೆತ್ತಿಕೊಂಡು ಬಂದು ನಿಂಗವ್ವ ಸುಬ್ರಹ್ಮಣ್ಯನ ಮುಂದೆ ಹಿಡಿದಳು. ಮಗನ ಕೆನ್ನೆಗೆ ಮುದ್ದಿಟ್ಟು

"ಚಿಕ್ಕಪ್ಪ ಕಾಪಾಡುತ್ತಾನೆ. ಭಯಪಡಬೇಡ."

ಎನ್ನುತ್ತಾ ನಿಂಗವ್ವನನ್ನು ನೋಡಿ

"ನೀನೂ ನನ್ನ ತಾಯಿ—ತಾಯಿ—ತಾಯಿ"

ಎನ್ನುತ್ತಲೇ ಶಂಕರನ ತೊಡೆಯ ಮೇಲೆ ಮುಖವಿಟ್ಟು ಮಲಗಿದ. ಶಂಕರ ಗಾಬರಿಯಾಗಿ

"ಅಣ್ಣಾ!" ಎಂದ.

ಗೌರಿ ಮೆಲ್ಲನೆ ಮುಖವೆತ್ತಿ ನೋಡಿದಳು.

ಪಾರ್ವತಮ್ಮನವರು 'ಅಯ್ಯೋ ಸುಬ್ಬೂ' ಎಂದು ಚೀರಿ ಬಿದ್ದು ಬಿಟ್ಟರು.

*

# ೪೮

ಮಳೆಗಾಲ ಆರಂಭವಾಗಿತ್ತು. ಊರನ್ನೇ ಕೊಚ್ಚಿಕೊಂಡು ಹೋಗುವಂತೆ ಧಡಧಡನೆ ಧಾರೆ ಸುರಿಯುತ್ತಿತ್ತು. ಶಂಕರ ಮನೆ ಬಿಟ್ಟು ಹೊರಗೆ ಕಾಲಿಡಲಾಗಲಿಲ್ಲ. ವೆರಾಂಡವಲ್ಲಿ ಒಬ್ಬನೇ ಕುಳಿತು, ಅದೇ ಟಪಾಲಿನಲ್ಲಿ ಬಂದಿದ್ದ ತನ್ನ 'ಮಾನವ ಧರ್ಮ' ನೋಡುತ್ತಿದ್ದ.

ಗೌರಿ ರಚ್ಚೆ ಹಿಡಿದಿದ್ದ ಮಗನನ್ನೆತ್ತಿಕೊಂಡು ಬಂದು ಶಂಕರನ ಮುಂದೆ ಕೂಡಿಸಿದಳು. ಶಂಕರ ಎತ್ತಿಕೊಂಡು ಕೈಗೆ ಪುಸ್ತಕ ಕೊಟ್ಟ ಕೂಡಲೆ ರವಿ ಸುಮ್ಮನಾದ. ಗೌರಿ ಅತ್ತೆಯನ್ನು ಕರೆದು

"ನೋಡಿ ಅತ್ತೆ. ಹೊತ್ತವಳು, ಹೆತ್ತವಳು ನಾನು ಹೆಚ್ಚಲ್ಲ ಈ ಘಟಿಂಗನಿಗೆ—ಇವನ ಚಿಕ್ಕಪ್ಪನೇ ಹೆಚ್ಚಾಯಿತಲ್ಲಾ!"

"ಏನು ಮಾಡಿದನಮ್ಮ ನಿನ್ನ ಮಗ?"

"ಊರು ಹೊಲಗೇರಿ ಒಂದು ಮಾಡುವ ಹಾಗೆ ರಚ್ಚೆ ಹಿಡಿದ. ನಾನು ರಮಿಸಿದೆ, ಆಟದ ಸಾಮಾನು ಕೊಟ್ಟೆ, ಬಾಯಿಗೆ ಸಕ್ಕರೆ ಹಾಕಿದೆ. ತೆಗೆದ ಬಾಯಿ ಮುಚ್ಚಲಿಲ್ಲ. ಚಿಕ್ಕಪ್ಪನ ಮುಂದೆ ಕೂಡಿಸಿದರೆ ಹೇಗೆ ನಲೀತಾನೆ ನೋಡಿ."

"ತಂದೆ ತಾಯಿಗಿಂತ ಗುರು ಹೆಚ್ಚಲ್ಲವೇ ಅತ್ತಿಗೆ. ರವಿಗೆ ನೀನು ತಾಯಿ-ನಾನು ಗುರು."

"ಒಳ್ಳೆಯ ಗುರು—ಒಳ್ಳೆಯ ಶಿಷ್ಯ. ಜತೆ ಚೆನ್ನಾಗಿದೆ. ಹಾಗಲಕಾಯಿಗೆ ಬೇವಿನಕಾಯಿ ಸೇರಿಸಿದ ಹಾಗೆ."

"ಎರಡೂ ಮೈಗೆ ಒಳ್ಳೆಯದು ಅತ್ತಿಗೆ."

"ಶಂಕರ, ಹುಡುಗಾಟಿಕೆ ಸಾಕು. ನಾನು ಕೇಳಿದುದಕ್ಕೆ ಏನು ಉತ್ತರ ಹೇಳುತ್ತೀ—ಅಮ್ಮನೂ ಇಲ್ಲೇ ಇದ್ದಾರೆ—ಅವರೆದುರಿಗೇ ಹೇಳಿಬಿಡು."

ನಿಂಗವ್ವನೂ ಬಂದು ವೆರಾಂಡದ ಒಂದು ಮೂಲೆಯಲ್ಲಿ ಕುಳಿತಳು. ಶಂಕರ ಅವಳ ಕಡೆ ತಿರುಗಿ

"ಅತ್ತಿಗೆ ಹೇಳಿದ್ದು ಕೇಳಿದೆಯಾ ನಿಂಗಜ್ಜಿ?"

"ಕೇಳಿದ್ನಪ್ಪಾ—ಅದ್ಕೇ ಇಲ್ಲಿ ಬಂದು ಕುಂತೆ."

"ಓಹೋ! ಎಲ್ಲರೂ ಮಸಲತ್ತು ಮಾಡಿಕೊಂಡೇ ಬಂದಿರುವಿರೊ?"

"ಸಂಕ್ರಪ್ಪ—ಅವ್ವಾವರೆದುರಿನಲ್ಲಿ ಮಂಗಳ ಕಾರ್ಯ ಆಗಿ ಓಗ್ಲಪ್ಪ-ಗೌರವ್ವನೂ ಕೊರಗ್ತವ್ಳೆ."

"ಅತ್ತಿಗೆ, ಇದೊಂದು ವಿಷಯ ಬಿಟ್ಟು ನೀವೇನು ಹೇಳಿದರೂ ಕೇಳಲು ನಾನು ಸಿದ್ಧನಾಗಿದ್ದೇನೆ."

"ಉಂಟೇನೋ ಶಂಕರ. ನಮ್ಮ ಮಾತು ನಿನಗೆ ಪಥ್ಯವಾಗ ದಿದ್ದರೆ ನಿನ್ನ ಸ್ನೇಹಿತ ಶ್ರೀಧರನ್ನ, ಗುರುಗಳು ಶಾಸ್ತ್ರಿಗಳನ್ನೇ ಕೇಳಿ ನೋಡು. ಹಟ ಬಿಡಪ್ಪ."

"ಅತ್ತಿಗೆ, ನಾನಾಡುವ ಮಾತು ಮನಸ್ಸಿಟ್ಟು ಕೇಳುವೆಯಾ?"

"ಹೇಳಪ್ಪಾ."

"ನಿಮ್ಮನ್ನು ಬಿಟ್ಟು ಹೋದೆನಲ್ಲಾ ಆ ರಾತ್ರಿ—ಅಮ್ಮ, ನಿಂಗಜ್ಜಿ ಇಬ್ಬರೂ ಮಲಗಿ ನಿದ್ರಿಸುತ್ತಿದ್ದರು. ನಾನು ಅಮ್ಮನ ರೂಮಿನ ಬಳಿ ಹೋಗಿ ಇಣಿಕಿ ನೋಡಿದೆ. ಅವಳ ಪಾದಮುಟ್ಟಬೇಕೆಂದು ಮನಸ್ಸು ತವಕ ಪಡುತ್ತಿತ್ತು—ಎಲ್ಲಿ ಎಚ್ಚರಗೊಳ್ಳುವಳೋ ಎಂಬ ಭಯ—ಕೈಮುಗಿದು ಮುಂದೆ ನಡೆದೆ. ನಿಂಗಜ್ಜಿಯೂ ಮಲಗಿದ್ದಳು. ಅವಳಿಗೂ ದೂರ ನಿಂತೇ ಕೈಮುಗಿದೆ. ಮನೆ ಬಿಟ್ಟು ಮುನ್ನಡೆದೆ—ನನ್ನ ಮೂವರು ತಾಯಿ ದೇವಿಯರನ್ನೂ ಬಿಟ್ಟು ಹೋಗುತ್ತಿದ್ದೆ. ದುಃಖ ಉಕ್ಕಿ ಬರುತ್ತಿತ್ತು. ಆದರೆ ಆಗ ಬುದ್ಧಿ ತಿಳಿಯಾಗಿತ್ತು. ಆ ಹೊತ್ತಿನಲ್ಲಿ ನಾನು ಅನುಭವಿಸಿದ ವಿಚಿತ್ರ ಶಾಂತಿಯನ್ನು ಮತ್ತೆ ಅನುಭವಿಸಲಾಗಿಲ್ಲ—ಆಗ ಯಾವುದೋ ವಾಣಿ —ನನ್ನ ಅಂತರಂಗದಿಂದ 'ಹೆಣ್ಣು ಗಂಡಿನ ಸಂಬಂಧವನ್ನೇ ನಿಮ್ಮ ಅಣ್ಣ ಕೀಳುಮಟ್ಟಕ್ಕೆ ತೆಗೆದುಕೊಂಡು ಹೋದ—ನೀನು ಅದನ್ನು ಮರೆತು ಬಿಡು—ಇನ್ನು ನಿನ್ನ ಭಾಗಕ್ಕೆ ಪ್ರತಿಯೊಬ್ಬ ಸ್ತ್ರೀಯೂ ಒಬ್ಬ ಗೌರಮ್ಮ, ಒಬ್ಬ ಪಾರ್ವತಮ್ಮ, ಒಬ್ಬ ನಿಂಗಮ್ಮ' ಎಂದು ಮೊಳಗಿತು. ನಾನು ವಿನಮ್ರನಾಗಿ 'ತಥಾಸ್ತು' ಎಂದೆ. ಎಲ್ಲಾ ಸ್ತ್ರೀಯರನ್ನೂ ನಾನು ಮಾತೃ ಸ್ಥಾನದಲ್ಲಿಟ್ಟಿರುವಾಗ ಯಾರನ್ನು ಮದುವೆಯಾಗಲಿ ಅತ್ತಿಗೆ?"

ಗೌರಿ ಮರುಮಾತನಾಡದೆ ಒಳಗೆ ಹೊರಟು ಹೋದಳು.

ಪಾರ್ವತಮ್ಮ, ನಿಂಗವ್ವ ಅವಳನ್ನೇ ಹಿಂಬಾಲಿಸಿದರು.

ರವಿ, ಶಂಕರನ ಪುಸ್ತಕ ಹರಿದು ಚಿಂದಿ ಚಿಂದಿ ಮಾಡಿ ನೋಡುತಾ ಹಿಗ್ಗುತ್ತಿದ್ದ. ಶಂಕರ ಅವನ ಮೇಲೆ ಸುಳ್ಳು ಕೋಪ ನಟಿಸುತ್ತಾ "ನನ್ನ ಮೊದಲನೆಯ ಮಹಾಗ್ರಂಥ—ಹರಿದು ಬಿಟ್ಟೆಯಲ್ಲೋ ತುಂಟ" ಎಂದ

ರವಿ ಚಿಕ್ಕಪ್ಪನ ಮುಖನೋಡಿ ಕಿಲಕಿಲನೆ ನಕ್ಕ.

ಶಂಕರ ರವಿಯನ್ನೆತ್ತಿಕೊಂಡು "ನಿನ್ನ ನಗುವಿನಲ್ಲಿ ಎಲ್ಲ ಧರ್ಮವು ಇದೆ ನನ್ನ ಕಂದ–ನನ್ನ ದೊರೆ"

ಎಂದು ಮನದಣಿಯ ಮುದ್ದಾಡಿದ.

## ಶೀಘ್ರದಲ್ಲಿಯೇ ಹೊರಬೀಳುವ ಇತರ ಪುಸ್ತಕಗಳು

**ಪ್ರತಿ ಪುಸ್ತಕದ ಬೆಲೆ: ರೂ. ೧—೮—೦**

೩೦೦-೩೫೦ ಪುಟಗಳು

### ಕಾದಂಬರಿ

ಬನಶಂಕರಿ — ನಿರಂಜನ

ಹಿಂದಿರುಗಿ ಬರಲಿಲ್ಲ — ಕೋ. ಚನ್ನಬಸಪ್ಪ

ಪುನರ್ಮಿಲನ — ರಾ. ವೆಂ. ಶ್ರೀನಿವಾಸ

ತಿರುಗುಬಾಣ — ತ. ರಾ. ಸು.

ಅಪರಾಜಿತೆ — ಅ. ನ. ಕೃ.

●

### ತತ್ತ್ವಶಾಸ್ತ್ರ

ಭಾರತೀಯ ದರ್ಶನಗಳು — ಎಂ. ಯಾಮುನಾಚಾರ್ಯ

●

### ಸಾಹಿತ್ಯ

ಕನ್ನಡ ಸಾಹಿತ್ಯ ಚರಿತ್ರೆಯ ಕೈಪಿಡಿ — ಎಸ್. ವಿ. ಪರಮೇಶ್ವರಭಟ್ಟ

ಜೈಮಿನಿ ಭಾರತ — ಎಚ್. ಎಂ. ಶಂಕರನಾರಾಯಣರಾವ್

---

**ಪ್ರಕಾಶಕರು : ವಿದ್ಯಾನಿಧಿ ಪ್ರಕಾಶನ : ಮೈಸೂರು**